ಭಾಗ-6

ತತ್ವಪ್ರಕಾಶಿಕಾ

ಸತ್ತರ್ಕದೀಪಾವಳಿ ತತ್ವಪ್ರದೀಪ

# ಭಾವದೀಪ







ಅಧ್ಯಕ್ಷರು :

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿ ಆಚಾರ್ಯ
ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ ಶ್ರೀಮನ್‌ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

## ಭಾಗ - ೬

ಶ್ರೀಪದ್ಮನಾಭತೀರ್ಥಮುನಿ ವಿರಚಿತ
**ಸತ್ತರ್ಕದೀಪಾವಳಿ**

ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತ
**ತತ್ವಪ್ರದೀಪ**

ಶ್ರೀಜಯತೀರ್ಥಮುನಿ ವಿರಚಿತ

## ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

॥

'ಭಾವದೀಪ' : ಮಂತ್ರಾಲಯ ಕ್ಷೇತ್ರದಲ್ಲಿ ಮನ್ಮಥ ॥ ಫಾಲ್ಗುಣ ಬಹುಳ ॥ ಷಷ್ಠಿ ದಿನಾಂಕ : ೨೯-೦೩-೨೦೧೬ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ಮೂರನೆಯ ಮಹಾಸಮಾರಾಧನೆಯ ಉತ್ತರಾರಾಧನೆಯ ಶುಭಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | | |
|---|---|---|
| ಪ್ರಕಾಶನ | : | ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : | ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.<br>ದೂರವಾಣಿ : 914149120 |
| ಪ್ರಥಮಮುದ್ರಣ | : | 2015 |
| ಪುಟಗಳು | : | 704 |
| ಬೆಲೆ | : | 600 ರೂ |
| ಪ್ರತಿಗಳು | : | 1000 |







ಅಕ್ಷರಜೋಡಣೆ :

ಶ್ರೀ ಬೆಮ್ಮತ್ತಿ ಶ್ರೀನಿವಾಸ
ಶ್ರೀಮತಿ ಎಸ್. ನಾಗಲತಾ

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

## Vol. - 6

**SRI PADMANABHATIRTHAMUNI'S**
**SATTARKADIPAVALI**

**SRIJAYATIRTHAMUNI'S**
**TATVAPRAKAASHIKAA**

**SRI TRIVIKRMAPANDITAACHARYA'S**
**TATVAPRADIPA**

# BHAVADIPA

**Sri Vedavyasa's Brahmasutra,**
**Sri Madhvacharya's Bhashya,**
**Teekas - Sattarkadipawali, Tatvapradipa,**
**Tatvaprakaashikaa**

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries & overall critisism**

**Published by :**

**Sri Gurusarvabhouma Samshodhana Mandira,**
Jagadguru Srimanmadhvacharya Mula Mahasamsthana,
Sri Raghavendraswamy Mutt, Mantralayam - 518 345 A.P.

'BHAVADIPA':25-11-2015HHSriSriSubhudendraThirtasripadahassubmittedthis 6th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya,

Bangalore. Ph : 9141495120

First Edition : 2015

Price : Rs. 600

Copies : 1000





Type set :

Smt. S. Nagalatha, Bangalore.
Sri Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ|| ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :

ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvaprakaashikaa**

**Tatvapradipa**

# BHAVADIPA

******

**President:**

**HH Sri Subhudhendratirtha Sripadaru**

**PeeTadhipati of Sri Raghavendraswamy Mutt,**
**Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

ಆರನೆಯ

# ವಾಙ್ಮಯ-ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ ಅಂತರ್ಯಾಮಿಗಳಾದ ಶ್ರೀಮನ್ ಮೂಲರಾಮಚಂದ್ರದೇವರಿಗೆ ಈ ಕೃತಿಯನ್ನು ಆರನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿದ್ದಾರೆ.

# ಪರಮಪೂಜ್ಯ ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಜ್ಞಾನದೀಕ್ಷೆ

ಈಕೃತಿಯಮುದ್ರಣಕ್ಕೆತಗಲುವದುಬಾರಿವೆಚ್ಚವನ್ನುತಮ್ಮಪಾದಕಾಣಿಕೆಯಿಂದಲೇ ನಿರ್ವಹಿಸಿದ ಪರಮಪೂಜ್ಯ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ಈ ಕೃತಿಯ ಆಮೂಲಾಗ್ರ ಪರಿಪೂರ್ಣತೆಗೂ ಕೂಡ ಮುಖ್ಯಕಾರಣರಾಗಿದ್ದಾರೆ. ಮೊದಲನೆಯ ಸಂಪುಟದಲ್ಲಿ ಭಾವದೀಪ ಅನುವಾದವು ವಿಶೇಷವಿಚಾರದೊಂದಿಗೆ ಮುದ್ರಣವಾಯಿತು. ಎರಡನೆಯ ಸಂಪುಟದಲ್ಲಿ ಶ್ರೀಪಾದಂಗಳವರು ಸತ್ತರ್ಕದೀಪಾವಳಿ ಹಾಗೂ ತತ್ವಪ್ರದೀಪಗಳ ಅನುವಾದವನ್ನು ಸೇರಿಸುವಂತೆ ಆದೇಶಿಸಿದರು. ಮೂರನೆಯ ಸಂಪುಟದಲ್ಲಿ ಮೂರು ಟೀಕೆಗಳ ಜೊತೆ ಭಾವದೀಪದ ಅನುವಾದವು ಅಚ್ಚುಕಟ್ಟಾಗಿ ಮುದ್ರಣವಾಯಿತು. ನಾಕು ಹಾಗೂ ಐದನೆಯ ಸಂಪುಟದಲ್ಲಿ ಮೂರು ಟೀಕೆಗಳ ಜೊತೆ ಭಾವದೀಪದ ಅನುವಾದ ಮಾತ್ರವಲ್ಲದೇ ತತ್ವಪ್ರಕಾಶಿಕೆಗೆ ಸಂಬಂಧಪಟ್ಟ ಅನೇಕ ಟಿಪ್ಪಣಿಗಳ ವಿಶೇಷ ವಿಚಾರ ಹಾಗೂ ವೇದ-ಉಪನಿಷತ್ತುಗಳ ಸಂಪೂರ್ಣವ್ಯಾಖ್ಯಾನವು ಮುದ್ರಣವಾಯಿತು. ಪ್ರಕೃತ ಆರನೆಯ ಸಂಪುಟದಲ್ಲಿ ಅನೇಕ ವಿಮರ್ಶೆಗಳನ್ನು ನೀಡಲಾಗಿದೆ, ಹೀಗೆ ಹಂತಹಂತವಾಗಿ ಭಾವದೀಪದ ಈ ಯೋಜನೆಯು ಉತ್ತಮಗುಣಮಟ್ಟವನ್ನು ಹೊಂದುತ್ತಿದೆ. ಈ ಗುಣಮಟ್ಟತೆಗೆ ಮುಖ್ಯಕಾರಣರು ಪರಮಪೂಜ್ಯ॥ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರೇ ಆಗಿದ್ದಾರೆ. ಆದ್ದರಿಂದ ಶ್ರೀಪಾದಂಗಳವರು ಈ ಕೃತಿಗೆ ಮುಖ್ಯಮಾರ್ಗದರ್ಶಕರು, ಮುಖ್ಯಸಂಪಾದಕರು, ಪರಿಪೂರ್ಣ ಪರಿಕಲ್ಪನೆಯುಳ್ಳವರೂ ಆಗಿರುತ್ತಾರೆ.

ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಕಾಮಧೇನು ಕಲ್ಪವೃಕ್ಷದಂತೆ ಈ ಕೃತಿಯನ್ನು ನೀಡುತ್ತಿರುವ ಶ್ರೀಪಾದಂಗಳವರ ಉದಾರತೆ, ವಿಶಾಲಮನೋಭಾವನೆ ಹಾಗೂ ಜ್ಞಾನದೀಕ್ಷೆ ಈ ಎಲ್ಲಾ ಗುಣಗಳಿಗೆ ಎಂದೆಂದೂ ಶರಣೆನ್ನೋಣ.

– ಸಂಪಾದಕ

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಮಂತ್ರಾಲಯ ಪ್ರಭುಗಳಾದ ಶ್ರೀಮದ್‌ರಾಘವೇಂದ್ರತೀರ್ಥಗುರುಸಾರ್ವಭೌಮರ ಇಚ್ಛೆಯಂತೆ ಭಾವದೀಪ ಯೋಜನೆಯು ನಿರಾತಂಕವಾಗಿ ಸಾಗುತ್ತಿದೆ. ಪ್ರಕೃತ ಆರನೆಯ ಸಂಪುಟವು ಪ್ರಕಾಶನಗೊಳ್ಳುತ್ತಿರುವುದು ನಮಗೆ ಅತ್ಯಂತ ಮುದ ತಂದಿದೆ. ಇಲ್ಲಿಯತನಕ ಮುದ್ರಿತವಾದ ಸಂಪುಟಗಳನ್ನು ಜಿಜ್ಞಾಸುಗಳು ಬಹಳ ಮೆಚ್ಚಿದ್ದಾರೆ. ಮತ್ತಷ್ಟು ವ್ಯಾಪಕವಾಗಿ ಇದರ ಉಪಯೋಗ ಸಜ್ಜನರಿಗೆ ತಲುಪಬೇಕೆಂಬುದೇ ನಮ್ಮ ಹೆಬ್ಬಯಕೆ.

ಒಟ್ಟು ಈ ಸಂಪುಟದಲ್ಲಿರುವ ಆರು ಅಧಿಕರಣಗಳಿಂದ ಆರು ಪ್ರಮೇಯಗಳನ್ನು ಅವಶ್ಯವಾಗಿ ನಾವು ತಿಳಿದು ಅನುಷ್ಠಾನಕ್ಕೆ ತಂದುಕೊಳ್ಳಬೇಕು.

ಭೂಮಾಧಿಕರಣ - ನಾಮಾಭಿಮಾನಿಯಾದ ಆಶಾ ಎಂಬ ದೇವತೆಯಿಂದ ಪ್ರಾರಂಭಿಸಿ ವಾಗಭಿಮಾನಿಯಾದ ಭಾರತಿದೇವಿಯ ತನಕ ತಾರತಮ್ಯವನ್ನು ತಿಳಿಯಬೇಕು. ಅವಳಿಗಿಂತಲೂ ಮುಖ್ಯಪ್ರಾಣದೇವರು ಉತ್ತಮರಾಗಿದ್ದಾರೆ ಎಂದು ತಿಳಿದು ಅವರಿಗಿಂತಲೂ ಪರಮೋತ್ತಮನಾದವನು ಮಹಾವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು. ಈ ತಾರತಮ್ಯ ಜ್ಞಾನವು ಬಹಳ ಪ್ರಧಾನವಾದದ್ದು. ಮೋಕ್ಷದ ಮೊದಲ ಮೆಟ್ಟಲೇ ಇದು. ಈ ತಾರತಮ್ಯವನ್ನು ಅರಿಯ ಬೇಕೆಂದರೆ ಭೂಮಾಧಿಕರಣವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಬೇಕು. ಆಗ ಮಾತ್ರ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ತಾರತಮ್ಯದ ಅರಿವು ಹಾಗೂ ವಿಷ್ಣುಸರ್ವೋತ್ತಮತ್ವದ ದಾರ್ಢ್ಯ ಬರಲು ಸಾಧ್ಯ.

ಅಕ್ಷರಾಧಿಕರಣ - ಇದರಲ್ಲಿ ಅಕ್ಷರಳೆನಿಸಿದ ಲಕ್ಷ್ಮೀದೇವಿಯ ತನಕ ಸಕಲ ವಸ್ತುಗಳನ್ನು ಧರಿಸಿದವನು ಮಹಾವಿಷ್ಣುವೆಂದು ಸಮರ್ಥಿಸಲಾಗಿದೆ. ಆಜ್ಞೆಮಾತ್ರದಿಂದಲೇ ಸಕಲವಸ್ತುಗಳನ್ನು ಧರಿಸಿದವನು ಮಹಾವಿಷ್ಣುವೇ ಆಗಿರುವುದರಿಂದ ಪ್ರತಿನಿತ್ಯ ಪ್ರತಿಕ್ಷಣ ನಮ್ಮನ್ನು ಧರಿಸಿ ಸಲಹುತ್ತಿರುವ ಭಗವಂತನನ್ನು ನಾವು ಅಕ್ಷರ ನಾಮಕವಾಗಿ ಉಪಾಸನೆಗೈಯಬೇಕು. ನಮ್ಮೆಲ್ಲರ ಜೀವನವನ್ನು ಧರಿಸಿದ ಆ ಮಹಾವಿಷ್ಣುವಿನ ಸರ್ವಧಾರಕತ್ವಗುಣವನ್ನು ಅರಿಯಬೇಕೆಂದರೆ ಅಕ್ಷರಾಧಿಕರಣ ಅಧ್ಯಯನವನ್ನು ಮಾಡಬೇಕು.

ಸದಧಿಕರಣ - ಪ್ರಳಯಕಾಲದಲ್ಲಿ ಯಾರೂ ಇಲ್ಲದಿದ್ದಾಗ ಏಕೈಕನಾಗಿ ನೆಲೆಸಿದವನು ಮಹಾವಿಷ್ಣು. 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ ಸತ್ ಎಂಬ ಪದವು ಇಂಥ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ. ಜ್ಞಾನ ಕ್ರಿಯೆ ಮೊದಲಾದ ಗುಣಗಳಿಂದ ಕೂಡಿದವನಾಗಿ ಪ್ರಳಯಕಾಲದಲ್ಲಿ ನೆಲೆಸಿರುವುದರಿಂದ ಅವನೊಬ್ಬನೇ ಸರ್ವಶ್ರೇಷ್ಠ ಎಂಬುದು ಈ ಅಧಿಕರಣದಿಂದ ನಿರ್ಣಯವಾಗುತ್ತದೆ. ಅತ್ಯವಶ್ಯವಾದ ಇದರ ಉಪಾಸನೆಗಾಗಿ ಸದಧಿಕರಣವನ್ನೇ ಅಧ್ಯಯನ ಮಾಡಬೇಕು.

ದಹರಾಧಿಕರಣ - ದೇಹದಲ್ಲಿ ೭೨೦೦೦ ಪ್ರಧಾನ ನಾಡಿಗಳಿವೆ. ಅದರಲ್ಲಿ ಸುಷುಮ್ನಾನಾಡಿ ಬಹುಮುಖ್ಯವಾದದ್ದು. ದೇಹ ಮಧ್ಯದಲ್ಲಿರುವ ಸುಷುಮ್ನಾನಾಡಿಯ ಹೃದಯ ಪ್ರದೇಶದಲ್ಲಿ ಕಮಲವಿದೆ. ಅದರಲ್ಲಿ ಇರುವುದು ಜಡವಾದ ಆಕಾಶವಲ್ಲ ಮಹಾವಿಷ್ಣುವೇ ಆಗಿದ್ದಾನೆ. ಪ್ರತಿನಿತ್ಯ ಪ್ರತಿಕ್ಷಣ ಈ ಹೃದಯಪದ್ಮದಲ್ಲಿರುವ ಬಿಂಬರೂಪಿಯಾದ ಭಗವಂತನನ್ನು ಉಪಾಸನೆ ಮಾಡಬೇಕೆಂಬ ಅರಿವು ಮೂಡಬೇಕೆಂದರೆ ದಹರಾಧಿಕರಣವನ್ನು ಅಧ್ಯಯನ ಮಾಡಬೇಕು. ದಹರ ಶಬ್ದಕ್ಕೆ ಹೃದಯದಲ್ಲಿರುವ ಆಕಾಶ ಎಂದರ್ಥ. ಇದರಲ್ಲಿರುವ ವಹ್ನಿಮಂಡಲದಲ್ಲಿ ಪರಮಾತ್ಮನು ಸನ್ನಿಹಿತನಾಗಿದ್ದಾನೆ.

ಆನುಕೃತ್ಯಧಿಕರಣ - ಆನುಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಿದ್ದಾರೆ. ಇದರ ಮುಖ್ಯ ಉದ್ದೇಶ ಜ್ಞಾನಕ್ಕೋಸ್ಕರ ಪರಮಾತ್ಮನನ್ನೇ ನಾವು ಮೊರೆ ಹೋಗಬೇಕು. ಪರಮಾತ್ಮನನ್ನು ಬಿಟ್ಟು ಬೇರೆ ಯಾರನ್ನು ಕೂಡ ಪ್ರಾರ್ಥನೆ ಮಾಡಬಾರದು. ಅನಿರ್ದೇಶ್ಯಸುಖಸ್ವರೂಪನಾದವನು ಪರಮಾತ್ಮನೇ ಆಗಿರುವುದರಿಂದ ಅನಂತ ಸುಖದ ಪಾತ್ರವೂ ಕೂಡ ಅವನೇ ಆಗಿದ್ದಾನೆ. ಆದ್ದರಿಂದ ಮೋಕ್ಷಕ್ಕಾಗಿ ನಾವು ಪರಮಾತ್ಮನನ್ನೇ ಶರಣೆನ್ನಬೇಕು. ಅದಕ್ಕಾಗಿ ಆನುಕೃತ್ಯಧಿಕರಣವನ್ನು ಅಧ್ಯಯನ ಮಾಡಬೇಕು.

ವಾಮನಾಧಿಕರಣ - ರುದ್ರನಲ್ಲಿ ಪ್ರಸಿದ್ಧವಾದ ಈಶಾನ ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಪ್ರತಿಪಾದನೆ ಮಾಡುವುದು ಈ ಅಧಿಕರಣದ ಉದ್ದೇಶವಾಗಿದ್ದರೂ ಕೂಡ ಹೃದಯದಲ್ಲಿ ಅವರವರ ದೇಹದ ಅಂಗುಷ್ಠಪರಿಮಾಣವಿರುವಷ್ಟು ಪ್ರದೇಶವಿರುತ್ತದೆ. ಅಲ್ಲಿ ಪರಮಾತ್ಮನು ವ್ಯಾಪ್ತನಾಗಿದ್ದಾನೆ. ಹೃದಯಸ್ಥ ಭಗವದ್‌ರೂಪದ ಉಪಾಸನೆಯನ್ನು ಹೇಳುವ ಮೂಲಕ ಈಶಾನ ಶಬ್ದದ ಸಮನ್ವಯವನ್ನು ಈ ಅಧಿಕರಣವು ಮಾಡುತ್ತಿದೆ. ಇದರಿಂದ ಅಂಗುಷ್ಠ ಇರುವವರು ಮಾತ್ರ ಭಗವದುಪಾಸನೆಗೆ ಅರ್ಹರಾಗುತ್ತಾರೆ ಇತ್ಯಾದಿ ಪ್ರಮೇಯಗಳನ್ನು ಈ ಅಧಿಕರಣವು ನಿರೂಪಣೆಮಾಡುತ್ತಿದೆ. ಹೀಗೆ ತಾರತಮ್ಯ, ಸರ್ವಧಾರಕತ್ವ, ಪ್ರಳಯಕಾಲಸ್ಥಿತತ್ವ, ಹೃದಯಪದ್ಮಸ್ಥಿತತ್ವ, ಆನುಕೂಲ್ಯೇನ ಗೃಹ್ಯಮಾಣತ್ವ, ಹೃದಯೇ ಅಂಗುಷ್ಠ ಪರಿಮಾಣೇನಸ್ಥಿತತ್ವ ಇತ್ಯಾದಿ ಆರು ಪ್ರಮೇಯಗಳನ್ನು ಈ ಆರು ಅಧಿಕರಣಗಳಿಂದ ಮುಖ್ಯವಾಗಿ ತಿಳಿಯಬೇಕು. ಇನ್ನೂ ಅನೇಕ ಪ್ರಮೇಯಗಳು ಈ ಅಧಿಕರಣಗಳಲ್ಲಿ ಇರುತ್ತವೆ.

ಮಂತ್ರಾಲಯಪ್ರಭುಗಳು ಈ ಸಂಪುಟದಲ್ಲಿರುವ ಅನೇಕ ಆಧಿಕರಣಗಳಲ್ಲಿ ಪಾಠಾಂತರಗಳ ಬಗ್ಗೆ ಹಾಗೂ ತತ್ವಪ್ರದೀಪದಲ್ಲಿರುವ ಅನೇಕ ವಿಶೇಷ ವಿಚಾರಗಳ ಬಗ್ಗೆ ಅದ್ಭುತ ವಿಷಯಗಳನ್ನು ತಿಳಿಸಿದ್ದಾರೆ. ಅಧ್ಯಯನ ಮಾಡುವವರು ಅದನ್ನು ಗಮನಿಸಿ ಶ್ರೀಮದ್‌ರಾಘವೇಂದ್ರತೀರ್ಥಗುರುಸಾರ್ವಭೌಮರ ಅನುಗ್ರಹಕ್ಕೆ ಪಾತ್ರರಾಗಬೇಕು.

ಪ್ರತಿಯೊಂದು ಸಂಪುಟದಂತೆ ಈ ಸಂಪುಟದಲ್ಲಿಯೂ ಕೂಡ ಶ್ರಮವಹಿಸಿ ಅನುವಾದ ಮಾಡಿದ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥ-ಗುರ್ವಂತರ್ಗತ-ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ - ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಕೃಷ್ಣಾರ್ಪಣಮಸ್ತು.

ಇತಿ ನಾರಾಯಣಸ್ಮರಣೆಗಳು.

# Brahmasutra Bhashya
# With
# Select Commentaries including
# Bhavadipa of Sri Raghavendra Tirtha

*By*

**Vachaspati Dr. V. R. Panchamukhi**

At the outset we express our Dandapranams with gratitude to His Holiness Sri Sri Subudhendra Thirtharau for providing Anugraha Vachana to this Sixth Volume. This volume consists of six adhikaranas of which Bhoomadhikarna is the First one. Bhoomadhikarna consists of two sutras. Bhooma is explained to be in the form "complete bliss".

**"यो वै भूमा तत्सुखम्"**

The Chandogya upanishad explains the gradation from Naamabhimani Usha to Bharathi Devi. At the end, it declares that Mahavishnu is the Bhooma and He is the supreme. The first sutra ascertains the supremacy of the Lord Vishnu. The second sutra **"धर्मोपपत्तेश्च"** describes that Lord Vishnu has the attributes of omninpresence (**सर्वगतत्व**) independence (**स्वतन्त्रत्व**) etc., & hence he is the unique one to be known as "Bhooma".

Next adhikarna is Akshara Adikarna. This consists of three sutras. The word Akshara conveys Goddess Lakshmi. But Bruhadranyaka states that

''एतस्मिन् खल्वक्षरे गार्गी आकाश ओतश्च प्रोतश्च''

the supreme God is the base for all matters upto Lakshmi Devi.

Threfore, the first sutra establishes that the word **अक्षर** conveys only to Lord Vishnu.

The Second sutra establishes that Vishnu is the sustainer of every object. This sutra explains the peculiar attributes of Lord Vishnu.

The third sutra says that since the attributes of other objects are not conveyed by the Shruthi, they are not denoted by the word Akshara.

Next Adhikarna is Sadadhikarana. This consists of one Sutra i.e., **''ईक्षतिकर्मव्यपदेशात्सः''**.

''सदेव सोम्येदमग्र आसीत् तदैक्षत तत्तेजोऽसृजत''

(बृहदारण्यक उपनिषत्)

Bruhadarnyaka and Chandogya upanishads state that only the object 'Sat' (**सत्**) was present at the begining of creation. Knowledge is a necessity for a meaningful and concerte creation. This is not possible by an inert prakruthi. Hence Vishnu is denoted by the word **सत्**

Next Adhikarna is Daharadhikarana. It consists of eight sutras. **"अथ यदिदमस्मिन्"** & other Riks of Chandogya Upanishad say that one who is **"द्युम्वाद्यायतनम्"** himself is present in the **'दहराकाश'** of the **हृदयकमल**. Since the attributes such as **अपहतपाप्मत्व** are unique for Vishnu, Adhikarana deals with only Lord Vishnu is reachable in the status of deep sleep. **सर्वधारकत्व, अपहतपाप्मत्व, सुप्तप्राप्यत्व** and **अरण्याश्रयत्व** etc are also the peculiar characters of Mahavishnu in the opinion of second & third sutras.

**दहं विपाप्मं परवेश्मभूतं यत्पुण्डरीकं पुरमध्यसंस्थम् ।**
**तत्रापि दहरं गगनं विशोकः तस्मिन् यदन्तस्तदुपासितव्यम् ।।**

**(तैत्तिरेयोपनिषत्)**

The above verse of taitareyopanishad states that only Vishnu resides in the **हृदयकमल**. Though it is popular in the world that jeeva resides in the **हृदयकमल**, the attributes such as **अपहतपाप्मत्व, सत्यकामत्व, पापलेपाभाव** are not appropriate to Jeeva. Hence, Maha Vishnu is the one who resides in **दहराकाश**.

Fourth, fifth, sixth and seventh sutras also establish the same.

The last sutra of this adhikarana clearly suggests to meditate Vishnu in **हृदयाकाश**.

Next adhikarna is **अनुकृत्यधिकरण**. It consists of two sutras. Linga Samanvaya of **"अनुकूल्येन गृह्यमाणत्व"** is done here. This suggests that Lord Vishnu should be prayed for seeking knowledge.

The Last Adhikarna in the present volume is **वामनाधिकरण ईशान** mentioned in the sentence of Kathaka Upanishad **"इशानो भूत भव्यस्य"**

is none other than Mahavishnu himself. This is justified from that next sentence **"मध्ये वामनमासीनम्"** in which the word "Vamana" asserts it. Mahavishnu is said to be in the size of a person's thumb in **हृदयाकाश**. Though, animlas have no thumb, it doesn't matter as humans are the authority for the measurement of thumb and it is the justification of this adhikarna.

The author of this volume, Vidwan Sri Bemmatti Venkateshacharya gives the critical analysis at various points. For example, in the sentence from **वामनाधिकरण**

**"श्रुतिर्लिङ्गं समाख्या च वाक्यं प्रकरणं तथा । पूर्वं पूर्वं बलीयः स्यादेवमागमनिर्णयः"**

The word Samakhya is considered as third part & the smallest among all. This has been critically analysed by the author. Sri Madhavaacharya himself has stated in his work that smakaya is inferior to Prakarana. Thereafter, in accordance to **"पूर्वं पूर्वं बलीयः स्यात्"** former one's are considered to be superior to the later ones.

In Bhoomadhikarna, Srimadacharya quotes as **एतस्मिन्नु** instead of **एतस्मिन्**

**"एतस्मिन्नु खल्वक्षरे गार्गि आकाशः"**

This clearly shows that Sri Acharya quotes parallel interpretation from another shakha. This new concept is disussed in this volume by the author. In the Bhashya vakya **"यस्मिन् इदं सञ्च वि चैधि सर्वं यस्मिन् देवा अधिविश्वे निषेधुः"**, Bemmatti acharya opines that the

word सर्वं need not be recognised. However this reading is prevalent everywhere. Since the aspect of Sarvam is not discussed in Tika & Prachina Kosha, it is not justifiable in not considering its value. According to the author, this aspect needs discussion.

He justifies the point of studying Upanaishads before Brahmasutras at many instances in his work I am of the opinion that such analytical work is necessary to create enthusiasm and thinking among the students. Mere translation is not much advantageous in analysing such issues.

Sri Subhudhendra Swamiji is to be venerated highly. Though he is entangled in many mutt affairs, he has never neglected the Jnanakarya. I salute the lotus feet of Sri Swamiji for nurturing, estbalishing & propagating knowledge among the inquisitive public.

I sincerely render my pranams at the feet of Sri Harivayu Gurus and pray to bestow their blessings on all who participated in this Janakarya.

**Vachaspati Dr. V. R. Panchamukhi**
Chancellor, Sri GuruSarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

# ಆರನೆಯ ಸಂಪುಟ

# ಓದುವ ಮೊದಲು

ಹೊರಜಗತ್ತಿನ ಕದ ಮುಚ್ಚಿದೆ ಒಳಜಗತ್ತಿನ ಕದ ತೆರೆದಿದೆ. ಇಷ್ಟು ದಿವಸ ಹೊರಜಗತ್ತಿನ ಬೆಳಕಿನ ನೋಟ. ಇಂದು ಒಳಜಗತ್ತಿನ ಬೆಳಕಿನ ನೋಟ. ಇಷ್ಟು ದಿವಸ ಜಗತ್ತು ಮಲಗಿದರೆ ನನಗೆ ರಾತ್ರಿ; ಜಗತ್ತು ಎದ್ದರೆ ಹಗಲು. ಇಂದು ಜಗತ್ತು ಮಲಗಿದಾಗ ನನಗೆ ಹಗಲು. ಜಗತ್ತು ಎಚ್ಚರವಾದಾಗ ರಾತ್ರಿ.

XVIII

''ಹರಿಯುವ ನೀರಿಗೆ ದೊಣ್ಣೆರಾಯನ ಅಪ್ಪಣೆ ಏಕೆ?'' ಎಂಬ ಗಾದೆಯ ಮಾತಿನಂತೆ ಬೇಕೆಂದರೂ ಬೇಡವೆಂದರೂ ಪ್ರತಿನಿತ್ಯ ಹೊರಜಗತ್ತಿನಲ್ಲಿ ಸೂರ್ಯ ಹುಟ್ಟುತ್ತಾನೆ, ಮುಳುಗುತ್ತಾನೆ. ಆದರೆ ಒಳಜಗತ್ತಿನ ಸೂರ್ಯೋದಯ ಸುಲಭವಲ್ಲ. ಅದಕ್ಕೆ ಹರಿಯ ಕರುಣೆ ಬೇಕು. ಗುರುಕರುಣೆಯ ಶಕ್ತಿ ಬೇಕು. ಸೂರ್ಯಬಿಂಬ ಹುಟ್ಟಿದಾಗ ಕಮಲ ಅರಳುವುದು ಲೋಕದ ಸೌಂದರ್ಯ. ಹೃದಯಕಮಲ ಅರಳಿದಾಗ ಬಿಂಬಸೂರ್ಯ ಹುಟ್ಟುವುದು ಒಳಜಗತ್ತಿನ ಸೌಂದರ್ಯ.

ಭೂತಬಂಗಲೆಯಾಗಿದ್ದ ಮನಸ್ಸು ಇಂದು ಭಗವಂತನ ಅರಮನೆ. ಧಿಮಿಕಿಟಿ ಎನ್ನುತ್ತಿದ್ದ ರಕ್ಕಸರ ಒಳಗಿನ ರಂಗಸ್ಥಳ ಇಂದು ಭಗವಂತನ ಸಿಂಹಾಸನ. ಕ್ಷುದ್ರಪ್ರಾಣಿಗಳ ಕತ್ತಲಿನ ಹೃದಯಕವಾಟ ಇಂದು ಬೆಳಕಿನ ಪುಂಜ. ಮಾಂಸದ ಹೃದಯದಲ್ಲಿ ಇಷ್ಟು ದಿವಸ ಅನ್ನ ನೀರು ರಕ್ತಗಳು ಹರಿಯುತ್ತಿದ್ದವು. ಇಂದು ಬೆಳ್ಳಂಬೆಳಕಿನ ಕ್ಷೀರಸಮುದ್ರವೇ ಹರಿಯುತ್ತಿದೆ.

ಉಪ್ಪಿನ ಸಮುದ್ರದಲ್ಲಿ ಹುಟ್ಟಿಬರುತ್ತಿದ್ದ ಸೂರ್ಯ ಇಂದು ಕ್ಷೀರಸಮುದ್ರದಲ್ಲಿ ಉದಯಿಸಿದ್ದಾನೆ. ಮುಖವಾಡ ಹೊತ್ತುನಿಂತ ಮನುಷ್ಯರ ಸಹವಾಸ ಇಲ್ಲಿಲ್ಲ. ಗೊಬ್ಬರದ ಆಹಾರಪದಾರ್ಥಗಳು ವಿಷಮಿಶ್ರಿತ ಮರಬಳ್ಳಿಗಳು ಪ್ಲಾಸ್ಟಿಕ್ ಹೂವುಗಳು, ಕಾಂಕ್ರೀಟಿನ ಕಟ್ಟಡಗಳು, ಇಂಥ ವಿಕೃತಿಯ ಪ್ರಕೃತಿ ಇಲ್ಲಿಲ್ಲ. ಎಲ್ಲವೂ ಸಹಜ ಪ್ರಕೃತಿಯಲ್ಲಿ ಬೆಳೆದುನಿಂತ ಉದ್ಯಾನವನದ ತಂಗಾಳಿಯ ಸುಖಸ್ಪರ್ಶದಲ್ಲಿ ತೇಲುವಂತಹ ಆನಂದಕ್ಷಣವಿದು.

ಒಂದೆಡೆ ಭೋರ್ಗರೆಯುವ ಕ್ಷೀರಸಮುದ್ರದ ನಿನಾದ. ಮತ್ತೊಂದೆಡೆ ಘಮಘಮಿಸುವ ಉದ್ಯಾನವನದ ಪುಷ್ಪಗಳ ಪರಿಮಳ. ಮಗದೊಂದೆಡೆ ಕಣ್‌ಕುಕ್ಕುವ ದಿವ್ಯ ಶ್ವೇತದ್ವೀಪ. ದಿಕ್ಕು ವಿದಿಕ್ಕುಗಳಲ್ಲಿ ವೇದ ಘೋಷದ ಮಂಗಳ ನಿನಾದ. ಒಂದೊಂದೂ ಆಶ್ಚರ್ಯಕರ. ವರ್ಣಿಸಲು ಸಾಧ್ಯವಾಗದ ನಿಬ್ಬೆರಗಾಗಿಸುವ ಸೌಂದರ್ಯದ ಖನಿ.

ಹೃದಯಪಟ್ಟಣದಲ್ಲಿರುವ ಅರಮನೆ ಎಂದರೆ ಶ್ವೇತದ್ವೀಪ. ಇಲ್ಲಿ ಎಲ್ಲರೂ ನೆಲೆಸಿದ್ದಾರೆ. ದೇವತೆಗಳು, ಋಷಿಗಳು, ಪಿತೃಗಳು, ಗಂಧರ್ವರು, ಅಪ್ಸರೆಯರು, ಗುರುಗಳು, ಹರಿದಾಸರುಗಳು. ಪ್ರತಿಯೊಬ್ಬರ ಸಂಖ್ಯೆ ಸಾವಿರಗಟ್ಟಳೆ, ಲಕ್ಷಗಟ್ಟಳೆ. ಆಹ್ಹಾ....ಜಗತ್ತಿನಲ್ಲಿ ಇದಕ್ಕಿಂತ ಅಚ್ಚರಿಯ ಸಂಗತಿ ಮತ್ತೊಂದಿಲ್ಲ.

ಅಚ್ಚರಿ! ಕಡು ಅಚ್ಚರಿ!! ದೇಹ ಈಗ ಚಿತ್ರಪಟದಂತೆ ಸ್ತಬ್ಧ. ಬಿಂಬರೂಪಿಯಾದ ಶ್ರೀಹರಿಯಿಂದ ಕಂಗಳನ್ನು ಕೀಳಲಾಗುತ್ತಿಲ್ಲ. ಲೋಕವಾರ್ತೆಯಲ್ಲಿ ಚಟಪಟಿಸುತ್ತಿದ್ದ ನಾಲಿಗೆ ಇಂದು ಹರಿಮಂತ್ರವನ್ನು ತನ್ನಷ್ಟಕ್ಕೆ ನುಡಿಯುತ್ತಿದೆ.

ದಹ್ರಂ ವಿಪಾಪ್ಮಂ ಪರವೇಶ್ವಭೂತಮ್ ಯತ್ ಪುಂಡರೀಕಂ ಪುರಮಧ್ಯಸಂಸ್ಥಮ್ ।
ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಸ್ತದುಪಾಸಿತವ್ಯಮ್॥

ದೇಹವೇ ಒಂದು ಪಟ್ಟಣ. ಇದರ ಮಧ್ಯ ಹೃದಯವು ಒಂದು ಸರೋವರ. ಇದರಲ್ಲಿರುವ ಕಮಲವೇ ಭಗವಂತನ ಪುಟ್ಟ ಮನೆ. ಎಂದೂ ಪಾಪದ ಕೆಸರು ಇದಕ್ಕೆ ತಟ್ಟುವುದಿಲ್ಲ. ಅತ್ಯಂತ ಪವಿತ್ರವಾದ ತಾಣವಿದು. ಈ ಕಮಲದ ನಡುವೆ ಒಂದು ಸಣ್ಣ ಆಕಾಶವಿದೆ. ಅದರಲ್ಲಿ ಮಹಾವಿಷ್ಣು ಕುಳಿತಿದ್ದಾನೆ. ಅವನನ್ನು ತವಕದಿಂದ ಒಲಿಸಿಕೊಳ್ಳಬೇಕು.

ಈ ಜಗದೊಡಯನಾದರೂ ಹೃದಯಕಮಲದ ಮಧ್ಯ ಸೂರ್ಯನಂತೆ ಕಂಗೊಳಿಸುತ್ತಿದ್ದಾನೆ. ಇಡೀ ಬ್ರಹ್ಮಾಂಡವನ್ನು ರಕ್ಷಣೆ ಮಾಡುವವನಾಗಿದ್ದರೂ ಈ ಪುಟ್ಟ ಹೃದಯದಲ್ಲಿ ನೆಲೆಸಿ ನನ್ನನ್ನು ರಕ್ಷಿಸುತ್ತಿದ್ದಾನೆ. ಇವನು ವಾಸಿಸುವ ಈ ಕಮಲವಾದರೂ ಒಂದು ದಿವ್ಯಮಂಟಪದ ಮಧ್ಯದಲ್ಲಿ ಕಂಗೊಳಿಸುತ್ತಿದೆ. ಝುಗಝುಗಿಸುವ ಅಸಂಖ್ಯಮಣಿಗಳ ಮಾಲೆಯಿಂದ ಮಂಟಪ ಬೆಳಗುತ್ತಿದೆ. ಎಲ್ಲಿಯೂ ಕಾಣದ ವಿಶಾಲವಾದ ಕ್ಷೀರಸಮುದ್ರದಲ್ಲಿ ಈ ಮಂಟಪವಿದೆ. ಇದನ್ನು ಶ್ವೇತದ್ವೀಪವೆಂದು ಕರೆಯುತ್ತಾರೆ. ಹೆಸರಿಗಷ್ಟೇ ಇದು ಶ್ವೇತದ್ವೀಪ. ಇದರ ಬಣ್ಣ ಸಂಪೂರ್ಣ ಬಂಗಾರ. ಆದರೆ ಲೋಹಮಯವಲ್ಲ. ಮಹಾಲಕ್ಷ್ಮಿದೇವಿಯೇ ಹೀಗೆ ಮಂಟಪರೂಪವನ್ನು ತಾಳಿದ್ದಾಳೆ. ನಾಕು ದಿಕ್ಕುಗಳಲ್ಲಿಯೂ ಬಾಗಿಲುಗಳಿವೆ. ನೂರು ಕಂಭಗಳಿವೆ. ತಳಿರು ತೋರಣಗಳು ಆಪ್ಯಾಯಮಾನವಾಗಿದೆ. ಎಲ್ಲೆಡೆಯು ದ್ವಾರಪಾಲಕರಿದ್ದಾರೆ. ದಿಗಭಿಮಾನಿ ದೇವತೆಗಳಿದ್ದಾರೆ. ಸರಸ್ವತಿ ಭಾರತಿಯರಿದ್ದಾರೆ. ಲಕ್ಷ್ಮೀದೇವಿಯ ವಿವಿಧ ರೂಪಗಳೂ ಇವೆ. ಈ ಶ್ವೇತದ್ವೀಪದ ಮಧ್ಯದಲ್ಲಿ ರತ್ನಸಿಂಹಾಸನ ಝುಗಝುಗಿಸುತ್ತಿದೆ. ಅಲ್ಲಿ ಒಂದು ಕಮಲ ಕೆಳಮುಖವಾಗಿದೆ.

ಅಕಾರ, ಉಕಾರ, ಮಕಾರ, ನಾದ, ಬಿಂದು, ಘೋಷ, ಶಾಂತ, ಅತಿಶಾಂತವೆಂಬ ಎಂಟು ಮುಖವನ್ನು ಹೊಂದಿರುವ ಪ್ರಣವವನ್ನು ಭಕ್ತಿಯಿಂದ ಉಚ್ಚರಿಸಿದ ಕೂಡಲೆ ಕೆಳಮುಖವಾದ ಮೊಗ್ಗು ಮೇಲ್ ಮುಖವಾಗಿದೆ. ಪುನಃ ಅದೇ ಪ್ರಣವವನ್ನು ಹೇಳಿದ ಕೂಡಲೇ ಕಮಲದ ಮೊಗ್ಗು ನಸುನಗುತ್ತಾ ಅರಳುತ್ತದೆ. ಕಮಲದ ಮಧ್ಯ ನಸುಗೆಂಪಿನ ಕರ್ಣಿಕೆಯಲ್ಲಿ ಬಿಂಬರೂಪಿಯಾದ ಶ್ರೀಮನ್ನಾರಾಯಣನು ಕುಳಿತಿದ್ದಾನೆ. ಎಷ್ಟು ನೋಡಿದರೂ ನೋಡಬೇಕೆಂಬ, ಕೇಳಿದರೂ ಪುನಃ ಕೇಳಬೇಕೆಂಬ ಎಷ್ಟು ಅಧ್ಯಯನ ಮಾಡಿ ತಿಳಿದರೂ ಪುನಃ ತಿಳಿಯಬೇಕೆಂಬ ಚಮತ್ಕಾರದ ಹೃದಯವನ್ನು ಹೊತ್ತು ನಿಂತಿದ್ದಾನೆ. ಇದುವೇ ಈ ಸಂಪುಟದಲ್ಲಿರುವ ದಹರಾಧಿಕರಣದ ಮುಖ್ಯತಾತ್ಪರ್ಯ.

ಮೊದ-ಮೊದಲು ಇದೊಂದು ಹಾಸ್ಯಕಥೆ. ಹೊರಗಣ್ಣಿಗೆ ಕೇವಲ ಕಥೆ. ಒಳ ನುಗ್ಗಿದಾಗ ಐತಿಹಾಸಿಕ ಕಥೆ. ಒಳಗಣ್ಣಿಗೆ ಮನೋರಂಗದ ಸತ್ಯಕಥೆ. ತಿಳಿಗಣ್ಣಿಗೆ ಭಗವಂತನ ಗುಣಗಾಥೆಯ ಸ್ವರಸ ಕಥೆ.

ಅದರಾಚೆಗೆ ಇದೊಂದು ಶಾಸ್ತ್ರ. ಜೀವನ ಬೆಳಗುವ ಸಚ್ಛಾಸ್ತ್ರ. ಮನ ಅರಳಿಸುವ ಮನಃಶಾಸ್ತ್ರ. ಮೂಲತಃ ತತ್ವಶಾಸ್ತ್ರ. ಇದಕ್ಕಾಗಿಯೇ ಹೊರಟಿತು ಬ್ರಹ್ಮಮೀಮಾಂಸಾಶಾಸ್ತ್ರ.

'ಬದುಕಲು ಇದೂ ಒಂದು ದಾರಿ' ಎನ್ನದಿರಿ. ಇಲ್ಲಿಯೂ ವ್ಯಾಪಾರೀಕರಣ ನಡೆದರೆ ಮರಳಿಬಾರದ ಪ್ರಪಾತ ಖಚಿತ.

'ಗುರಿ ತಲುಪಲು ಈ ಬದುಕೊಂದು ದಾರಿ' ಎನ್ನಿರಿ. ಆಗ ಶಾಶ್ವತ ಸುಖದ ತಾಣ ಖಚಿತ.

ಹಾಗಾದರೆ ' ನನ್ನಷ್ಟಕ್ಕೆ ನಾನು ಕುಳಿತು ಮೂಜಗದೊಡೆಯನ ಒಳಗಣ್ಣಿನೊಳಗೆ ನೋಡುವೆ' ಎನ್ನುವಂತಿಲ್ಲ. ಸಂಶಯಜ್ಞಾನ, ವಿಪರೀತಜ್ಞಾನ, ಅಜ್ಞಾನಗಳೆಂಬ ರಕ್ಕಸರು ದಿಕ್ಕು ತಪ್ಪಿಸಲು ಒಳಗೆ ನಿಂತು ಕಾಯುತಿಹರು. ಧ್ಯಾನದ ಮೊದಲು ಅವರ ನಿಗ್ರಹ ಅನಿವಾರ್ಯ.

ಒಳಶತ್ರುಗಳ ನಿಗ್ರಹಕ್ಕಾಗಿ ಬಾಹ್ಯಶತ್ರುಗಳ ನಿಗ್ರಹವು ಅನಿವಾರ್ಯ. ತತ್ವಜ್ಞಾನದ ವಿರೋಧಿಗಳೇ ಅಂತಃಶತ್ರುಗಳು. ಈ ಬಾಹ್ಯಶತ್ರುಗಳ ಮತ್ತು ಅಂತರಂಗಶತ್ರುಗಳ ನಿಗ್ರಹವಾದ ಮೇಲೆ ಬಿಂಬರೂಪಿಯ ಕಡೆ ನಡಿಗೆ ಸುಲಭ. ಇದುವೆ ಈ ಸಂಪುಟದ ಮುಖ್ಯಸಾರ.

## 'ಶ್ರೀಸುಬುಧೇಂದ್ರತೀರ್ಥರ ದೀಕ್ಷೆ'

ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಅಧ್ಯಕ್ಷತೆಯಲ್ಲಿ ಅದೊಂದು ಸಭೆ. ಕಿಕ್ಕಿರಿದಿತ್ತು ಜನಸ್ತೋಮ. ಬೇರೇನೂ ಅಲ್ಲ. ಮೂರನೆಯ ಚಾತುರ್ಮಾಸ್ಯದ ಸಮಾರೋಪಸಮಾರಂಭ. ತರ್ಕತಾಂಡವ ಹಾಗೂ ಭಾವದೀಪ ಕೃತಿಗಳ ಬಿಡುಗಡೆಯೂ ಇತ್ತು. ಕೆಲವು ಗಣ್ಯರಿಗೆ ಸನ್ಮಾನವಿತ್ತು. ಕೊನೆಯಲ್ಲಿ ಶ್ರೀಪಾದರ ಅನುಗ್ರಹ ಭಾಷಣವಿತ್ತು. ಅದಕ್ಕಾಗಿ ಎಲ್ಲರ ಕಾತರವೂ ಕಾದಿತ್ತು. ಕೆಲವರ ಮನ ಶ್ರೀಪಾದರು ತಮ್ಮ ಚಾತುರ್ಮಾಸ್ಯದ ಅನುಭವ ಹಂಚಿಕೊಳ್ಳುತ್ತಾರೆ ಅನ್ನುತಿತ್ತು. ಕೆಲವರಿಗೆ ತಮ್ಮ ಯೋಜನೆಗಳ ಬಗ್ಗೆ ಹೇಳುತ್ತಾರೆ ಎಂದು ಅನಿಸಿತ್ತು. ಹಿರಿಯರ ಮನ ಯಾವುದಾದರೂ ಗ್ರಾಂಥಿಕವಿಷಯ ಮಾತನಾಡುವರು ಎಂದು ನಿರ್ಣಯಿಸಿತ್ತು. 'ಎನ್ನ ಬಗ್ಗೆ' 'ನಿಮ್ಮ ಬಗ್ಗೆ' 'ಅವರ ಬಗ್ಗೆ' ಮಾತನಾಡುತ್ತಾರೆಂದೆಲ್ಲಾ ಸಭೆ ಪಿಸುಗುಟ್ಟಿತ್ತು.

ಶ್ರೀಪಾದರ ಭಾಷಣ ಪ್ರಾರಂಭವಾಯಿತು. ಯಾರ ನಿರೀಕ್ಷೆಗೂ ಅಲ್ಲಿ ಉತ್ತರ ಇರಲಿಲ್ಲ. ಅದು ಎಂದಿನ ಭಾಷಣವೂ ಆಗಿರಲಿಲ್ಲ. ಶ್ರೀಪಾದರ ಮಾತುಗಳಲ್ಲಿ ಆವೇಶ ತುಂಬಿತು ಧ್ವನಿ ಗಡುಸಾಯಿತು. ಸಭೆ ಗುಡುಗಿತು. ಕೇಳುಗರ ಮನದಲ್ಲಿ ಮಿಂಚು ಚಳಕ್ ಎಂದಿತು. ಮೊದಲೇ ನಿಃಶಬ್ದ ಸಭೆ ಮತ್ತಷ್ಟು ನಿಶಬ್ದ ಎಂದಿತು.

ಅಂದಹಾಗೆ ಅದು ಭಾಷಣವಲ್ಲ. ಯುದ್ಧಕ್ಕೆ ಪಂಥಾಹ್ವಾನ. ಅಂದು ಕೌರವರ ಸಭೆಯಲ್ಲಿ ಆರ್ಭಟಿಸಿದ ಭೀಮಸೇನದೇವರು ಕೌರವರಿಗೆ ಪಂಥಾಹ್ವಾನ ಮಾಡಿದರು. ಇಂದು ಶ್ರೀಪಾದರು ಸತ್ಯಾನ್ವೇಷಿಗಳೆಂಬ ಮುಖವಾಡ ಹೊತ್ತ ಕೆಲವು ಸನಾತನ ಧರ್ಮದ್ವೇಷಿಗಳಿಗೆ ಪಂಥಾಹ್ವಾನ ನೀಡಿದರು.

ಆಗತಾನೆ ದಿನಪತ್ರಿಕೆಯಲ್ಲಿ ತನ್ನನ್ನು ಪ್ರಗತಿಪರನೆಂದು ತಿಳಿದವನೊಬ್ಬ ಹೇಳಿಕೆ ನೀಡಿದ್ದ -

'ಶ್ರೀರಾಮನು ವ್ಯಭಿಚಾರಿಪುರುಷ. ಸಾಮಾನ್ಯಮನುಷ್ಯರಿಗಿಂತಲೂ ಅವನು ಕೀಳು. ರಾಮಾಯಣ, ಗೀತೆ, ಮೊದಲಾದ ಗ್ರಂಥಗಳು ಅಮಾಯಕಜನರನ್ನು ಶೋಷಣೆಗೈಯುತ್ತಿವೆ. ಅವುಗಳನ್ನು ಬಹಿರಂಗಸಭೆಯಲ್ಲಿ ಸುಡಬೇಕು'. ಈ ವಿಷಯ ಓದಿದ ಶ್ರೀಪಾದರು,ಅಂದು ಕೌರವ ಸಭೆಯಲ್ಲಿ ಭೀಮಸೇನದೇವರು ಆರ್ಭಟಿಸಿದಂತೆ ಈ ಸಭೆಯಲ್ಲಿ ಆರ್ಭಟಿಸಿದರು.

'ರಾಮಾಯಣ ಮಹಾಭಾರತ ಇತರ ಯಾವುದೇ ಗ್ರಂಥಗಳಲ್ಲಿ ಒಂದೇ ಒಂದು ದೋಷಗಳನ್ನು ತೋರಿಸಿರಿ. ಅಥವಾ ಶ್ರೀಮನ್ ನಾರಾಯಣನ ಸ್ವರೂಪನಾದ ಶ್ರೀರಾಮಚಂದ್ರನ ವ್ಯಕ್ತಿತ್ವದಲ್ಲಿ ಒಂದೇ ಒಂದು ದೋಷವನ್ನು ತೋರಿಸಿರಿ. ಸಮಸ್ತ ಭಾರತದೇಶದಲ್ಲಿ ನೀವು ಎಲ್ಲಿ ಕರೆದರು ನಾವು ಬರಲು ಸಿದ್ಧರಿದ್ದೇವೆ. ಅಥವಾ ನಾವಿರುವಲ್ಲೇ ನೀವು ಬನ್ನಿ. ರಾಮಾಯಣ ಮಹಾಭಾರತ ಗೀತೆ ಮೊದಲಾದ ಗ್ರಂಥಗಳಲ್ಲಿರುವ ಅಧ್ಯಾಯಗಳಲ್ಲಿ ಅಥವಾ ಶ್ಲೋಕಗಳಲ್ಲಿ ಅಥವಾ ಪದಗಳಲ್ಲಿ ಅಥವಾ ಅಕ್ಷರಗಳಲ್ಲಿ ಒಂದನ್ನಾದರು ತಪ್ಪು ತೋರಿಸಿ. ನಿಮಗಿದು ನಮ್ಮ ಬಹಿರಂಗ ಪಂಥಾಹ್ವಾನ. ಮುಕ್ತಮನಸ್ಸಿನಿಂದ ನಮ್ಮ ಪಂಥಾಹ್ವಾನಕ್ಕೆ ನೀವು ಬಾರದಿದ್ದರೆ ನೀವು ಸತ್ಯಾನ್ವೇಷಿಗಳಲ್ಲ. ಮಿಥ್ಯಾನ್ವೇಷಿಗಳು. ನೀವು ಪ್ರಗತಿಪರರಲ್ಲ. ದುರ್ಗತಿಪರರು. ನೀವು ಸನಾತನ ಸಂಸ್ಕೃತಿಯ ಹಿತಚಿಂತಕರಲ್ಲ. ವೈಯಕ್ತಿಕ ದ್ವೇಷಿಗಳು ಎಂಬುದು ಸಾಬೀತಾಗುತ್ತದೆ. ಈ ಸವಾಲನ್ನು ಎಲ್ಲೆಡೆಯೂ ವ್ಯಾಪಕವಾಗಿ ಮಾಧ್ಯಮದವರು ಪ್ರಚಾರ ಮಾಡಿದಾಗಲೂ ನೀವು ಬಾರದಿದ್ದರೆ ನಿಮ್ಮ ಬಣ್ಣ ಬಯಲಾಗುವುದರಲ್ಲಿ ಸಂಶಯವಿಲ್ಲ.

ಹೀಗೆ ರಭಸವಾದ ಪುಂಖಾನುಪುಂಖವಾಗಿ ವಾಗ್‌ಝರಿಯು ಶ್ರೀಪಾದರ ಮುಖದಿಂದ ಧುಮುಕುತ್ತಿತ್ತು. ಶ್ರೀಪಾದರ ನೇರ ಧೀರತನದ ಮಾತುಗಳೆಂಬ ಹರಿತ ಬಾಣಗಳಿಗೆ ಎದೆಯೊಡ್ಡುವ ವ್ಯಕ್ತಿ ಯಾರೂ ಇಲ್ಲವೆಂದು ಸಭೆ ಅಂದೇ ನಿರ್ಣಯಿಸಿತ್ತು. ಮುಂದಿನ ದಿನಗಳಲ್ಲಿ ಅದು ಸತ್ಯವೂ ಆಯಿತು.

ಇದುವೆ ಯತಿದೀಕ್ಷೆ. ಇದುವೆ ಸನ್ಯಾಸದೀಕ್ಷೆ. ಇದುವೆ ತತ್ವದೀಕ್ಷೆ. ಇದುವೆ ಅಂತರಂಗದೀಕ್ಷೆ. ಇದುವೆ ವೈಷ್ಣವದೀಕ್ಷೆ. ಇದುವೆ ಸುದೀಕ್ಷೆ. ಇದುವೆ ಸತ್ಯವಾದ ದೀಕ್ಷೆ.

ಇದೊಂದಿಲ್ಲದೆ ಉಳಿದಿದ್ದೆಲ್ಲಾ ಇದ್ದರೂ ಇಲ್ಲದಂತೆ. ಇದೊಂದಿದ್ದರೆ ಎಲ್ಲವೂ ಇದ್ದಂತೆ.

ಅಂತರಂಗ ಶತ್ರುಗಳನ್ನು ಗೆಲ್ಲಲು ಬಾಹ್ಯ ಶತ್ರುಗಳನ್ನು ಹೀಗೆ ಶ್ರೀಪಾದರ ಆದರ್ಶದಲ್ಲಿ ನಿಗ್ರಹಿಸಲೇಬೇಕು.

ಆರನೆಯ ಸಂಪುಟದ ಮುಖ್ಯವಿಷಯವೇ ಇದು. ಇದೇ ಸಂದರ್ಭದಲ್ಲಿ ಶ್ರೀಪಾದರ ಅನುಗ್ರಹ ಭಾಷಣ ಒಂದು ಯೋಗಾಯೋಗ. ಇಂಥ ಶ್ರೀಪಾದಂಗಳವರ ಅನುಗ್ರಹ ನಿರಂತರ ಇರಲಿ ಎಂದಷ್ಟೇ ಕೇಳಿಕೊಳ್ಳುತ್ತೇನೆ.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಅನುಕ್ರಮಣಿಕಾ

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

ಈ ಸಂಪುಟದಲ್ಲಿ ಪ್ರಥಮಾಧ್ಯಾಯದ ತೃತೀಯಪಾದದಲ್ಲಿ ಬರುವ ಭೂಮಾಧಿಕರಣದಿಂದ ಪ್ರಾರಂಭಿಸಿ ವಾಮನಾಧಿಕರಣದ ತನಕ ವಿಷಯ ನಿರೂಪಣೆ ಇರುತ್ತದೆ. ಪ್ರಕೃತ ಈ ಆರು ಅಧಿಕರಣಗಳ ಸಾರಾಂಶವನ್ನು ತಿಳಿಯೋಣ. ಭೂಮಾಧಿಕರಣದ ಸಾರಾಂಶ ಹೀಗಿದೆ -

## ಭೂಮಾಧಿಕರಣ

'ಭೂಮಾ' ಎಂಬ ನಾಮಾತ್ಮಕ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಛಾಂದೋಗ್ಯದಲ್ಲಿ ಪ್ರಾಣನನ್ನು 'ಭೂಮಾ' ಎನ್ನಲಾಗಿದೆ. 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂಬುದಾಗಿ ವಿಷ್ಣುವನ್ನೂ ಸಹ 'ಭೂಮಾ' ಎನ್ನಲಾಗಿದೆ. ಆದ್ದರಿಂದ ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಯಿತು.

ವಸ್ತುತಃ 'ಬಹು' ಎಂಬ ಶಬ್ದದ ಮೇಲೆ 'ಇಮನಿಚ್' ಪ್ರತ್ಯಯ ಹಾಗೂ ಭೂ ಆದೇಶಗಳು ಬಂದು 'ಭೂಮಾ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಸಂಖ್ಯಾವಾಚಕವಾದ 'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗುವುದರಿಂದ ಲಿಂಗಾತ್ಮಕವಾಗಿದೆಯೆಂದೆನಿಸುತ್ತದೆ. ಆದರೆ 'ಯೋ ವೈ ಭೂಮಾ ತದಮೃತಮ್' ಇತ್ಯಾದಿಯಾಗಿ ಶ್ರೇಷ್ಠನೆಂಬರ್ಥದಲ್ಲಿ ಉಪನಿಷತ್ತು 'ಭೂಮಾ' ಶಬ್ದವನ್ನು ಪ್ರಯೋಗ ಮಾಡುತ್ತಿದೆ. ಮತ್ತು 'ವಾಗ್ವಾವ ನಾಮ್ನೋ ಭೂಯಸೀ' ಇತ್ಯಾದಿ ಸ್ಥಳಗಳಲ್ಲಿ ಕೇಳಿಸುತ್ತಿರುವ 'ಭೂಮಾ' ಎಂಬ ಶಬ್ದಕ್ಕೆ ಸಮಾನಾರ್ಥಕವಾದ 'ಭೂಯಸ್' ಶಬ್ದವನ್ನು ಸಂಖ್ಯಾದ್ಯರ್ಥದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಶ್ರೇಷ್ಠನೆಂಬ ಧರ್ಮವಾಚಕತ್ವವನ್ನೇ 'ಭೂಮಾ' ಎಂಬ ಶಬ್ದಕ್ಕೆ ಒಪ್ಪಬೇಕು.

ಇಂತಹ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಗಿದೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯೋಪನಿಷತ್ತಿನ ಉಪಕ್ರಮದಲ್ಲಿ ಪ್ರಾಣನಲ್ಲಿ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿದೆ. ಉಪಕ್ರಮ ಪ್ರಮಾಣಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದ್ದರೂ ಕೂಡ ಇಲ್ಲಿರುವ ಸಮಾಖ್ಯಾಪ್ರಮಾಣವು ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಹಿತವಾಗಿದೆ. ಆದ್ದರಿಂದ ಉಪಕ್ರಮದಿಂದ ಸಮಾನಬಲವುಳ್ಳದ್ದೇ ಆಗಿದೆ. ಹೀಗೆ ಸಮಬಲವಾದ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳು ಪ್ರಾಣ ಹಾಗೂ ವಿಷ್ಣುವಿನಲ್ಲಿ 'ಭೂಮಾ' ಶಬ್ದವನ್ನು ಪ್ರಯೋಗಿಸುತ್ತಿರುವ ಕಾರಣ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬೇಕು. ಅಥವಾ ಉಪಕ್ರಮ ಹಾಗೂ

ಸಮಾಖ್ಯಾಪ್ರಮಾಣಗಳಲ್ಲಿ ಯಾರಿಗೆ ಪ್ರಾಬಲ್ಯ ಹಾಗೂ ದೌರ್ಬಲ್ಯ ವಿಚಾರವು ಬಂದಿರುವುದಿಲ್ಲವೋ, ಅಂತಹ ವ್ಯಕ್ತಿಯ ವಿಷಯದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆಂದು ತಿಳಿಯಬಹುದು.

ಅಥವಾ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿಯೇ ಪ್ರಾಣಶಬ್ದವನ್ನು ವಿಷ್ಣುಪರವೆಂದು ನಿರ್ಣಯಿಸಿದ್ದಾಗಿದೆ. ಆದ್ದರಿಂದ ಉಪಕ್ರಮದಲ್ಲಿರುವ ಪ್ರಾಣಶಬ್ದವು ಸಾವಕಾಶವಾಯಿತು. ಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣುಶಬ್ದವು ಪ್ರಾಣನಲ್ಲಿ ಸಮನ್ವಯವಾಗದ ಕಾರಣ ನಿರವಕಾಶವಾಗಿದೆ. ವಾಸ್ತವಿಕವಾಗಿ ಉಪಕ್ರಮವು ಸಮಾಖ್ಯಾಪ್ರಮಾಣಕ್ಕಿಂತ ಬಲಿಷ್ಠವಾಗಿದ್ದರೂ ಸಾವಕಾಶವಾಗಿರುವುದರಿಂದ ಸಮಾಖ್ಯಾಪ್ರಮಾಣಕ್ಕೆ ಹಾಗೂ ಉಪಕ್ರಮ ಪ್ರಮಾಣಕ್ಕೆ ಸಮಾನ ಬಲವನ್ನು ಹೇಳಬಹುದು.

ಈ ಅಧಿಕರಣದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆನ್ನಲು ಉಪಕ್ರಮ ವಾಕ್ಯ ಹಾಗೂ ಸಮಾಖ್ಯಾಪ್ರಮಾಣಗಳನ್ನು ಆಧರಿಸುತ್ತಿದ್ದಾರೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬುದಾಗಿ ಪ್ರಾಣನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವನ್ನೇ ಹೇಳಬಹುದು. ಹೀಗೆ ಹೇಳಿದಾಗ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಪ್ರಮಾಣಗಳನ್ನು ಹೇಳಿದಂತಾಗುತ್ತದೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ಸಕಲ ದೇವತೆಗಳಿಗಿಂತಲೂ ಪ್ರಾಣನು ಉತ್ತಮನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೇವಲ ಉಪಾಸಕರಿಗಿಂತ ಉತ್ತಮನಾಗಿದ್ದಾನೆಂದಷ್ಟೇ ತಿಳಿಯುತ್ತದೆ. ಈ ಕಾರಣಕ್ಕಾಗಿ ಉಪಕ್ರಮಪ್ರಮಾಣವನ್ನೇ ಆಧರಿಸಿದ್ದಾರೆ.

ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿಯೂ ಉಪಕ್ರಮಪ್ರಮಾಣವನ್ನೇ ಹೇಳಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿ ರುದ್ರಾದಿ ಪ್ರಾಪಕವಾದ ಉಪಕ್ರಮಪ್ರಮಾಣವು ಇಲ್ಲದ ಕಾರಣದಿಂದಲೇ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಸಮಾಖ್ಯಾಪ್ರಮಾಣಗಳನ್ನೇ ಆಶ್ರಯಿಸಲಾಗಿದೆ.

ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಂದ 'ಭೂಮಾ' ಎಂಬ ಶಬ್ದವು ಉಭಯ ಸಾಧಾರಣವಾಗಿದೆಯೆಂದು ಹೇಳುವುದಾದರೆ ಸರ್ವಗತತ್ವಾಧಿಕರಣದಲ್ಲಿಯೂ 'ತಸ್ಯೈತಸ್ಯಾದಿತ್ಯೋ ರಸಃ' ಎಂದು ಆದಿತ್ಯನಲ್ಲಿ ಶ್ರುತಿರೂಪ ಉಪಕ್ರಮಪ್ರಮಾಣವಿದೆ. ಬ್ರಹ್ಮನ ವಿಷಯದಲ್ಲಿ ಸಮಾಖ್ಯಾಪ್ರಮಾಣವಿದೆ. ಹಾಗಾಗಿ 'ಭೂಮಾ' ಎಂಬ ಶಬ್ದದಂತೆ ಸರ್ವಗತತ್ವವೂ ಸಹ ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಸರ್ವಗತತ್ವಾಧಿಕರಣದಲ್ಲಿ ಯಾವುದೇ ಶ್ರುತಿಯಲ್ಲಿಯೂ ಸಹ ಅಲೌಕಿಕಸ್ವವೆಂಬ ಸರ್ವಭೂತಗತತ್ವವನ್ನು ಪೂರ್ವಪಕ್ಷಿಯು ಬ್ರಹ್ಮನಲ್ಲಿ ಒಪ್ಪಿರುವುದಿಲ್ಲ. ಆದ್ದರಿಂದ ಸಮಾಖ್ಯಾಪ್ರಮಾಣವನ್ನೇ ಅಲ್ಲಿ ಹೇಳಲು ಸಾಧ್ಯವಿಲ್ಲ. ಆದರೆ ಪ್ರಕೃತ ಈ ಅಧಿಕರಣದ ಪೂರ್ವಪಕ್ಷಿಯು ಸಮಾಖ್ಯಾಶ್ರುತಿಯು ವಿಷ್ಣುಪರವಾಗಬಹುದೆಂದು ಒಪ್ಪಿಕೊಂಡು ಉಪಕ್ರಮದಲ್ಲಿರುವ 'ಭೂಮಾ' ಎಂಬ ಶಬ್ದವನ್ನಷ್ಟೇ ವಿಷ್ಣುಪರವಲ್ಲವೆಂದು ಆಕ್ಷೇಪಿಸುತ್ತಿದ್ದಾನೆ. ಹೀಗೆ ಎರಡೂ ಅಧಿಕರಣಗಳ ವ್ಯತ್ಯಾಸವನ್ನು ಗಮನಿಸಬೇಕು.

'ಯೋ ವೈ ಭೂಮಾ ತತ್ಸುಖಮ್' ಇತ್ಯಾದಿಯಾಗಿ ಭೂಮರೂಪನಾದ ವಾಯು, ಆನಂದಮಯನಾಗದಿದ್ದರೆ ಇಲ್ಲಿ ಭೂಮನಿಗೆ ಹೇಳಲ್ಪಟ್ಟ ಸುಖವೂ ಸಹ ಕೂಡುವುದಿಲ್ಲ. ಆದ್ದರಿಂದ ಭೂಮನೆನಿಸಿದ ಮುಖ್ಯಪ್ರಾಣನೇ

ಆನಂದಮಯನಾಗುತ್ತಾನೆ. ಹೀಗೆ 'ಭೂಮಾ' ಎಂಬ ಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಸಾಧಾರಣವಾಗಿರುವುದರಿಂದ ಪಾದಸಂಗತಿಯು ಯುಕ್ತವಾಗಿದೆ.

ಭೂಮನಲ್ಲಿ ಸರ್ವಗತತ್ವ, ಆತ್ಮಕ್ರೀಡಾತ್ವ, ಅಮೃತತ್ವ ಇವೇ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ದ್ಯುಭ್ವಾದ್ಯಾಯತನನಲ್ಲಿಯೂ ಕೂಡ ಇವೇ ಧರ್ಮಗಳು ಕೇಳಿಸುತ್ತಿವೆ. ಆದ್ದರಿಂದ ಭೂಮಾ ಹಾಗೂ ದ್ಯುಭ್ವಾದ್ಯಾಯತನರು ಒಬ್ಬನೇ ಎಂದು ತಿಳಿಯುತ್ತದೆ. ಒಂದು ವೇಳೆ ಈಗಾಗಲೇ ಹೇಳಿದಂತೆ ಭೂಮನು ಮುಖ್ಯಪ್ರಾಣನಾದರೆ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆ. ಹೀಗಿರುವಾಗ ದ್ಯುಭ್ವಾದ್ಯಾಯತನನು ವಿಷ್ಣುವೆಂದು ಹಿಂದಿನ ಅಧಿಕರಣದಲ್ಲಿ ಹೇಗೆ ನಿರ್ಣಯಿಸಿದಿರಿ ? ಎಂದು ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು. ಟೀಕೆಯಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿರುತ್ತಾರೆ. ಯಾವ ನ್ಯಾಯವನ್ನು ವಿವಕ್ಷಿಸಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೋ ಅದೇ ನ್ಯಾಯವು ಹಿಂದಿನ ಅಧಿಕರಣದಿಂದ ತೋರಿಸುವ ಸಂಗತಿಯಲ್ಲಿಯೂ ಇರುವುದರಿಂದ ಟೀಕೆಯಿಂದಲೇ ಪೂರ್ವಾಧಿಕರಣದ ಸಂಗತಿಯನ್ನು ಸೂಚಿಸಿದ್ದಾರೆ.

ಸಿದ್ಧಾಂತ ಹಾಗೂ ಪೂರ್ವಪಕ್ಷಗಳ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ಒಂದು ವೇಳೆ ಪ್ರಾಣನಲ್ಲಿ ಶ್ರುತವಾದ ಉತ್ತಮಣಾಲಿಂಗವು ಮುಂದೆ ಹೇಳುವ ಪ್ರಕಾರ ಸರ್ವಗತನಾದ ಬ್ರಹ್ಮನಲ್ಲಿ ಅಯುಕ್ತವಾದರೆ ಉಪಕ್ರಮದಲ್ಲಿ ಶ್ರುತನಾದ ಪ್ರಾಣನು ವಾಯುವೇ ಆಗುತ್ತಾನೆ. ಅಂತಹ ವಾಯುವಿಗಿಂತ ಬ್ರಹ್ಮನು ಶ್ರೇಷ್ಠನೆಂದು ಸಿದ್ಧಾಂತಿಯು ಒಪ್ಪಿರುವುದರಿಂದ ಪ್ರಶ್ನೆ ಹಾಗೂ ಉತ್ತರಗಳಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಬ್ರಹ್ಮನಿಗೆ ಹೇಳಬೇಕು. ಆದರೆ ಹಾಗೆ ಉಪನಿಷತ್ತಿನಲ್ಲಿ ಹೇಳಿರುವುದಿಲ್ಲ. ಹೀಗೆ ಹೇಳದಿರುವಿಕೆಯೇ ಮುಖ್ಯಪ್ರಾಣನಿಗೆ ಪೂರ್ಣಸುಖತ್ವವನ್ನು ಹಾಗೂ ಭೂಮತ್ವವನ್ನು ಹೇಳಬೇಕೆಂಬುದಕ್ಕೆ ಗಮಕ ಎಂದು ಪೂರ್ವಪಕ್ಷಕಾರರ ಆಶಯ.

ಒಂದು ವೇಳೆ ಭಗವಂತನ ಅನೇಕ ರೂಪಗಳ ಭೇದದಿಂದ ತನ್ನಿಂದಲೇ ತನಗೆ ಭೂಯಸ್ತ್ವವನ್ನು ಹೇಳಿದ್ದು ಯುಕ್ತವಾಗುವುದಾದರೆ ಪ್ರಾಣನೂ ಸಹ ಬ್ರಹ್ಮನೇ ಆಗುತ್ತಾನೆ. ಆವಾಗ ತನ್ನಿಂದಲೇ ತನಗೆ ಉತ್ತಮತ್ವವು ಬರುವುದಿಲ್ಲವಾದ್ದರಿಂದ ಭೂಯಸ್ತ್ವದ ಅನುಕ್ತಿಯು ಯುಕ್ತವಾಗುತ್ತದೆ. ಆದ್ದರಿಂದ ಪೂರ್ಣಸುಖತ್ವ ಹಾಗೂ ಭೂಮತ್ವಗಳೆರಡೂ ವಿಷ್ಣುವಿನಲ್ಲೇ ಬರುತ್ತದೆಂಬುದು ಸಿದ್ಧಾಂತದ ಉದ್ದೇಶ.

ಮುಖ್ಯಪ್ರಾಣನೇ ಭೂಮನಾಗಿದ್ದಾನೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಉಪಕ್ರಮ ಪ್ರಮಾಣವೇ ಈ ವಿಷಯದಲ್ಲಿ ಆಧಾರವಾಗಿದೆ. ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವನ್ನು ಹೇಳಬಾರದು. ಏಕೆಂದರೆ ಹಾಗೇನಾದರೂ ಭೇದವಿದ್ದಿದ್ದರೆ ಪ್ರಾಣನಿಗಿಂತ ಭೂಮನನ್ನು ಉತ್ತಮನೆಂದು ಹೇಳಬೇಕಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಅಥವಾ ಪ್ರಾಣನಿಗಿಂತ ಉತ್ತಮನೊಬ್ಬ ಇದ್ದಾನೆಂಬ ಪ್ರಶ್ನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. ಇನ್ನು ವಿಷ್ಣುವಿನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವಿದೆಯೆಂದು ಹೇಳಬಹುದು. ಆದರೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳೆರಡರ ಮಧ್ಯದಲ್ಲಿ ಉಪಕ್ರಮ ಪ್ರಮಾಣವೇ ಶ್ರೇಷ್ಠವಾಗಿರುತ್ತದೆ. ಆದ್ದರಿಂದ ವಿಷ್ಣುವಿನ ಸಮಾಖ್ಯಾಪ್ರಮಾಣವು ಇದನ್ನು ವಿರೋಧಿಸುವುದಿಲ್ಲ.

ಭೂಮರೆನಿಸಿದವರು ಮುಖ್ಯಪ್ರಾಣದೇವರೇ ಹೊರತು, ಬ್ರಹ್ಮನಲ್ಲ. ಪ್ರಾಣಶಬ್ದದಿಂದ ಬ್ರಹ್ಮನೂ ಪ್ರತಿಪಾದ್ಯನಾದ್ದರಿಂದ ಬ್ರಹ್ಮನನ್ನೂ ಸಹ ಭೂಮನೆನ್ನಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಥಮ ಪಾದದಲ್ಲಿ ಪ್ರಾಣಶಬ್ದವನ್ನು ಬ್ರಹ್ಮನೆಂದು ಸಮರ್ಥಿಸಲು ನಿರವಕಾಶವಾದ ವಿಷ್ಣುವಿನ ಲಿಂಗವಿತ್ತು. ಆದರೆ ಇಲ್ಲಿ ಅಂತಹ ವಿಷ್ಣುಲಿಂಗಗಳೇನೂ ಇರುವುದಿಲ್ಲ. ವಿಪರೀತವಾಗಿ 'ದೇಹಾದುತ್ತಮಣ' ಎಂಬ ಲಿಂಗವೇ ಇರುತ್ತದೆ. ಮುಖ್ಯಪ್ರಾಣದೇವರು ಭೂಮರೆಂದು ಹೇಳಿದರೆ ಯಾವುದೇ ಬಾಧಕಗಳೂ ಸಹ ಇರುವುದಿಲ್ಲ. ಎಲ್ಲೆಡೆ ವ್ಯಾಪ್ತನಾಗಿದ್ದರೆ ಮಾತ್ರ ಭೂಮನೆನಿಸಬೇಕಾಗಿಲ್ಲ. ಭೂಮಪ್ರಕರಣವನ್ನು ಹಿಂದಿನ, ಮುಂದಿನ ವಾಕ್ಯಗಳಿಂದ ವಿಚಾರ ಮಾಡಿದಾಗ ಅಲ್ಲಿ ಗುಣತಃ ಉತ್ತಮತ್ವವೇ ಪ್ರಸಕ್ತವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಆಶಾಯೆನಿಸಿದ ಭಾರತಿಗಿಂತ ಉತ್ತಮನಾಗಿದ್ದಾನೆಂದರೆ ಹೆಚ್ಚಿನ ದೇಶದಲ್ಲಿದ್ದಾನೆಂದು ಅರ್ಥವಲ್ಲ. ಹೆಚ್ಚಿನ ಗುಣಗಳುಳ್ಳವನಾಗಿದ್ದಾನೆಂದಷ್ಟೇ ಅರ್ಥ. ಆದ್ದರಿಂದ ಅಣುಸ್ವರೂಪರಾಗಿದ್ದರೂ ಸಹ ಮುಖ್ಯಪ್ರಾಣದೇವರಲ್ಲಿ ಭೂಮತ್ವವು ಯುಕ್ತವಾಗುತ್ತದೆ. ಅವರೇ ಆನಂದಮಯರೂ ಸಹ ಆಗುತ್ತಾರೆಂದು ಆಕ್ಷೇಪ ಮಾಡಬಹುದು.

ಭೂಮಪ್ರಕರಣದಲ್ಲಿ ಸರ್ವಗತತ್ವವು ಕೇಳಿಸುತ್ತಿದೆ. ಅದಕ್ಕನುಸಾರಿಯಾಗಿ ಪ್ರಾಣನಲ್ಲಿ ಕೇಳಿಸುತ್ತಿರುವ ದೇಹಾದ್ಯುತ್ಕ್ರಮಣವೆಂಬ ಲಿಂಗವನ್ನು ಗೌಣವಾಗಿ ವ್ಯಾಖ್ಯಾನಿಸಬೇಕೆಂದು ಹೇಳಬಾರದು. ಏಕೆಂದರೆ 'ಉತ್ಕ್ರಾಂತ' ಎಂಬ ಶಬ್ದದಿಂದಲೇ ನೇರವಾಗಿ ಪ್ರಾಣೋತ್ಕ್ರಮಣವೆಂಬ ಲಿಂಗವು ತಿಳಿಯುತ್ತಿದೆ. ಹಾಗೇ ಸರ್ವಗತತ್ವವನ್ನು ನೇರವಾಗಿ ಹೇಳುವ ಯಾವುದೇ ಶಬ್ದಗಳು ಶ್ರುತಿಯಲ್ಲಿರುವುದಿಲ್ಲ. ಆದ್ದರಿಂದ ಸರ್ವಗತತ್ವವನ್ನೇ ಗೌಣವನ್ನಾಗಿ ಅರ್ಥೈಸಬೇಕು. ಒಟ್ಟಾರೆ ಸಂಪ್ರಸಾದವೆಂಬ ಪೂರ್ಣಾನಂದತ್ವವು ವಿಷ್ಣುವಿನಲ್ಲಿ ಮಾತ್ರ ಬರುತ್ತದೆಂಬ ನಿಯಮವನ್ನು ಸಿದ್ಧಾಂತಿಗಳು ಮಾಡಲು ಸಾಧ್ಯವಿಲ್ಲ. ಮುಖ್ಯಪ್ರಾಣದೇವರಲ್ಲಿಯೂ ಈ ಲಿಂಗವು ಬರುತ್ತಿದೆ.

ಪರಮಾತ್ಮನು ವ್ಯಾಪ್ತನಾದ ಕಾರಣ 'ದೇಹದಿಂದ ಹೊರಗೆ ಹೊರಟಿದ್ದಾನೆ'. ಅಥವಾ 'ದೇಹದಲ್ಲಿ ಪ್ರವೇಶ ಮಾಡಿದ್ದಾನೆ' ಇತ್ಯಾದಿಯಾಗಿ ಯಾವುದೇ ಕ್ರಿಯೆಯನ್ನು ಹೇಳಲು ಸಾಧ್ಯವಿಲ್ಲ. ಇಂತಹ ಕ್ರಿಯೆಯನ್ನು ಅಣುಸ್ವರೂಪನಾದ ಮುಖ್ಯಪ್ರಾಣನಲ್ಲಿ ಮಾತ್ರ ಹೇಳಬೇಕೆಂದು ಪೂರ್ವಪಕ್ಷದ ಅಭಿಪ್ರಾಯ. ಬ್ರಹ್ಮನು ವ್ಯಾಪ್ತನಾಗಿದ್ದರೂ ಸಹ ಅಣುಸ್ವರೂಪನೂ ಆಗಿರುವ ಪ್ರಯುಕ್ತ ಕ್ರಿಯೆಯನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅಣುತ್ವವಿರುವ ಪ್ರಯುಕ್ತ ಕ್ರಿಯೆಯು ಬರುತ್ತದೆಂದು ಹೇಳುವುದಾದರೆ ಮಹತ್ತ್ವವಿರುವ ಪ್ರಯುಕ್ತ ಕ್ರಿಯೆಯು ಬರುವುದಿಲ್ಲವೆಂದು ಹೇಳಿದರೆ ಈ ರೀತಿಯ ಪೂರ್ವಪಕ್ಷಿಗಳ ಪ್ರತಿಬಂದಿಗೆ ಉತ್ತರವನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಕೂಡುವುದಿಲ್ಲವೆಂಬುದೇ ಈ ಅಧಿಕರಣದ ಪೂರ್ವಪಕ್ಷ. ಇದರ ನಿರಾಕರಣೆಯೇ ಸಿದ್ಧಾಂತ.

ಈ ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಬೇರೆ ಯಾವುದೇ ಅಧಿಕರಣಗಳಲ್ಲಿಯೂ ಸಹ ಮಾಡಿರುವುದಿಲ್ಲ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಸರ್ವಗತನಾದ ಪರಮಾತ್ಮನು ಹೃದಯದಲ್ಲಿದ್ದಾನೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುತ್ತದೆಂದು ಹೇಳಿರುವುದಿಲ್ಲ. ಇದರಂತೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಕರ್ಮಾಧೀನನಾಗಿ ಸಂಚಾರವು ಬರುತ್ತದೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡಿರುವುದಿಲ್ಲ. ಮತ್ತು ಅದರ ಖಂಡನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಈ ಅಧಿಕರಣವು ಬೇರೆ ಅಧಿಕರಣದಿಂದ ಗತಾರ್ಥವಾಗಲು

ಸಾಧ್ಯವಿಲ್ಲ. ಆದ್ದರಿಂದ ಉತ್ಕ್ರಮಣವೆಂಬ ಲಿಂಗವು ಮುಖ್ಯಪ್ರಾಣನಲ್ಲಿ ಮಾತ್ರ ಬರುತ್ತದೆ. ಪ್ರಾಣಶಬ್ದದಿಂದ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗುತ್ತಾರೆ, ಅವರೇ ಭೂಮರೂ ಸಹ ಆಗುತ್ತಾರೆಂಬ ಎಂಬ ಪೂರ್ವಪಕ್ಷವು ಉದಯವಾಯಿತು.

ಯಾರು ಭೂಮನಾಗಿದ್ದಾನೋ, ಅವನು ಪರಿಪೂರ್ಣವಾದ ಸುಖವುಳ್ಳವನೆಂದು 'ಯೋ ವೈ ಭೂಮಾ ತತ್ಸುಖಮ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ನಿರುಪಪದವಾದ ಸುಖಶಬ್ದಕ್ಕೆ ಪರಿಪೂರ್ಣವೆಂದೇ ಅರ್ಥ. ಪರಿಪೂರ್ಣಸುಖ ಇರುವುದು ಪರಮಾತ್ಮನಲ್ಲಿ ಮಾತ್ರವೇ. ಬೇರೆಯವರೆಲ್ಲರೂ ಅಲ್ಪವಾದ ಸುಖವುಳ್ಳವರು. ಆದ್ದರಿಂದ ಬೇರೆಯವರು ಯಾರೂ ಸಹ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ. ಈ ಎಲ್ಲ ವಿಷಯವನ್ನು 'ಸಂಪ್ರಸಾದಾತ್' ಎಂಬ ಲಿಂಗದಿಂದ ಸೂತ್ರಕಾರರು ಹೇಳಿರುತ್ತಾರೆ.

'ವಿಶ್ವಶಂಭುವಮ್' ಎಂಬ ಶ್ರುತಿಯು ಪೂರ್ಣವಾದ ಸುಖಕ್ಕೆ ಆಶಯನಾದವನು ವಿಷ್ಣುವೇ ಆಗಿದ್ದಾನೆಂದು ಹೇಳುತ್ತಿರುವುದರಿಂದ ಮುಖ್ಯಪ್ರಾಣದೇವರನ್ನು ಪೂರ್ಣಸುಖಸ್ವರೂಪರೆಂದು ಹೇಳಬಾರದು.

ಭೂಮನೇ ವಿಷ್ಣುವಾಗಿದ್ದನೆಂಬ ವಿಷಯದಲ್ಲಿ ಅನೇಕ ಸಾಧಕ ಪ್ರಮಾಣಗಳಿವೆ. ಅಷ್ಟೇ ಅಲ್ಲದೇ ಪೂರ್ವಪಕ್ಷಕಾರರು ಹೇಳಲ್ಪಟ್ಟ ಅನುಕ್ತಿ ಹಾಗೂ ಉತ್ಕ್ರಮಣ ಎಂಬ ಬಾಧಕಗಳೂ ಸಹ ಇರುವುದಿಲ್ಲ. ಏಕೆಂದರೆ ಪ್ರಾಣನಿಗಿಂತ ವಿಷ್ಣು ಅಧಿಕನಾಗಿದ್ದಾನೆಂದು ಹೇಳದಿರುವಿಕೆಯು ಬಾಧಕವಾಗುತ್ತದೆಂದು ಪೂರ್ವಪಕ್ಷಕಾರರು ಹೇಗೆ ಹೇಳುತ್ತಾರೋ ಅದರಂತೆ ವಿಷ್ಣುವಿಗಿಂತ ಪ್ರಾಣನು ಉತ್ತಮನಾಗಿದ್ದಾನೆಂಬ ಹೇಳದಿರುವಿಕೆಯು ಪೂರ್ವಪಕ್ಷಕಾರರಿಗೂ ಬಾಧಕವಾಗಿದೆ. ಪ್ರಾಣನು ಸರ್ವೋತ್ತಮನೆಂದೇ ಪೂರ್ವಪಕ್ಷಕಾರರು ಸಮರ್ಥಿಸಬೇಕು. ಆದ್ದರಿಂದ ವಿಷ್ಣುವಿಗಿಂತಲೂ ಪ್ರಾಣನಿಗೆ ಉತ್ತಮತ್ವವನ್ನು ಅವರು ಪ್ರತಿಪಾದಿಸಿದರೆ ಮಾತ್ರ ಭೂಮನು ಪ್ರಾಣನಾಗಿದ್ದಾನೆಂಬ ಸಮರ್ಥನೆಯು ಸಾಧ್ಯವಾಗುತ್ತದೆ. ಆದ್ದರಿಂದ ನಮ್ಮನ್ನು ಕುರಿತು ಯಾವ ಅನುಕ್ತಿಯನ್ನು ಬಾಧಕವನ್ನಾಗಿ ಹೇಳುತ್ತಿದ್ದಾರೋ, ಅದೇ ಅನುಕ್ತಿಯೆಂಬ ಲಿಂಗವು ಪೂರ್ವಪಕ್ಷಕಾರರಿಗೇನೇ ಮಾರಕವಾಗಿದೆ.

'ಅಧ್ಯುಪದೇಶಾತ್' ಎಂಬಲ್ಲಿ 'ಅಧಿ' ಎಂದರೆ 'ಸರ್ವಾಧಿಕ' ಎಂದರ್ಥ. ಪ್ರಾಣನನ್ನು ಸರ್ವೋತ್ತಮನೆಂದು ಶ್ರುತಿಯು ಹೇಳಿದೆ. ಶ್ರುತಿಯಲ್ಲಿ ಪ್ರಸಕ್ತವಾದ ಪ್ರಕರಣ ಹೀಗಿದೆ - ನಾರದರು ಸನತ್ಕುಮಾರರನ್ನು ಬ್ರಹ್ಮೋಪದೇಶಕ್ಕಾಗಿ ಉಪಸತ್ತಿ ಮಾಡುತ್ತಾರೆ. ಅಂತಹ ನಾರದರನ್ನು ಕುರಿತು ಸನತ್ಕುಮಾರರು 'ನಾಮ ಬ್ರಹ್ಮೇತ್ಯುಪಾಸೀತ' ನಾಮಾಭಿಮಾನಿಯಾದ ಉಷಾದೇವಿಯನ್ನು ಪೂರ್ಣಳೆಂದು ಉಪಾಸನೆ ಮಾಡಬೇಕು ಎಂದು ಪ್ರಾರಂಭ ಮಾಡಿ ಆಶಾನಾಮಕಳಾದ ಭಾರತೀದೇವಿಯ ತನಕ ಉಪಾಸನೆಯನ್ನು ತಾರತಮ್ಯ ಪ್ರಕಾರವಾಗಿ ಉಪದೇಶಿಸಿದರು. ಕೊನೆಯಲ್ಲಿ ಆಶಾನಾಮಕಳಾದ ಭಾರತೀದೇವಿಗಿಂತ ಪ್ರಾಣನನ್ನು ಉತ್ತಮನೆಂದು ಹೇಳಿದರು. ಅಂತಹ ಪ್ರಾಣನಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳಲಿಲ್ಲ. ಇದರಿಂದ ಸರ್ವೋತ್ತಮನಾದ ವ್ಯಕ್ತಿ ಪ್ರಾಣನೆಂದೇ ತಿಳಿಯುತ್ತದೆ. ಈ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದನೆ ಹೊರತು, ಮುಖ್ಯಪ್ರಾಣದೇವರಲ್ಲ. ಆದ್ದರಿಂದ ವಿಷ್ಣುವೇ ಭೂಮನೆನಿಸುತ್ತಾನೆಂಬುದು ಒಟ್ಟು ಅಭಿಪ್ರಾಯ.

'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿಯೂ ಮುಂದೆ ಇದೇ ವಿಷಯವನ್ನು ಪ್ರತಿಪಾದಿಸುವರಿದ್ದಾರೆ. ಆದ್ದರಿಂದ ಪ್ರಶ್ನಪ್ರತಿವಚನಗಳನ್ನು ಉಪನಿಷತ್ತಿನಲ್ಲಿ ಅನುಸಂಧಾನ ಮಾಡಿಕೊಂಡು ವಿಷ್ಣುವೇ ಭೂಮನಾಗಿದ್ದಾನೆಂದು

ಸಮರ್ಥಿಸುವುದು ಯುಕ್ತವಲ್ಲವೆಂದು ಹೇಳಬಾರದು. ಹಾಗೂ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದನ್ನು ಹೇಳಿದ್ದು ಸತ್ಯ . ಆದರೆ ಅದನ್ನೇ ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಪುನುರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ನ್ಯಾಯವಿವರಣ ಹಾಗೂ ಛಾಂದೋಗ್ಯ ಭಾಷ್ಯಗಳಲ್ಲಿ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂದೇ ವ್ಯಾಖ್ಯಾನಿಸಿದ್ದಾರೆ. ಹಾಗಾದರೆ ಶ್ರುತಿಯಲ್ಲಿ ವಿಷ್ಣುವನ್ನು ಉಲ್ಲೇಖಿಸಿದಂತೆಯೇ ಆಗಲಿಲ್ಲವಲ್ಲಾ? ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಅನಂತರ ಸತ್ಯವು ಪ್ರಸ್ತುತವಾಗಿದೆ. ಅಂತಹ ಸತ್ಯಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯಬೇಕು. ಆದ್ದರಿಂದಲೇ 'ಏವಂ ವಿಜಾನನ್ ಅತಿವಾದೀ' ಎಂದು ಮುಖ್ಯಪ್ರಾಣದೇವರನ್ನು ಯಾರು ತಿಳಿಯುತ್ತಾರೋ, ಅವನನ್ನು 'ಅತಿವಾದಿ' ಅಂದರೆ ಅಧಿಕಜ್ಞಾನಿಯೆಂದು ಶ್ರುತಿಯು ಪ್ರಶಂಸಿಸಿದೆ. ಅನಂತರ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂಬುದಾಗಿ ಯಾರು ಸತ್ಯಸ್ವರೂಪನಾದ ಬ್ರಹ್ಮನನ್ನು ತಿಳಿಯುತ್ತಾರೋ ಅವನು ಅತ್ಯಧಿಕವಾದ ಜ್ಞಾನಿ ಎಂಬುದಾಗಿ 'ತು' ಶಬ್ದವು ಅತಿಶಯವನ್ನು ತಿಳಿಸುತ್ತಿದೆ. ಆದ್ದರಿಂದ ಸತ್ಯಶಬ್ದದಿಂದ ಪರಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ವಿಷ್ಣುವಿನ ಉಲ್ಲೇಖವಿದೆ ಎಂದು ಸಿದ್ಧವಾಗುತ್ತದೆ.

'ಪ್ರಾಣೋವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯದಲ್ಲಿರುವ ಪ್ರಾಣಶಬ್ದಕ್ಕೆ 'ವಿಷ್ಣು' ಎಂಬರ್ಥವನ್ನು ಒಪ್ಪಿ ಸಿದ್ಧಾಂತ ಮಾಡಿರುತ್ತಾರೆ. ಆದರೆ ನ್ಯಾಯವಿವರಣದಲ್ಲಿ ಮುಖ್ಯಪ್ರಾಣನೆಂಬರ್ಥವನ್ನೂ ಒಪ್ಪಿಯೇ ಸಿದ್ಧಾಂತ ಮಾಡಿರುತ್ತಾರೆ. ವಿಚಾರಮಾಡಿದರೆ ನ್ಯಾಯವಿವರಣದ ಅಭಿಪ್ರಾಯವು ಅತ್ಯಂತ ಸಮಂಜಸವೆಂದೆನಿಸುತ್ತದೆ. ಏಕೆಂದರೆ ಪ್ರಾಣಶಬ್ದವು ವಿಷ್ಣುಪರವಾಗುವುದರಿಂದ 'ಏಷ ತು ವಾ ಅತಿವದಿತಿ' ಎಂಬಲ್ಲಿರುವ 'ತು' ಶಬ್ದವು ಸ್ವಾರಸ್ಯವಾಗುತ್ತದೆ. ಮತ್ತು ಆಶಾನಾಮಕಳಾದ ಭಾರತೀದೇವಿಗಿಂತ ಮುಖ್ಯಪ್ರಾಣದೇವರಿಗೆ ಉತ್ತಮತ್ವವನ್ನು ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೆ 'ಇಯದಾಮನನಾತ್' ಇತ್ಯಾದಿ ಸೂತ್ರಗಳಲ್ಲಿ ಹಾಗೂ ಛಾಂದೋಗ್ಯಭಾಷ್ಯದಲ್ಲೆಲ್ಲಾ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂಬರ್ಥವನ್ನೇ ಅಂಗೀಕರಿಸಿದ್ದಾರೆ. ಹೀಗಿರುವಾಗ ಭಾಷ್ಯದಲ್ಲಿ ವಿಷ್ಣುವೆಂಬರ್ಥವನ್ನು ಅಂಗೀಕರಿಸಿದ್ದು ವಿರುದ್ಧವಾಗುತ್ತದಲ್ಲವೆ ಎಂಬ ವಿರೋಧಾಶಂಕೆಯು ಬರುತ್ತದೆ.

ಇದಕ್ಕೆ ಸಮಾಧಾನ ಹೀಗೆ - ಶ್ರೀಮದಾಚಾರ್ಯರು ಭಾಷ್ಯದಲ್ಲಿ ಪ್ರಾಣಶಬ್ದಕ್ಕೆ ವಿಷ್ಣುವೆಂಬರ್ಥವನ್ನು ಒಪ್ಪಲು ಅನೇಕ ಕಾರಣಗಳಿವೆ. ಪೂರ್ವಪಕ್ಷಕಾರರಂತೆ ನಾವು ಕೇವಲ ಪ್ರಾಣಪರತ್ವವನ್ನು ಮಾತ್ರ ಒಪ್ಪಿರುವುದಿಲ್ಲ. ವಿಷ್ಣುಪರತ್ವವನ್ನೂ ಸಹ ಒಪ್ಪುತ್ತೇವೆ. ಅಥವಾ ಮುಖ್ಯಪ್ರಾಣದೇವರಿಗಿಂತ ವಿಷ್ಣು ಉತ್ತಮನಾಗಿದ್ದಾನೆಂದು ಹೇಳಬೇಕಾಗಿದೆ. ಅಥವಾ ಅಂತರ್ಯಾಮಿತ್ವೇನೈವ ಉತ್ಕ್ರಮಣಾದಿಲಿಂಗವನ್ನು ವಿಷ್ಣುವಿನಲ್ಲಿ ಕೂಡಿಸಬೇಕಾಗಿದೆ. ಈ ಎಲ್ಲಾ ಕಾರಣಕ್ಕೋಸ್ಕರ ವಿಷ್ಣುಪರತ್ವವನ್ನು ಪ್ರಾಣಶಬ್ದಕ್ಕೆ ಒಪ್ಪಿರುತ್ತಾರೆ. ಆದ್ದರಿಂದ ಬೇರೆ ಬೇರೆ ವಿವಕ್ಷೆಗಳಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣ ಹಾಗೂ ವಿಷ್ಣು ಪ್ರತಿಪಾದ್ಯರಾಗಿದ್ದಾರೆಂದು ಉತ್ತರಿಸಬೇಕಾಗಿಲ್ಲ ಹೊರತಾಗಿ ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರೂ ಸಹ ಪ್ರತಿಪಾದ್ಯರೇ ಆಗಿದ್ದಾರೆಂದು ಒಪ್ಪಬೇಕು. ವಿಕಲ್ಪಪಕ್ಷವನ್ನು ಆಶ್ರಯಿಸಬಾರದು. ಸಮುಚ್ಚಯಪಕ್ಷವನ್ನೇ ಆಶ್ರಯಿಸಬೇಕು.

ಉತ್ಕ್ರಮಣವೆಂಬ ಕ್ರಿಯೆಯು ವ್ಯಾಪ್ತನಾದ ಭಗವಂತನಲ್ಲಿ ಹೇಗೆ ಕೂಡುತ್ತದೆ? ಎಂಬ ಗೊಂದಲವು ಬೇಡ. ಎಲ್ಲೆಡೆ ವ್ಯಾಪ್ತವಾದ ಜಾತಿಯು ಮಡಿಕೆ ಮೊದಲಾದವುಗಳಲ್ಲಿ ಇರುತ್ತದೆಂದು ಒಪ್ಪಿದ್ದಾರೆ. ಮತ್ತು ಆಕಾಶ, ದಿಕ್

ಇವೆರಡೂ ವ್ಯಾಪ್ತವಾಗಿರುವುದರಿಂದ ಪರಸ್ಪರ ಸಂಯೋಗವಿದ್ದರೂ ತಾರ್ಕಿಕರು ನಿತ್ಯದ್ರವ್ಯಗಳಿಗೆ ಸಂಯೋಗವನ್ನು ಒಪ್ಪಿರುವುದಿಲ್ಲ. ಅದರಂತೆ ಎಲ್ಲೆಡೆ ಭಗವಂತನು ವ್ಯಾಪ್ತನಾಗಿದ್ದರೂ ಕ್ರಿಯೆಯನ್ನು ಒಪ್ಪಲು ಅಡ್ಡಿಯಿಲ್ಲ.

'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಭಗವಂತನಲ್ಲಿರುವ ಕ್ರಿಯೆ ಮೊದಲಾದವು ಸ್ವಾಭಾವಿಕವಾಗಿರುತ್ತವೆ ಎಂದು ತಿಳಿದು ಬರುತ್ತಿದೆ. ಮತ್ತು ಭಗವಂತನಲ್ಲಿ ಇಂತಹ ಕ್ರಿಯೆಯಿರಲು ಅಣುತ್ವವೆಂಬ ಧರ್ಮವಿದೆ. ಅಣುವಾದ ಪದಾರ್ಥಗಳಲ್ಲಿ ಕ್ರಿಯೆಯಿರುವುದು ಲೋಕದಲ್ಲಿ ಕಾಣುತ್ತೇವೆ. ಭಗವಂತನಿಗೆ ಅಣುರೂಪವೂ ಇರುವುದರಿಂದ ಕ್ರಿಯೆಯನ್ನು ಹೇಳಲು ಏನೂ ತೊಂದರೆಯಿಲ್ಲ. ಮತ್ತು ಇವನಲ್ಲಿರುವ ಕ್ರಿಯೆಯು ಲೋಕವಿಲಕ್ಷಣವಾಗಿರುವುರಿಂದ ಉತ್ತರದೇಶಸಂಯೋಗ, ಪೂರ್ವದೇಶವಿಭಾಗ ಮೊದಲಾದ ಪ್ರಯೋಜನಗಳಿಲ್ಲದಿದ್ದರೂ ಸ್ವಾಭಾವಿಕವಾಗಿ ಇರುತ್ತದೆಂದು ಒಪ್ಪಬೇಕು.

ಆದ್ದರಿಂದ ಉತ್ಕ್ರಮಣವೆಂಬ ಪೂರ್ವಪಕ್ಷಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಯಿತು. ಈ ಲಿಂಗದಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸಾಧಿಸಲು ಬರುವುದಿಲ್ಲ.

ಯಾವುದೇ ಪದಾರ್ಥದಲ್ಲಿ ಕ್ರಿಯೆ ಉಂಟಾಗಬೇಕೆಂದರೆ ಅದು ಅಣುರೂಪವಾಗಿರಬೇಕು. ಅಥವಾ ಮಧ್ಯಮ ಪರಿಮಾಣವುಳ್ಳದ್ದಾಗಿರಬೇಕು. ಏಕೆಂದರೆ ಕ್ರಿಯೆ ಎಂದರೆ ತಾನು ಯಾವ ಸ್ಥಳದಲ್ಲಿ ಇರುತ್ತದೋ, ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗುವುದು ಎಂದರ್ಥ. ಎಲ್ಲೆಡೆ ತುಂಬಿರುವ ವಸ್ತು ಇರುವ ಸ್ಥಳದಿಂದ ಹೊರಟು ಮತ್ತೊಂದು ಸ್ಥಳಕ್ಕೆ ಹೋಗಲು ಸಾಧ್ಯವೇ ಇಲ್ಲ. ಭಗವಂತನು ಎಲ್ಲೆಡೆ ವ್ಯಾಪ್ತನಾಗಿದ್ದಲ್ಲಿ ಇಂತಹ ಕ್ರಿಯೆಯನ್ನು ಒಪ್ಪುವುದು ಹೇಗೆ ? ಎಂಬುದೇ ಇಲ್ಲಿ ಬಂದಿರುವ ದೊಡ್ಡ ಗೊಂದಲ.

ಈ ಗೊಂದಲಕ್ಕೆ ಅನೇಕ ಬಗೆಯಲ್ಲಿ ಪರಿಹಾರಗಳನ್ನು ತಿಳಿದುಕೊಳ್ಳಬಹುದು. ಭಗವಂತನು ಅಣುವಿಗಿಂತ ಅಣುಸ್ವರೂಪನು, ಹಾಗೂ ಮಹತ್‌ಪದಾರ್ಥಕ್ಕಿಂತಲೂ ಮಹತ್‌ಸ್ವರೂಪನೂ ಆಗಿರುತ್ತಾನೆ. ಈ ವಿರುದ್ಧ ಧರ್ಮವು ಒಬ್ಬನೇ ಭಗವಂತನಲ್ಲಿ ಒಪ್ಪಲು ಹೇಗೆ ಸಾಧ್ಯ? ಎಂಬುದು ಮತ್ತೊಂದು ಗೊಂದಲ. ಈ ಗೊಂದಲವನ್ನು ಪರಿಹರಿಸಿಕೊಂಡರೆ ಎಲ್ಲೆಡೆ ವ್ಯಾಪ್ತನಾದ ಭಗವಂತನಲ್ಲಿ ಕ್ರಿಯೆಯೂ ಸಹ ಉಪಪನ್ನವಾಗುತ್ತದೆಂದು ಸುಲಭವಾಗಿ ತಿಳಿಯಬಹುದು. ನ್ಯಾಯಸುಧಾ, ಅನುವ್ಯಾಖ್ಯಾನ ಹಾಗೂ ತತ್ವಪ್ರಕಾಶಿಕೆ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಪ್ರಮೇಯಗಳನ್ನು ಗ್ರಂಥಕಾರರು ಇಲ್ಲಿ ಸಂಗ್ರಹಿಸಿ, ಈ ಎಲ್ಲಾ ಪ್ರಶ್ನೆಗಳನ್ನು ಪರಿಹರಿಸುತ್ತಿದ್ದಾರೆ. ಭಗವಂತನಲ್ಲಿ ಯಾವಾಗ ಅಣುತ್ವವೆಂಬ ಧರ್ಮವಿರುತ್ತದೋ, ಆವಾಗಲೇ ಮಹತ್ತ್ವವೆಂಬ ಧರ್ಮವು ಅದೇ ಪ್ರಕಾರದಲ್ಲಿರುತ್ತದೆಂದು ನಾವು ಹೇಳುವುದಿಲ್ಲ, ಸ್ವಲ್ಪ ವ್ಯತ್ಯಾಸವಿದೆ. ಪ್ರತಿಯೊಂದು ಗುಣಗಳೂ ಸಹ ಶಕ್ತಿ ಹಾಗೂ ವ್ಯಕ್ತಿ ಸ್ವರೂಪದಲ್ಲಿರುತ್ತದೆ. ಅಣುತ್ವವು ಯಾವಾಗ ಶಕ್ತಿಸ್ವರೂಪದಲ್ಲಿರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿರೂಪದಲ್ಲಿರುತ್ತದೆ. ಶಕ್ತಿರೂಪವೆಂದರೆ ಆ ಸಂದರ್ಭದಲ್ಲಿ ಆ ರೂಪದಿಂದ ಕೆಲಸವಾಗುತ್ತಿರುವುದಿಲ್ಲ ಎಂದರ್ಥ. ವ್ಯಕ್ತಿಸ್ವರೂಪವೆಂದರೆ ಅದೇ ಸಂದರ್ಭದಲ್ಲಿ ಆ ರೂಪದಿಂದ ಆ ಕಾರ್ಯವು ನಡೆಯುತ್ತಿರುತ್ತದೆ ಎಂದರ್ಥ. ಆದ್ದರಿಂದ ಅಣುತ್ವ ಹಾಗೂ ಮಹತ್ತ್ವಗಳು ನಿರಂತರವಾಗಿ ಭಗವಂತನಲ್ಲಿ ಇದ್ದರೂ ಸಹ ಎರಡೂ ಧರ್ಮಗಳು ಕೇವಲ ಶಕ್ತಿರೂಪದಿಂದಾಗಲೀ ಅಥವಾ ವ್ಯಕ್ತಿರೂಪದಿಂದಾಗಲೀ, ಇರುವುದಿಲ್ಲವೆಂಬ ಸೂಕ್ಷ್ಮಪ್ರಮೇಯವನ್ನು ಗಮನಿಸಬೇಕು. ಅಂತೂ ಭಗವಂತನಲ್ಲಿ ಅಣುತ್ವವು ಯಾವಾಗ ವ್ಯಕ್ತಿಸ್ವರೂಪದಿಂದ ಇರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿಸ್ವರೂಪದಿಂದ ಇರುವುದಿಲ್ಲವೆಂದಂತಾಯಿತು. ಈ ಬಗೆಯಲ್ಲಿ ಚಿಂತಿಸಿದಾಗ ಅಣುಸ್ವರೂಪನಾದ

ಭಗವಂತನಿಗೆ ಪೂರ್ವದೇಶ ವಿಭಾಗ, ಉತ್ತರದೇಶ ಸಂಯೋಗ ಮೊದಲಾದವುಗಳೆಲ್ಲವೂ ಸಿದ್ಧವಾಗುತ್ತವೆ. ಯಾವಾಗ ಮಹತ್ತ್ವವು ವ್ಯಕ್ತವಾಗಿರುತ್ತದೋ, ಆವಾಗ ಅಣುತ್ವವು ಶಕ್ತಿರೂಪದಲ್ಲಿರುವುದರಿಂದ ಪೂರ್ವದೇಶವಿಭಾಗ ಅಥವಾ ಉತ್ತರದೇಶಸಂಯೋಗಗಳನ್ನು ಒಪ್ಪಲು ಸಾಧ್ಯವಿಲ್ಲ. ಅಂದರೆ ವ್ಯಕ್ತನಾದ ಅಣುಸ್ವರೂಪವುಳ್ಳ ಭಗವಂತನಲ್ಲಿ ಕ್ರಿಯೆಯು ನಡೆಯುತ್ತದೆಂದು ಇದರ ಅಭಿಪ್ರಾಯ. ಭಗವಂತನಲ್ಲಿ ಅನೇಕ ಕ್ರಿಯೆಗಳಿವೆ. ಸೃಷ್ಟಿ ಮಾಡುವ ಕ್ರಿಯೆ, ಸಂಹಾರ ಮಾಡುವ ಕ್ರಿಯೆ ಇತ್ಯಾದಿಯಾಗಿ ಎಣಿಸಲು ಸಾಧ್ಯವಾಗದಷ್ಟು ಕ್ರಿಯೆಗಳಿವೆ. ಇವೆಲ್ಲವೂ ಸಹ ಭಗವತ್ ಸ್ವರೂಪವೇ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಸೃಷ್ಟಿ ಮಾಡುವ ಕ್ರಿಯೆಯು ಭಗವತ್‌ಸ್ವರೂಪವಾದ್ದರಿಂದ ನಿರಂತರವಾಗಿರುವುದಾದರೆ, ನಿರಂತರ ಸೃಷ್ಟಿಯೇ ಆಗುತ್ತಿರಬೇಕಾಗುತ್ತದೆ. ಸಂಹಾರ, ನಿಯಮನ ಮೊದಲಾದ ಕ್ರಿಯೆಗಳು ನಡೆಯಲು ಸಾಧ್ಯವಿಲ್ಲದಂತಾಗುತ್ತದೆ. ಈಗಾಗಲೇ ಹೇಳಿದಂತೆ ಪ್ರತಿಯೊಂದೂ ಕ್ರಿಯೆಯನ್ನು ಶಕ್ತ್ಯಾತ್ಮನಾ, ವ್ಯಕ್ತ್ಯಾತ್ಮನಾ ವಿಭಾಗ ಮಾಡಿಕೊಂಡಾಗ ಯಾವಾಗ ಸೃಷ್ಟಿ ಸಮಯವು ಪ್ರಾಪ್ತವಾಗುತ್ತದೋ, ಆವಾಗ ಮಾತ್ರ ಸೃಷ್ಟಿ ಮಾಡುವ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಸಂಹಾರ ಮಾಡುವ ಕಾಲವು ಪ್ರಾಪ್ತವಾದಾಗ ಸಂಹಾರ ಮಾಡುವಂತಹ ಕ್ರಿಯೆಯು ಪ್ರಾಪ್ತವಾಗುತ್ತದೆ. ಹೀಗೆ ಹೇಳಿದಾಗ ಎಲ್ಲಾ ವಿಧದ ಸಮಾಧಾನಗಳನ್ನು ಹೇಳಿದಂತಾಗುತ್ತದೆ. ಶ್ರೀರಾಮಚಂದ್ರನು ರಾವಣನನ್ನು ಕೊಂದನು ಎಂದು ಹೇಳಿದಾಗ ರಾವಣನ ಹನನವೆಂಬ ಕ್ರಿಯೆಯು ಶ್ರೀರಾಮಚಂದ್ರನಲ್ಲಿ ನಿರಂತರವಾಗಿ ಇರುತ್ತದೆ. ಅಂದ ಮಾತ್ರಕ್ಕೆ ಯಾವಾಗಲೂ ರಾವಣನನ್ನು ಸಂಹಾರ ಮಾಡುತ್ತಲೇ ಇರುತ್ತಾನೆ ಎಂದರ್ಥವಲ್ಲ. ಹೊರತಾಗಿ ಯಾವಾಗ ಆ ಸಮಯವು ಪ್ರಾಪ್ತವಾಗುತ್ತದೋ, ಆ ಸಂದರ್ಭದಲ್ಲಿ ಮಾತ್ರ ರಾವಣನನ್ನು ಕೊಲ್ಲುವಂತಹ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಉಳಿದ ಕಾಲಗಳಲ್ಲಿ ಶಕ್ತಿಸ್ವರೂಪದಲ್ಲಿರುತ್ತದೆ ಎಂದು ತಿಳಿಯ ಬೇಕಾದ ಮುಖ್ಯಪ್ರಮೇಯ.

ಹೀಗೆ ಭಗವಂತನ ಕ್ರಿಯೆಗಳು ಅಣುತ್ವ, ಮಹತ್ತ್ವ ಮೊದಲಾದ ಗುಣಗಳು ಶಕ್ತಿ ಹಾಗೂ ವ್ಯಕ್ತಿಸ್ವರೂಪ ಎಂಬ ಎರಡು ಬಗೆಯನ್ನು ಹೊಂದಿರುತ್ತವೆ ಎಂದಷ್ಟೇ ಅಲ್ಲ. ಭಗವಂತನಿಗೆ ಅನೇಕ ರೂಪಗಳು ಪ್ರಮಾಣಸಿದ್ಧವಾಗಿದೆ. ಒಂದು ರೂಪದಲ್ಲಿ ಅಣುತ್ವವು ವ್ಯಕ್ತವಾಗಬಹುದು. ಮತ್ತೊಂದು ರೂಪದಲ್ಲಿ ಮಹತ್ತ್ವವು ವ್ಯಕ್ತವಾಗಬಹುದು. ಹೀಗೆ ರೂಪಗಳ ಭೇದದಿಂದಲೂ ಅಣುತ್ವ ಮಹತ್ತ್ವಗಳನ್ನು ಉಪಪಾದಿಸುವುದು ಸುಲಭ. ಸವಿಶೇಷ ಭೇದವಿರುವುದರಿಂದ ಹೀಗೆ ಭೇದದ ಕಾರ್ಯವು ಆಯಾ ರೂಪಗಳಲ್ಲಿ ನಡೆಯುತ್ತವೆ. ಅಥವಾ ಅಚಿಂತ್ಯಾತ್ಮಕ ಶಕ್ತಿಯನ್ನು ಹೊಂದಿರುವ ಭಗವಂತನಲ್ಲಿ ನಮ್ಮ ಕಲ್ಪನೆಗೆ ಮೀರಿದ ವಿಚಾರಗಳೇ ಇರುತ್ತವೆ.

ಸೂತ್ರದಲ್ಲಿ 'ಸಂಪ್ರಸಾದಾತ್' ಎಂದು ಹೇಳಿದ್ದಾರೆ. 'ಸಂಪ್ರಸಾದಾತ್' ಎಂಬ ಶಬ್ದಕ್ಕೆ ಪೂರ್ಣಸುಖವುಳ್ಳವನಾದ್ದರಿಂದ ಎಂದರ್ಥ. ಒಂದು ವೇಳೆ 'ಸಂಪ್ರಸಾದಾತ್' ಶಬ್ದವನ್ನು ಬಳಸದೇ 'ಪೂರ್ಣಸುಖಾತ್' ಎಂದೇ ಹೇಳಿದ್ದರೆ, ಸುಖವಿರುವುದಾದರೆ ದುಃಖವು ಬರಲಿ, ಅಥವಾ ಸುಖದ ಜೊತೆಗೆ ದುಃಖವು ಅವಿನಾಭೂತವಾಗಿದೆ, ಇತ್ಯಾದಿಯಾಗಿ ಪ್ರಶ್ನೆಗಳು ಹುಟ್ಟುತ್ತಿದ್ದವು. 'ಸಂಪ್ರಸಾದಾತ್' ಶಬ್ದವನ್ನು ಬಳಸಿದ್ದರಿಂದ ಸುಖದ ಕಾರ್ಯವೆನಿಸಿದ ಪ್ರಸಾದವು ಈಶ್ವರನಲ್ಲಿ ಪೂರ್ಣವಾಗಿರುವುದರಿಂದ ದುಃಖಕ್ಕೆ ಅವಕಾಶವಿಲ್ಲ. ಮತ್ತು ಜ್ಞಾನದಂತೆ ಸುಖವೂ ಸಹ ದುಃಖದಿಂದ ಅವಿನಾಭೂತವಾಗಿಲ್ಲ ಎಂಬೆರಡು ಪ್ರಮೇಯಗಳನ್ನು ಸೂತ್ರಕಾರರು ಸೂಚಿಸಿದ್ದಾರೆ. ಉಪನಿಷತ್ತಿನಲ್ಲಿರುವ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಸೂತ್ರಗಳ ಕ್ರಮವಿರುವುದರಿಂದ ಸೂತ್ರಗಳ ವಿನ್ಯಾಸ ಶೈಲಿಯು ಅತ್ಯಂತ ಅರ್ಥಪೂರ್ಣವಾಗಿದೆ.

# ಅಕ್ಷರಾಧಿಕರಣ

ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಲಕ್ಷ್ಮೀದೇವಿಯಲ್ಲಿಯೂ ಅಕ್ಷರಶಬ್ದವನ್ನು ಪ್ರಯೋಗಿಸಬಹುದಲ್ಲವೇ? ಎಂಬ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಲಕ್ಷ್ಮೀದೇವಿ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಉಭಯತ್ರಪ್ರಸಿದ್ಧವೆನಿಸುತ್ತದೆ.

ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಹೇಳುವುದು ಎಷ್ಟು ಸ್ವರಸ? ಏಕೆಂದರೆ ಅಕಾರಾದಿ ವರ್ಣಗಳಲ್ಲಿಯೂ ಅಕ್ಷರಶಬ್ದದ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಆದ್ದರಿಂದ ಲೋಕರೂಢಿಯನ್ನು ವಿವಕ್ಷಿಸಿದಾಗ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಆದರೆ ಸಮನ್ವಯ ಮಾಡಬೇಕಾಗಿರುವ ಶಬ್ದವು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಾದರೂ ಪ್ರಸಿದ್ಧವಾಗಿರಬೇಕೆಂಬ ಅಭಿಪ್ರಾಯವನ್ನು ಹೇಳಬಾರದು. ಆ ಸಮನ್ವಯ ಮಾಡಬೇಕಾದ ಶಬ್ದವನ್ನು ಪೂರ್ವಪಕ್ಷಿಯು ಯಾವ ಪದಾರ್ಥದಲ್ಲಿ ಸಮರ್ಥಿಸುತ್ತಾನೋ ಅಂತಹ ಪದಾರ್ಥದಲ್ಲಿ ಮತ್ತು ಸಿದ್ಧಾಂತಕ್ಕೆ ವಿಷಯವಾದ ವಸ್ತುವಿನಲ್ಲಿ ಸಾಧಾರಣವಾಗಿದ್ದರೆ ಸಾಕು. ಪೂರ್ವಪಕ್ಷಿಯು ಅಕಾರಾದಿ ವರ್ಣಗಳನ್ನಾಗಲೀ, ಜಡಪ್ರಕೃತಿಯನ್ನಾಗಲೀ ಅಕ್ಷರವೆಂದು ಆಕ್ಷೇಪಿಸುತ್ತಿಲ್ಲವಾದ್ದರಿಂದ ಅವುಗಳಲ್ಲಿರುವ ರೂಢಿಯನ್ನು ವಿವಕ್ಷಿಸಬೇಕಾಗಿಲ್ಲ. ಆದ್ದರಿಂದಲೇ ಈ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವೂ ಸಹ ಆಗುವುದಿಲ್ಲವೆಂದು ತಿಳಿಯಬೇಕು. ಅವಿನಾಶಿತ್ವ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಿದಾಗ ಕೇವಲ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆಂದು ನ್ಯಾಯವಿವರಣಕಾರರು ತಿಳಿಸಿರುತ್ತಾರೆ. ಆದ್ದರಿಂದ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ನಾವು ತಿಳಿಯಬಾರದು. ವಾಸ್ತವಿಕವಾಗಿ ಮಹಾಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ಪ್ರಯೋಗಸಾಧಾರಣ್ಯವನ್ನು ಹೇಳಬಹುದು. ಆದರೆ ಯಾವ ಪೂರ್ವಪಕ್ಷಿಯು ಮಹಾಲಕ್ಷ್ಮಿಯೇ ಅಕ್ಷರಳಾಗಿದ್ದಾಳೆಂದು ಆಕ್ಷೇಪಿಸುತ್ತಿದ್ದಾನೋ, ಅವನು ವಿಷ್ಣುವಿನಲ್ಲೂ ಅಕ್ಷರಶಬ್ದದ ಪ್ರಯೋಗವನ್ನು ಒಪ್ಪಲಾರನು. ಆದ್ದರಿಂದ ಅವಿನಾಶಿತ್ವವೆಂಬ ಧರ್ಮದ ಮೂಲಕವಾಗಿಯೇ ಉಭಯಸಾಧಾರಣ್ಯವನ್ನು ಹೇಳಬೇಕು.

ಅಕ್ಷರಶಬ್ದಕ್ಕೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನಷ್ಟೇ ಆಶ್ರಯಿಸಿದರೆ ಅಕಾರಾದಿವರ್ಣಗಳಲ್ಲಿಯೂ ಇದು ಇರುವುದರಿಂದ ಅತಿಪ್ರಸಕ್ತಿ ಬರುತ್ತದೆ. ಆದ್ದರಿಂದ ರೂಢಿಯನ್ನೂ ಸಹ ಆಶ್ರಯಿಸಬೇಕು. ಇದರಿಂದ ಅಕ್ಷರಶಬ್ದವು ಪಂಕಜಾದಿಶಬ್ದಗಳಂತೆ ಯೋಗರೂಢವಾದ ಶಬ್ದವೆಂದು ಸ್ಪಷ್ಟವಾಗುತ್ತದೆ.

ಅಕ್ಷರಶಬ್ದವು ಸಂಶಯಕೋಟಿಗಳಲ್ಲಷ್ಟೇ ಸಾಧಾರಣವಾಗಬೇಕು. ಆದರೆ ಅಕಾರಾದಿವರ್ಣಗಳಲ್ಲಿಯೂ ಸಹ ಅಕ್ಷರಶಬ್ದದ ಪ್ರಯೋಗವಿರುವುದರಿಂದ ಉಭಯಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಗ್ರಂಥಕಾರರು ಎರಡು ಬಗೆಯಲ್ಲಿ ಉತ್ತರಿಸಿದ್ದಾರೆ. ಉಭಯತ್ರಪ್ರಸಿದ್ಧವಾಗಬೇಕೆಂದರೆ ಸಂಶಯಕೋಟಿಗಳಲ್ಲಿ ಸಾಧಾರಣವಾಗಿದ್ದರೆ ಸಾಕು, ಬೇರೆಡೆ ಇರಬಾರದೆಂದೇನೂ ಇಲ್ಲ. ಸಂಶಯಕೋಟಿಗಳೆರಡರಲ್ಲಿ ಸಾಧಾರಣವಾಗಿರುವ ಪ್ರಯುಕ್ತವೇ ಉಭಯತ್ರ-ಪ್ರಸಿದ್ಧವೆನಿಸುತ್ತದೆಂಬುದು ಒಂದು ಬಗೆಯ ಪರಿಹಾರ.

ಶರೀರವಿಯೋಗ ಇಲ್ಲದಿರುವಿಕೆ ಎಂಬ ಯೋಗಾರ್ಥವನ್ನು ಆಶ್ರಯಿಸಿದಾಗ ಅಕ್ಷರಶಬ್ದವು ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆ. ಅಕಾರಾದಿ ವರ್ಣಗಳಲ್ಲಾಗಲೀ, ಜಡಪ್ರಕೃತಿಯಲ್ಲಾಗಲೀ ಈ ಪ್ರವೃತ್ತಿನಿಮಿತ್ತವು ಬರುವುದೇ ಇಲ್ಲ. ಹಿಂದೆ ಹೇಳಿದಂತೆ ಕೇವಲ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದರೆ ಅಕಾರಾದಿ ವರ್ಣಗಳಲ್ಲಿಯೂ ಸಹ ಅಕ್ಷರಶಬ್ದವು ಸಾಧಾರಣವಾಗುತ್ತಿತ್ತು. ಅದರ ಪರಿಹಾರಕ್ಕಾಗಿ ರೂಢ್ಯರ್ಥವನ್ನು ಸ್ವೀಕರಿಸುವ ಆವಶ್ಯಕತೆಯಿರುತ್ತಿತ್ತು. ಆದರೆ ಶರೀರವಿಯೋಗರಾಹಿತ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದಾಗ ಅಕಾರಾದಿ ವರ್ಣಗಳಲ್ಲಿ ಇದು ಬರುವುದೇ ಇಲ್ಲ.

ನಾಶ ಶಬ್ದಕ್ಕೆ ಸ್ವರೂಪನಾಶವೆಂಬರ್ಥ ಇರುವಂತೆ ಶರೀರವಿಯೋಗವೆಂಬರ್ಥವೂ ಸಹ ಇರುವುದರಿಂದ 'ದ್ವಾವಿಮೌ ಪುರುಷೌ ಲೋಕೇ' ಎಂಬ ಭಗವದ್ಗೀತೆಯ ಆಧಾರದಿಂದ ಶರೀರವಿಯೋಗ ಇಲ್ಲದಿರುವಿಕೆಯೂ ಸಹ ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಬರುತ್ತದೆಂದು ಸ್ಪಷ್ಟವಾಗುತ್ತದೆ. ಹೀಗೆ ಅಕ್ಷರಶಬ್ದದ ಅರ್ಥವನ್ನು ಹೇಳಿದಾಗ ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗುತ್ತದೆ ಹೊರತು, ಅಕಾರಾದಿ ವರ್ಣಗಳಲ್ಲಿ ಸಾಧಾರಣವಾಗುವುದಿಲ್ಲ. ಆದ್ದರಿಂದ ಸಂಶಯಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತಕೋಟಿಗಳಲ್ಲಷ್ಟೇ ಸಾಧಾರಣವಾದದ್ದನ್ನು ಉಭಯತ್ರಪ್ರಸಿದ್ಧವೆಂದು ಹೇಳಬಹುದು.

ಹಾಗಾದರೆ ಪಂಕಜಾದಿಶಬ್ದಗಳಂತೆ ಇದನ್ನು ಯೋಗರೂಢವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಹುದು. ಆದರೆ ಇಲ್ಲಿಗೂ ಅಲ್ಲಿಗೂ ವ್ಯತ್ಯಾಸವಿದೆ. ಹೇಗೆಂದರೆ ಪಂಕಜಶಬ್ದಕ್ಕೆ ಕೇವಲ ಯೌಗಿಕಾರ್ಥವನ್ನು ಸ್ವೀಕರಿಸಿದರೆ, ಕುಮುದಾದಿಗಳಲ್ಲಿ ಅತಿಪ್ರಸಕ್ತಿ ಬರುತ್ತದೆ. ಮತ್ತು ಪದ್ಮತ್ವಜಾತಿ ಉಪಸ್ಥಿತಿಯೂ ಸಹ ಬರುತ್ತಿದೆ. ಮತ್ತು ಕೇವಲ ಪಂಕಜನಿಕರ್ತೃತ್ವವೆಂಬ ಯೌಗಿಕಾರ್ಥವನ್ನು ವಿವಕ್ಷಿಸಲು ಪ್ರಮಾಣವೂ ಸಹ ಇರುವುದಿಲ್ಲ. ಆದರೆ ಅಕ್ಷರಶಬ್ದದಲ್ಲಿ ಕೇವಲ ಶರೀರವಿಯೋಗರಾಹಿತ್ಯವೆಂಬ ಯೌಗಿಕಾರ್ಥವನ್ನು ವಿವಕ್ಷಿಸಿದಾಗ ಯಾವುದೇ ಅತಿಪ್ರಸಂಗವು ಬರುತ್ತಿಲ್ಲ. ಅಕ್ಷರತ್ವವೆಂಬ ಜಾತಿಯ ಉಪಸ್ಥಿತಿಯೂ ಬರುತ್ತಿಲ್ಲ. ಕೇವಲ ಯೋಗಾರ್ಥವನ್ನು ಸ್ವೀಕರಿಸಲು ಪ್ರಮಾಣವೂ ಕೂಡ ಇರುತ್ತದೆ. ಆದ್ದರಿಂದ ಪಂಕಜಶಬ್ದದಂತೆ ಇದನ್ನು ಯೋಗರೂಢವೆಂದು ವಿವಕ್ಷಿಸಬಾರದು. ಇಲ್ಲಿ ಶರೀರವಿಯೋಗರಾಹಿತ್ಯವೆಂಬ ಅರ್ಥವನ್ನು ವಿವಕ್ಷಿಸಿದಾಗ ಮಹಾವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಯೌಗಿಕಾರ್ಥವಾಗಿದೆ. ಈ ಅರ್ಥವನ್ನು ವಿವಕ್ಷಿಸದೇ ಕೇವಲ ಅಕ್ಷರತ್ವ ಎಂಬ ಜಾತಿಯನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ಅಕಾರಾದಿವರ್ಣಗಳಲ್ಲಿ ರೂಢವಾಗಿದೆ. ಆದ್ದರಿಂದ ಶಬ್ದವು ಒಂದೇ ಆಗಿದ್ದರೂ ಈ ಶಬ್ದದ ಧರ್ಮವು ಬೇರೆ ಬೇರೆ ಆಗಿರುವುದರಿಂದ ಧರ್ಮಗಳ ಭೇದದಿಂದಷ್ಟೇ ಯೋಗ ಹಾಗೂ ರೂಢಿಯೆಂದು ಈ ಅಕ್ಷರಶಬ್ದವನ್ನು ಕರೆಯಲಾಗಿದೆ. ಹೊರತಾಗಿ ಒಂದೇ ಅರ್ಥದಲ್ಲಿ ಯೋಗರೂಢವೆಂದು ಹೇಳಬಾರದು. ಹೀಗೆ ವ್ಯತ್ಯಾಸವಿದೆ.

ಹಾಗಾದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಇಂದ್ರಾದಿ ಶಬ್ದಗಳೂ ಕೂಡ ಅನ್ಯತ್ರಪ್ರಸಿದ್ಧವೆಂದೆನಿಸಲಾರವು. ಏಕೆಂದರೆ ಅವುಗಳಲ್ಲಿಯೂ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಉಭಯಸಾಧಾರಣ್ಯವನ್ನು ಹೇಳಲು ಬರುವುದರಿಂದ ಉಭಯತ್ರಪ್ರಸಿದ್ಧತ್ವವನ್ನೇ ಅವುಗಳಿಗೂ ಹೇಳಬೇಕಲ್ಲವೇ? ಎಂಬುದು ಇಲ್ಲಿ ಬರುವ ಮತ್ತೊಂದು ಗೊಂದಲ. ಆದರೆ ನಮ್ಮ ಬುದ್ಧಿಯ ವಿವಕ್ಷೆಯಿಂದಷ್ಟೇ ಆಯಾಶಬ್ದಗಳನ್ನು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧವೆಂದು ಪರಿಗಣಿಸಬೇಕು. ಕೇವಲ ರೂಢ್ಯರ್ಥವನ್ನಷ್ಟೇ ಸ್ವೀಕರಿಸಿ ಇಂದ್ರಾದಿ ಶಬ್ದಗಳನ್ನು ಅನ್ಯತ್ರಪ್ರಸಿದ್ಧವೆಂದು ಪ್ರಥಮಪಾದದಲ್ಲಿ ವಿವಕ್ಷಿಸಲಾಗಿದೆ. ಒಂದು ವೇಳೆ ಪರಮೈಶ್ವರ್ಯಾದಿ

ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿದರೆ ಅಂತಹ ಶಬ್ದಗಳೆಲ್ಲವೂ ಉಭಯತ್ರಪ್ರಸಿದ್ಧವೆನಿಸುವುದರಿಂದ ಈ ಪಾದದಲ್ಲಿಯೇ ಅವುಗಳ ಸಮನ್ವಯವು ಸಿದ್ಧವಾಗುತ್ತದೆಂಬ ಉತ್ತರವನ್ನು ತಿಳಿಯಬೇಕು.

ಅಥವಾ ನಿತ್ಯದೇಹತ್ವವನ್ನು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಬಹುದು. ನಿತ್ಯದೇಹತ್ವವು ಸರ್ವಾಧಾರತ್ವದ ಅನ್ಯಥಾನುಪಪತ್ತಿಯಿಂದ ಪ್ರವೃತ್ತಿನಿಮಿತ್ತವೆಂದು ಸಿದ್ಧವಾಗುತ್ತದೆ. ಇಂತಹ ನಿತ್ಯದೇಹತ್ವವೆಂಬ ಪ್ರವೃತ್ತಿನಿಮಿತ್ತವು ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದೂ ಸಹ ಹೇಳಬಹುದು.

ಟೀಕೆಯಲ್ಲಿ ಅಕ್ಷರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಇದೇನೂ ತಪ್ಪಲ್ಲ. ಈಗಾಗಲೇ ಸಮರ್ಥಿಸಿದ ಮೂರು ವಿಧವಾದ ಪಕ್ಷಗಳಲ್ಲಿಯೂ ಅಕ್ಷರಶಬ್ದಕ್ಕೆ ನಾಮಾತ್ಮಕತ್ವವನ್ನು ಒಪ್ಪಲಾಗಿದೆ. ಕೇವಲ ಯೌಗಿಕಪಕ್ಷವನ್ನು ವಿವಕ್ಷಿಸಿದಾಗ ಅಕಾರಾದಿ ವರ್ಣಗಳಲ್ಲಿ ಅಕ್ಷರಶಬ್ದವು ರೂಢವಾಗಿರುವ ಪ್ರಯುಕ್ತ ನಾಮಾತ್ಮಕವಾಗಿದೆಯೆಂದು, ಯೋಗರೂಢಪಕ್ಷದಲ್ಲಿ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ನಾಮಾತ್ಮಕವಾಗಿದೆಯೆಂದು, ಕೇವಲ ನಾಮಾತ್ಮಕವೆಂಬ ಪಕ್ಷದಲ್ಲಂತೂ ನಾಮಾತ್ಮಕವೆಂದು ಹೇಳಿದ್ದು ಸಮಂಜಸವೇ ಆಗುತ್ತದೆ.

ಸೂತ್ರಕಾರರ ಅಧಿಕರಣ ರಚನೆಯು ಬಹಳ ಸ್ವಾರಸ್ಯಮಯವಾಗಿದೆ. ಈ ಅಧಿಕರಣಗಳ ಈ ಕ್ರಮಕ್ಕೆ ನಾಲ್ಕು ರೀತಿ ಕಾರಣವನ್ನು ತಿಳಿಯಬಹುದು - ಏಕೆಂದರೆಮೊದಲನೆಯ ದ್ಯುಭ್ವಾದ್ಯಧಿ- ಕರಣದಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಜಡವಾದ ಪ್ರಕೃತಿ ಹಾಗೂ ಸಕಲಜೀವರಲ್ಲಿ ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಸಕಲಜೀವರಿಗಿಂತ ಶ್ರೇಷ್ಠರಾದ ಮುಖ್ಯಪ್ರಾಣದೇವರಲ್ಲಿ ಭೂಮತ್ವವನ್ನು ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಮೂರನೆಯ ಈ ಅಕ್ಷರಾಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿರುವ ಅಕ್ಷರತ್ವವನ್ನು ನಿರಾಕರಿಸಿ ವಿಷ್ಣುವಿನಲ್ಲಿ ಅದನ್ನು ಸಮನ್ವಯ ಮಾಡುತ್ತಿರುವುದರಿಂದ ಅಧಿಕರಣಗಳ ತಾರತಮ್ಯವು ಅತ್ಯಂತ ಸಂಗತವಾಗಿದೆ.

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಕೇವಲ ಬಹಿರಂಗವಾದ ಎರಡು ಸಮಾಖ್ಯಾಪ್ರಮಾಣಗಳಿಂದಲೇ ಆಕ್ಷೇಪ ಮಾಡಿದರು, ಮತ್ತೆ ಎರಡನೆಯ ಭೂಮಾಧಿಕರಣದಲ್ಲಿ ಸಮಾಖ್ಯಾ-ಪ್ರಮಾಣಕ್ಕಿಂತಲೂ ಬಲಿಷ್ಠವಾದ ಉಪಕ್ರಮಪ್ರಮಾಣವನ್ನು ಆಶ್ರಯಿಸಿದರು. ಹಾಗೂ ಈ ಅಧಿಕರಣದಲ್ಲಿ ಆ ಎರಡು ಪ್ರಮಾಣಗಳಿಗಿಂತಲೂ ಬಲಿಷ್ಠವಾದ ಪ್ರವೃತ್ತಿನಿಮಿತ್ತದಿಂದ ಆಕ್ಷೇಪ ಮಾಡಿ ವಿಷ್ಣುವಿನಲ್ಲಿ ಅಕ್ಷರಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ.

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಬೇರೆ ಬೇರೆ ಪ್ರಕರಣಗಳಲ್ಲಿರುವ ಧರ್ಮಗಳಿಗೆ ವಿರೋಧಗಳನ್ನು ಪರಿಹರಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು. ಈ ಅಧಿಕರಣದಲ್ಲಿ ಒಂದೇ ವಾಕ್ಯದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಅಥವಾ ಹಿಂದಿನೆರಡು ಅಧಿಕರಣಗಳಲ್ಲಿ ಕೇವಲ ಒಂದೊಂದು ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು, ಆದರೆ ಈ ಅಧಿಕರಣದಲ್ಲಿ ಅನೇಕ ಧರ್ಮಗಳಿಗಿರುವ ವಿರೋಧವನ್ನು ಪರಿಹರಿಸಿದ್ದಾರೆ.

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದ, ಲಕ್ಷ್ಮೀದೇವಿಯೆಂಬರ್ಥವನ್ನು ಸ್ವೀಕರಿಸದೇ, ಉಳಿದ ಪದಾರ್ಥಗಳನ್ನಷ್ಟೇ ಅರ್ಥವನ್ನಾಗಿ ವ್ಯಾಖ್ಯಾನಿಸಬೇಕು. ಅಂತಹ ಆಕಾಶಾದಿ ಜಡಪದಾರ್ಥಗಳಿಗೆ ಆಶ್ರಯಳಾದವಳು ಲಕ್ಷ್ಮೀದೇವಿಯೆಂದು ಆವಾಗ ಹೇಳಬಹುದು. ಆದ್ದರಿಂದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆಂಬುದು ಪೂರ್ವಪಕ್ಷಕಾರರ ಉದ್ದೇಶ.

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯ ತನಕ ಇರುವ ಸಕಲಪದಾರ್ಥಗಳನ್ನು ವಿವಕ್ಷಿಸಬೇಕು. ಅಂತಹ ಸಕಲಪದಾರ್ಥಗಳಿಗೆ ಆಶ್ರಯನಾದವನು ವಿಷ್ಣು ಒಬ್ಬನೇ ಆಗುತ್ತಾನೆ. ಆದ್ದರಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧಾಂತಿಗಳ ಉದ್ದೇಶ.

ಅಕ್ಷರಶಬ್ದದಿಂದ ಪ್ರತಿಪಾದ್ಯಳಾದವಳು ಲಕ್ಷ್ಮೀದೇವಿಯೆಂದು ಪೂರ್ವಪಕ್ಷ. ವಿಷ್ಣುವು ಕ್ಷರಾಕ್ಷರ ಪುರುಷಾತೀತನಾದ್ದರಿಂದ ಅಕ್ಷರನೆನಿಸುವುದಿಲ್ಲ. ಲಕ್ಷ್ಮೀದೇವಿ ಮಾತ್ರ ಅಕ್ಷರಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ವಾಕ್ಯಗಳಲ್ಲಿರುವ ಅಕ್ಷರಶಬ್ದದಿಂದಲೂ ಸಹ ಲಕ್ಷ್ಮೀದೇವಿಯೇ ಪ್ರತಿಪಾದ್ಯಳು ಹೊರತು; ವಿಷ್ಣುವಲ್ಲ. ಆದ್ದರಿಂದ ಯಾವುದೇ ಶ್ರುತಿಗಳಲ್ಲಿರುವ ಅಕ್ಷರಶಬ್ದವು ಲಕ್ಷ್ಮೀದೇವಿಯನ್ನಷ್ಟೇ ಪ್ರತಿಪಾದಿಸುವ ಪ್ರಯುಕ್ತ ಅಕ್ಷರಶ್ರುತಿಯು ನಿರವಕಾಶವಾಗಿದೆ. ಇಂತಹ ನಿರವಕಾಶವಾದ ಶ್ರುತಿಯ ಬಲದಿಂದ ಲಕ್ಷ್ಮೀದೇವಿಯು ಅಕ್ಷರಳೆಂದು ನಿರ್ಣಯಿಸಬೇಕು.

ವೈದಿಕಪ್ರಯೋಗವನ್ನೆಲ್ಲಾ ಲಕ್ಷ್ಮೀದೇವಿಯಲ್ಲಿಯೇ ಪೂರ್ವಪಕ್ಷದಲ್ಲಿ ಹೇಳುವುದಾದರೆ, ಉಭಯತ್ರಪ್ರಸಿದ್ಧವೆಂದು ಹೇಗೆ ಪರಿಗಣಿಸುವುದು ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಆದರೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಸಾಧಾರಣ್ಯದಿಂದಷ್ಟೇ ಅಕ್ಷರಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ ಹೊರತು, ಅಕ್ಷರಶಬ್ದದ ಪ್ರಯೋಗವು ಎರಡೂ ಕಡೆ ಸಮಾನವಾದ್ದರಿಂದ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬಾರದು.

ಅಥವಾ ಸೂರ್ಯಚಂದ್ರಾದ್ಯಾಧಾರತ್ವ, ಅದೃಶ್ಯತ್ವ ಮೊದಲಾದ ಲಿಂಗಗಳು ಲಕ್ಷ್ಮೀದೇವಿ ಯಲ್ಲಿರುವಂತೆ ವಿಷ್ಣುವಿನಲ್ಲೂ ಸಹ ಒಪ್ಪೋಣ. ಆದರೆ 'ನ ತದಶ್ನಾತಿ ಕಿಂಚನ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನತ್ವವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಂತೆ ಸಕಲ ಭಕ್ಷಕನಾದ ವಿಷ್ಣುವಿನಲ್ಲಿ ಏನನ್ನೂ ತಿನ್ನುವುದಿರುವಿಕೆಯು ಕೂಡುವುದಿಲ್ಲ. ಹಾಗಾಗಿ ಸ್ವತಂತ್ರವಾಗಿ ಏನನ್ನೂ ತಿನ್ನದ ಲಕ್ಷ್ಮೀದೇವಿಯಲ್ಲಿಯೇ ಈ ಅನತ್ತೃತ್ವವು ಉಪಪನ್ನವಾಗುತ್ತದೆ. ನಿರವಕಾಶವಾದ ಈ ಒಂದೇ ಒಂದು ಅನಶನತ್ವಲಿಂಗದ ಬಲದಿಂದ ಪೂರ್ವಪಕ್ಷವು ಬಲಿಷ್ಠವಾಗುತ್ತದೆ. ಈ ಲಿಂಗಕ್ಕೆ ಅನುಸಾರಿಯಾಗಿ 'ಅಂಬರಾಂತಧೃತಿ', 'ಪ್ರಶಾಸನ' ಮೊದಲಾದ ಲಿಂಗಗಳೆಲ್ಲವನ್ನೂ ಲಕ್ಷ್ಮೀದೇವಿಯಲ್ಲಿಯೇ ಕೂಡಿಸಬೇಕು. ಆದ್ದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆ ಹೊರತು, ಮಹಾವಿಷ್ಣು ಆ ಅಕ್ಷರಶಬ್ದವಾಚ್ಯನಾಗುವುದಿಲ್ಲವೆಂಬುದು ಎರಡನೆಯ ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ - ಅಕ್ಷರಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಹೊರತು, ಲಕ್ಷ್ಮೀದೇವಿಯಲ್ಲ. ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವಿನಾಶಿತ್ವವು ಪುಷ್ಕಳವಾಗಿ ಮತ್ತು ಸ್ವತಂತ್ರವಾಗಿ ಮಹಾವಿಷ್ಣುವಿನಲ್ಲಿ ಮಾತ್ರ

**यद्यप्येनमुत्क्रान्तप्राणान् शूलेन समासं व्यतिषं दहेत् । न चैनं ब्रूयुः पितृहासीति न मातृहासि' इति ।। उत्क्रमणं मुख्यप्राणस्यैव लिङ्गमिति चेत्,**

ಪ್ರಾಣಶಬ್ದವು ವಿಷ್ಣುವಿನಲ್ಲೂ ಸಹ ಉಪಪನ್ನವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನನ್ನು ಪ್ರತಿಪಾದಿಸುವ ಬೇರೆ ಯಾವುದೇ ಶಬ್ದಗಳೂ ಇಲ್ಲಿ ಇರುವುದಿಲ್ಲ.

ಪ್ರಾಣನಿಗೆ ದೇಹದಿಂದ ಉತ್ಕ್ರಮಣವು ಶ್ರುತವಾಗುತ್ತಿದೆ. 'ಅಥ ಯದ್ಯಪಿ ಏನಮುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ । ನ ಚೈನಂ ಬ್ರೂಯುಃ ಪಿತೃಹಾಸೀತಿ ಮಾತೃಹಾಸಿ' ಯಾವಾಗ ಮುಖ್ಯಪ್ರಾಣನು ದೇಹದಿಂದ ನಿರ್ಗಮಿಸುತ್ತಾನೋ ಅನಂತರ, ಪಿತೃ ಹಾಗೂ ಮಾತೃ ಮೊದಲಾದ ಹಿರಿಯರ ದೇಹವನ್ನು ಶೂಲದಿಂದ ಚುಚ್ಚಿದರೂ, ಬೆಂಕಿಯಿಂದ ಸುಟ್ಟರೂ ಸಹ ತಂದೆಯನ್ನು ಕೊಂದವನು ತಾಯಿಯನ್ನು ಕೊಂದವನು ಇತ್ಯಾದಿಯಾಗಿ ಯಾರೂ ಹೇಳುವುದಿಲ್ಲ. ಹೀಗೆ ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಉತ್ಕ್ರಮಣವು ಮುಖ್ಯಪ್ರಾಣನ ಲಿಂಗವಾಗಿದೆಯಲ್ಲವೇ?

### ಮಹಾವಿಷ್ಣುವೇ ಭೂಮಾ

**सत्तर्कदीपावळिः – मैवम् । विष्णुरप्युत्क्रमणसंश्रवणात् 'तमुत्क्रामन्तं प्राणोनूत्क्रामति' इति श्रुत्यन्तरे । अतो 'वाग् वाव नाम्नो भूयसी मनो वाव वाचो भूयः' इत्यारभ्य सर्वेषामुपर्युपदेशात् 'तत्सुखं नाल्पे सुखमस्ति' इति पूर्णसुखत्वोपदेशाच्च विष्णुरेव भूमा ।**

ಇದು ತಪ್ಪು. ದೇಹದಿಂದ ವಿಷ್ಣುವಿನ ಉತ್ಕ್ರಮಣವೇ ಮುಖ್ಯವಾಗಿ ಆಗುತ್ತದೆಂದು 'ತಮುತ್ಕ್ರಾಮಂತಂ ಪ್ರಾಣೋನೂತ್ಕ್ರಾಮತಿ' ಎಂಬ ಮತ್ತೊಂದು ಶ್ರುತಿಯಲ್ಲಿ ಹೇಳಲಾಗಿದೆ. ವಿಷ್ಣುವಿನ ನಿರ್ಗಮನವನ್ನು ಅನುಸರಿಸಿ ಮುಖ್ಯಪ್ರಾಣನ ನಿರ್ಗಮನವಿರುತ್ತದೆ. ಆದ್ದರಿಂದ 'ವಾಗ್ ವಾವ ನಾಮ್ನೋ ಭೂಯಸೀ ಮನೋ ವಾವ ವಾಚೋ ಭೂಯಃ' ಎಂಬುದಾಗಿ ಪ್ರಾರಂಭಿಸಿ, ಎಲ್ಲ ದೇವತೆಗಳಿಗಿಂತಲೂ ಉತ್ತಮನೆಂದು ಭಗವಂತನನ್ನು ಪ್ರತಿಪಾದಿಸುತ್ತಾ, 'ತತ್ಸುಖಂ ನಾಲ್ಪೇ ಸುಖಮಸ್ತಿ' ಎಂಬುದಾಗಿ ಪೂರ್ಣಸುಖಸ್ವರೂಪನೆಂದು ಶ್ರುತಿಯು ಹೇಳುತ್ತಿರುವುದರಿಂದ ವಿಷ್ಣುವೇ ಭೂಮಾ ಎಂಬ ಪದದಿಂದ ಪ್ರತಿಪಾದ್ಯನಾಗುತ್ತಾನೆ.

ಪೂರ್ಣಸುಖಾಶ್ರಯತ್ವ ಸರ್ವೋತ್ತಮತ್ವಗಳು ವಿಷ್ಣುವಿನ ಧರ್ಮ

**सत्तर्कदीपावळिः – पूर्णसुखाश्रयत्वं सर्वोत्तमत्वं चान्यत्र विष्णोरेव श्रूयते। 'सहस्रशीर्षं देवम्' इति ।। विश्वशम्भुवम् । पुर्णसुखास्पदं परमश्चासावश्चेति परमाम् इत्यर्थः ।**

ಪೂರ್ಣಸುಖಾಶ್ರಯತ್ವ ಹಾಗೂ ಸರ್ವೋತ್ತಮತ್ವಗಳು ವಿಷ್ಣುವಿನ ಧರ್ಮಗಳೇ ಆಗಿವೆಯೆಂದು ಬೇರೆ ಶ್ರುತಿಯಿಂದ ಸಿದ್ಧವಾಗಿದೆ. 'ಸಹಸ್ರಶೀರ್ಷಂ ದೇವಮ್' ಎಂಬಲ್ಲಿರುವ ವಿಶ್ವಶಂಭುವಂ ಎಂಬ ಪದದಿಂದ ಪರಮಾತ್ಮನು ಪೂರ್ಣಸುಖಸ್ವರೂಪನೆಂದು ಸ್ಪಷ್ಟವಾಗುತ್ತದೆ. 'ವಿಶ್ವತಃ ಪರಮಾಂ ನಿತ್ಯಮ್' ಎಂಬಲ್ಲಿರುವ ಪರಮಾಂ ಎಂಬ ಪದಕ್ಕೆ 'ಪರಮಶ್ಚಾಸೌ ಅಶ್ಚ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಬೇಕು.

ಇಯದಾಮನನಾತ್ ಎಂಬಲ್ಲಿ ಪ್ರಾಣಶಬ್ದವಾಚ್ಯತ್ವದ ವಿಚಾರವಿದೆ

**सत्तर्कदीपावळिः – 'यो वै भूमा तदमृतं स एवाधस्तात्सोपरिष्टात्' इत्यादिना सर्वगतत्वादिधर्मत्वेन व्यपदेशाच्च भूमा विष्णुः न मुख्यप्राणः । अत्र प्राणशब्दस्य मुख्यतया मुख्यप्राणपरत्वमङ्गीक्रियते । 'इदयामननात्' इत्यादौ उत्तरत्र प्रतिपादयिष्यमाणत्वादित्यर्थः इत्यनवद्यम् ।।८।।**

'ಯೋ ವೈ ಭೂಮಾ ತದಮೃತಂ ಸ ಏವಾಧಸ್ತಾತ್ ಸೋಪರಿಷ್ಟಾತ್' ಇತ್ಯಾದಿಯಾದ ಶ್ರುತಿಯಿಂದ ಸರ್ವಗತತ್ವವೇ ಮೊದಲಾದ ಧರ್ಮಗಳನ್ನು ಹೇಳಿರುವ ಪ್ರಯುಕ್ತ ಭೂಮಾ ಎಂಬ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ ಹೊರತು ಮುಖ್ಯಪ್ರಾಣನಲ್ಲ. ಇಲ್ಲಿ ಪ್ರಾಣಶಬ್ದದಿಂದ ಮುಖ್ಯವಾಗಿ ಮುಖ್ಯಪ್ರಾಣನನ್ನು ವಾಚ್ಯನೆಂದು ಅಂಗೀಕರಿಸಲಾಗಿದೆ. 'ಇಯದಾಮನನಾತ್' ಎಂಬ ಮುಂದೆ ಬರುವ ಅಧಿಕರಣದಲ್ಲಿ ಈ ವಿಷಯವನ್ನು ಪ್ರತಿಪಾದನೆ ಮಾಡುತ್ತಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಭೂಮಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

ಛಾಂದೋಗ್ಯೋಪನಿಷತ್ತಿನಲ್ಲಿರುವ 'ಭೂಮಾ' ಎಂದರೆ ಯಾರು ?

**तत्वप्रदीपः – ''यो वै भूमा तत्सुखं नाल्पे सुखमस्ति, भूमेव सुखम्'' इति श्रूयते । तत्र संशयः । किमयं भूमा प्राण उत परमात्मेति । ''प्राणो वा आशाया भूयान्'' इत्युक्त्वा ''यो वै भूमा तत्सुखम्'' इत्युक्तेः प्राणस्य भूमत्वप्राप्तिः ।**

''ಯೋ ವೈ ಭೂಮಾ ತತ್‌ಸುಖಂ ನಾಲ್ಪೇ ಸುಖಮಸ್ತಿ, ಭೂಮೇವ ಸುಖಮ್'' 'ಯಾರು ಪೂರ್ಣವಾದ ಗುಣಗಳುಳ್ಳವನೋ, ಅವನೇ ಪೂರ್ಣಸುಖವುಳ್ಳವನು. ಅಲ್ಪರಾದವರಲ್ಲಿ ಪೂರ್ಣವಾದ ಸುಖವಿರಲು ಸಾಧ್ಯವಿಲ್ಲ. ಆದ್ದರಿಂದ ಪೂರ್ಣವಾದ ಗುಣಗಳುಳ್ಳವನೇ ಪೂರ್ಣವಾದ ಸುಖವುಳ್ಳವನು'' ಈ ವಾಕ್ಯವನ್ನು ನೋಡಿದಾಗ ಸಂಶಯ ಹೀಗೆ ಹುಟ್ಟುತ್ತದೆ - ಭೂಮಾ ಎಂದರೆ ಮುಖ್ಯಪ್ರಾಣನೋ ? ಅಥವಾ ಪರಮಾತ್ಮನೋ? ಎಂದು. ಮುಖ್ಯಪ್ರಾಣನೇ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯನೆಂದು ಪೂರ್ವಪಕ್ಷ - ಏಕೆಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಆಶಾಗಿಂತ ಮುಖ್ಯಪ್ರಾಣನು ಶ್ರೇಷ್ಠನು ಎಂಬುದಾಗಿ ಹೇಳಿ, 'ಯೋ ವೈ ಭೂಮಾ ತತ್‌ಸುಖಮ್' ಯಾರು ಭೂಮಾ ಎಂದು ಕರೆಸಿಕೊಳ್ಳುತ್ತಾನೋ, ಅವನೇ ಸುಖಪೂರ್ಣನು ಎಂದು ಹೇಳಿದ್ದರಿಂದ ಮುಖ್ಯಪ್ರಾಣನೇ 'ಭೂಮಾ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

ಉತ್ಕ್ರಮಣಲಿಂಗದಿಂದ ಮುಖ್ಯಪ್ರಾಣನೇ ಭೂಮಾ

**तत्वप्रदीपः –''अथ यद्यप्येतानुत्क्रान्तप्राणान् शूलेन समासं व्यतिषं दहेत्, नैवैनं ब्रूयुः, पितृहाऽसि मातृहाऽसि'' इत्युत्क्रमणादिलिङ्गादत्र प्राणशब्दो**

**वायुवाची । नहि विष्णोर्व्यासस्य देहोत्क्रमणं समस्ति । अत आह – 'भूमा सम्प्रसादादध्युपदेशात्' ।**

'ಅಥ ಯದ್ಯಪ್ಯೇತಾನುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್, ನೈವೈನಂ ಬ್ರೂಯುಃ, ಪಿತೃಹಾಽಸಿ ಮಾತೃಹಾಽಸಿ' 'ಹಾಗಾದರೂ ಪ್ರಾಣೋತ್ಕ್ರಮಣವನ್ನು ಹೊಂದಿದ ಅನಂತರ ಈ ತಂದೆ, ತಾಯಿ ಮೊದಲಾದವರನ್ನು ಶೂಲದಿಂದ ಸಂಪೂರ್ಣವಾಗಿ ತಿವಿದು ಸುಟ್ಟರೂ, ಅಂಥವರನ್ನು ಜನರು ಪಿತೃಘಾತುಕನೆಂದು, ಮಾತೃಘಾತುಕನೆಂದು ಹೇಳುವುದಿಲ್ಲ'. ಹೀಗೆ ಉತ್ಕ್ರಮಣಾದಿ ಲಿಂಗಗಳಿಂದ ಪ್ರಾಣಶಬ್ದವು ಮುಖ್ಯಪ್ರಾಣನನ್ನೇ ಪ್ರತಿಪಾದನೆ ಮಾಡುತ್ತದೆ. ವ್ಯಾಪ್ತನಾದ ವಿಷ್ಣುವಿಗೆ ದೇಹದಿಂದ ಉತ್ಕ್ರಮಣವು ಯುಕ್ತವಾಗುವುದಿಲ್ಲ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ 'ಭೂಮಾ ಸಂಪ್ರಸಾದಧ್ಯುಪದೇಶಾತ್' ಎಂಬ ಸೂತ್ರವು ಹೊರಟಿದೆ.

ವಿಶೇಷವಿಚಾರ - ಛಾಂದೋಗ್ಯೋಪನಿಷತ್ತಿನ ೭ನೆಯ ಅಧ್ಯಾಯವನ್ನು ಈ ಅಧಿಕರಣವು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದೆ. ಆದ್ದರಿಂದ ಆಮೂಲಾಗ್ರವಾಗಿ ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯವನ್ನು ಈ ಸಂದರ್ಭದಲ್ಲಿ ಅಧ್ಯಯನ ಮಾಡಬೇಕು. ಸಂಪೂರ್ಣ ಸಪ್ತಮಾಧ್ಯಾಯವು ಹೀಗಿದೆ -

(ಸಂಗ್ರಹ ಅ.ಭಾ.ಮಾ)

**'ಅಧೀಹಿ ಭಗವಃ' ಇತಿ ಹೋಪಸಸಾದ ಸನತ್ಕುಮಾರಂ ನಾರದಃ । ತಂ ಹೋವಾಚ 'ಯದ್ ವೇತ್ಥ ತೇನ ಮೋಪಸೀದ । ತತಸ್ತ ಊರ್ಧ್ವಂ ವಕ್ಷ್ಯಾಮಿ' ಇತಿ ।**

'ಪೂಜ್ಯರೇ ನನಗೆ ಪರತತ್ತ್ವವನ್ನು ಉಪದೇಶಿಸಿರಿ' ಎಂದು ಪ್ರಾರ್ಥಿಸುತ್ತಾ ಸನತ್ಕುಮಾರರನ್ನು ನಾರದರು ಶರಣು ಹೊಂದಿದರು. ಆಗ ಸನತ್ಕುಮಾರರು 'ನೀವು ತಿಳಿದಿದ್ದುದನ್ನು ಮಾತ್ರ ನಾನು ಉಪದೇಶಿಸಬೇಕು. ಅದಕ್ಕಾಗಿ ನೀವು ಇಷ್ಟರತನಕ ಅಧ್ಯಯನ ಮಾಡಿರುವ ವಿಷಯಗಳಾವುವೆಂದು ವಿಶದ ಪಡಿಸಿರಿ' ಎಂದು ಹೇಳಿದರು.

**'ಸ ಹೋವಾಚ ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಮಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ**

ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಂ ಏತತ್ ಭಗವೋऽಧ್ಯೇಮಿ ॥

ನಾರದರು ಉತ್ತರಿಸಿದರು - 'ಪೂಜ್ಯರೇ ! ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೆಂಬ ನಾಲ್ಕು ಅವಾಂತರ ವೇದಗಳನ್ನೂ, ವೇದಗಳಿಗೆ ಅನುಕೂಲವಾಗಿದ್ದು ಐದನೇ ವೇದವೆನಿಸಿದ ಇತಿಹಾಸ-ಪುರಾಣಗಳನ್ನೂ, ಶ್ರಾದ್ಧಕಲಾಪವನ್ನೂ, ಗಣಿತಶಾಸ್ತ್ರವನ್ನೂ, ದೈವಲಕ್ಷಣ ಶಾಸ್ತ್ರವನ್ನೂ, ನಿಧಿ ಶಾಸ್ತ್ರವನ್ನೂ, ಮೂಲ ವೇದವನ್ನೂ, ಪಂಚರಾತ್ರಾಗಮನವನ್ನೂ ದೇವತಾವಿದ್ಯೆಯನ್ನೂ, ಆರಣ್ಯಕವೆಂಬ ವೇದಭಾಗವನ್ನೂ, ಭೂತಲಕ್ಷಣ ಶಾಸ್ತ್ರವನ್ನೂ, ನೀತಿಶಾಸ್ತ್ರವನ್ನೂ, ಜ್ಯೋತಿಃಶಾಸ್ತ್ರವನ್ನೂ, ಗಾರುಡವಿದ್ಯೆಯನ್ನೂ, ದೇವಜನವಿದ್ಯೆಯನ್ನೂ ಅಧ್ಯಯನ ಮಾಡಿರುವೆನು' ಎಂದು.

ಸೋಽಹಂ ಭಗವೋ ಮಂತ್ರವಿದೇವಾಸ್ಮಿ । ನಾತ್ಮವಿತ್ । ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ 'ತರತಿ ಶೋಕಮಾತ್ಮವಿತ್' ಇತಿ । 'ಸೋಽಹಂ ಭಗವಃ ಶೋಚಾಮಿ। ತನ್ಮಾ ಭಗವಾನ್ ಶೋಕಸ್ಯ ಪಾರಂ ತಾರಯತು' ಇತಿ । ತಂ ಹೋವಾಚ 'ಯದ್ವೈ ಕಿಂಚೈತದಧ್ಯಗೀಷ್ಠಾ ನಾಮೈವೈತತ್' ॥

''ಪೂಜ್ಯರೇ ! ಹೀಗೆ ಎಲ್ಲಾ ವಿದ್ಯೆಗಳನ್ನೂ ಅಧ್ಯಯನ ಮಾಡಿರುವವನಾದರೂ ನಾನು ಶ್ರೀಹರಿಯ ನಾಮಗಳೆನಿಸಿರುವ ಶಬ್ದಗಳನ್ನು ಮಾತ್ರ ಅರಿತಂತಾಗಿದೆ. ಅವುಗಳ ತಾತ್ಪರ್ಯವನ್ನೂ ನಿರ್ಣಯಿಸಿಕೊಂಡು, ಪರಮಾತ್ಮನಾದ ಶ್ರೀಹರಿಯ ತತ್ವಜ್ಞಾನವನ್ನು ಸಂಪಾದಿಸಿದವನಾಗಿಲ್ಲ. ತಮ್ಮಂಥ ಜ್ಞಾನಿಗಳಿಂದ 'ಪರಮಾತ್ಮನನ್ನರಿತು ಕೊಂಡವರೇ ದುಃಖವನ್ನು ದಾಟಿ ಮೋಕ್ಷವನ್ನು ಪಡೆಯುವರು' ಎಂದು ಕೇಳಿದ್ದೇನೆ. ಪೂಜ್ಯರೇ ನಾನಿನ್ನೂ ದುಃಖದಲ್ಲೇ ಮುಳುಗಿರುವೆನು. ಆದುದರಿಂದ ಪೂಜ್ಯರಾದ ತಾವು ನನ್ನನ್ನು ದುಃಖಸಾಗರದ ಆಚೆ ದಡವನ್ನು ತಲುಪಿಸಿರಿ'' ಎಂದು ನಾರದರು ಪ್ರಾರ್ಥಿಸಿದರು. ಆ ನಾರದರನ್ನು ಕುರಿತು ಸನತ್ಕುಮಾರರು 'ನೀನು ಅಧ್ಯಯನ ಮಾಡಿರುವುದೆಲ್ಲ ಪರಮಾತ್ಮನ ಗುಣಪ್ರತಿಪಾದಕವಾದ ನಾಮವೇ ಆಗಿವೆ' ಎಂದರು.

'ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದ ಅಥರ್ವಣಶ್ಚತುರ್ಥ ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಪಿತ್ರ್ಯೋರಾಶಿರ್ದೈವೋ ನಿಧಿರ್ವಾಕೋವಾಕ್ಯಮೇಕಾಯನಂ ದೇವವಿದ್ಯಾ ಬ್ರಹ್ಮವಿದ್ಯಾ ಭೂತವಿದ್ಯಾ ಕ್ಷತ್ರವಿದ್ಯಾ ನಕ್ಷತ್ರವಿದ್ಯಾ ಸರ್ಪದೇವಜನವಿದ್ಯಾ । ನಾಮೈವೈತತ್ । ನಾಮೋಪಾಸ್ಸ್ವ' ಇತಿ ॥

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಕು ಅವಾಂತರ ವೇದಗಳು. ವೇದಾನುಕೂಲವಾಗಿದ್ದು ಪಂಚಮವೇದ- ವೆನಿಸಿರುವ ಇತಿಹಾಸ ಪುರಾಣಗಳು, ಶ್ರಾದ್ಧಕಲಾಪ, ಗಣಿತಶಾಸ್ತ್ರ ದೇವತಾಲಕ್ಷಣಶಾಸ್ತ್ರ, ನಿಧಿಶಾಸ್ತ್ರ ಮೂಲವೇದ, ಪಂಚರಾತ್ರಾಗಮ, ದೇವವಿದ್ಯೆ, ಆರಣ್ಯಕ, ಭೂತಲಕ್ಷಣಶಾಸ್ತ್ರ, ನೀತಿಶಾಸ್ತ್ರ, ಜ್ಯೋತಿರ್ವಿದ್ಯೆ, ಗಾರುಡವಿದ್ಯೆ, ದೇವಜನವಿದ್ಯೆ ಇವೆಲ್ಲವೂ ಶ್ರೀಹರಿಯ ನಾಮವೇ ಆಗಿವೆ. ಇವೆಲ್ಲವೂ ನಾಮಾ ಎಂಬ ಉಷಃಕಾಲಾಭಿಮಾನಿದೇವತೆಯಿಂದ ಅಭಿಮನ್ಯಮಾನವಾಗಿವೆ. ಆ ದೇವತೆಯಲ್ಲಿ ನಿಯಾಮಕನಾಗಿರುವ ಪರಬ್ರಹ್ಮನನ್ನು ಆರಾಧಿಸು.

ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ । ಯೋ ನಾಮ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವೋ ನಾಮ್ನೋ ಭೂಯಃ' ಇತಿ । 'ನಾಮ್ನೋ ವಾವ ಭೂಯೋಽಸ್ತಿ' ಇತಿ । 'ತನ್ಮೇ ಭಗವಾನ್ ಬ್ರವೀತು' ಇತಿ ॥

ಯಾರು ನಾಮಾ ಎಂಬ ಹೆಸರುಳ್ಳ ಉಷಾದೇವಿಯಲ್ಲಿ ಬ್ರಹ್ಮನನ್ನು ಆರಾಧಿಸುವನೋ ಅವನು ಉಷಾದೇವಿಯ ಲೋಕವನ್ನು ಹೊಂದಿ, ಎಲ್ಲಿಯ ತನಕ ಅವಳ ವ್ಯಾಪ್ತಿಯಿದೆಯೋ ಆ ಎಲ್ಲಾ ಪ್ರದೇಶಗಳಲ್ಲಿ ಇಚ್ಛಾನುಸಾರೇಣ ಸಂಚರಿಸಲು ಶಕ್ತನಾಗುವನು. ನಾರದರು ಕೇಳಿದರು 'ಪೂಜ್ಯರೇ ! ನಾಮಾಭಿಮಾನಿನಿಯಾದ ಉಷಾದೇವಿಗಿಂತಲೂ ಶ್ರೇಷ್ಠರಾದವರು ಇರುವರೇನು ? ಎಂದು. ಸನತ್ಕುಮಾರರು 'ನಾಮಾಭಿಮಾನಿನಿಗಿಂತಲೂ ಶ್ರೇಷ್ಠರಿರುವರು' ಎಂದು ಉತ್ತರಿಸಲು, 'ಹಾಗಿದ್ದರೆ ಅದನ್ನು ನನಗೆ ಪೂಜ್ಯರಾದ ತಾವು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

'ವಾಗ್ವಾವ ನಾಮ್ನೋ ಭೂಯಸೀ । ವಾಗ್ವಾ ಋಗ್ವೇದಂ ವಿಜ್ಞಾಪಯತಿ, ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸ ಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮ ವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನ ವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ತೃಣ ವನಸ್ಪತೀನ್ ಶ್ವಾಪದಾನ್ಯಾಕೀಟ ಪತಂಗ ಪಿಪೀಲಿಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚ । ಯದ್ವೈ ವಾಙ್ ನಾಭವಿಷ್ಯನ್ನ ಧರ್ಮೋ ನಾಧರ್ಮೋ ವ್ಯಜ್ಞಾಪಯಿಷ್ಯನ್ನ ಸತ್ಯಂ ನಾನೃತಂ ನ ಸಾಧು ನಾಸಾಧು

ನ ಹೃದಯಜ್ಞೋ ನಾಹೃದಯಜ್ಞಃ । ವಾಗೇವೈತತ್ ಸರ್ವಂ ವಿಜ್ಞಾಪಯತಿ । ವಾಚಮುಪಾಸ್ವ' ಇತಿ ।

ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಅಗ್ನಿಪತ್ನಿ ಸ್ವಾಹಾದೇವಿಯು, ನಾಮಾಭಿಮಾನಿನಿ ಉಷಾದೇವಿಗಿಂತಲೂ ಶ್ರೇಷ್ಠಳು. ವಾಗಿಂದ್ರಿಯದ ಸಹಾಯದಿಂದಲೇ ಎಲ್ಲರೂ ಇದು ಋಗ್ವೇದ, ಇದು ಯಜುರ್ವೇದ ಎಂದು ಮುಂತಾಗಿ ಗುರುಗಳು ಹೇಳಿಕೊಟ್ಟಂತೆ ತಿಳಿಯುವುದರಿಂದ ವಾಗಭಿಮಾನಿನಿ ಸ್ವಾಹಾದೇವಿಯೇ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದವೆಂಬ ನಾಕು ಅವಾಂತರವೇದಗಳು ಪಂಚಮವೇದವೆನಿಸಿರುವ ಇತಿಹಾಸ ಪುರಾಣಗಳು, ಶ್ರಾದ್ಧಕಲಾಪ, ಸಂಖ್ಯಾಶಾಸ್ತ್ರ ದೇವಲಕ್ಷಣಶಾಸ್ತ್ರ, ನಿಧಿಲಕ್ಷಣಶಾಸ್ತ್ರ, ಮೂಲವೇದ, ಪಂಚರಾತ್ರಾಗಮ, ದೇವವಿದ್ಯೆ, ಆರಣ್ಯಕ, ಭೂತಲಕ್ಷಣವಿದ್ಯೆ, ನೀತಿಶಾಸ್ತ್ರ ಜ್ಯೋತಿಃಶಾಸ್ತ್ರ, ಸರ್ಪಲಕ್ಷಣವಿದ್ಯೆ, ದೇವಜನವಿದ್ಯೆ, ಸ್ವರ್ಗ, ಪೃಥಿವೀ, ವಾಯು, ಆಕಾಶ, ಜಲ ತೇಜಸ್ಸು, ದೇವತೆಗಳು, ಮನುಷ್ಯರು, ಪಶುಗಳು, ಹಕ್ಕಿಗಳು, ಹುಲ್ಲುಮರಗಳು, ಚಿರತೆಗಳು, ಕೀಟ, ಚಿಟ್ಟೆ, ಇರುವೆಗಳ ತನಕ ಎಲ್ಲ ಜೀವರಾಶಿಗಳು, ಧರ್ಮ-ಅಧರ್ಮ, ಸತ್ಯ-ಅಸತ್ಯ, ಯೋಗ್ಯವಾದದ್ದು - ಅಯೋಗ್ಯವಾದದ್ದು, ಹೃದಯದಲ್ಲಿರುವ ಬ್ರಹ್ಮನನ್ನು ತಿಳಿದವನು-ತಿಳಿಯದವನು ಎಂದು ಎಲ್ಲ ನಾಮರೂಪಾತ್ಮಕ ಪ್ರಪಂಚವನ್ನೂ ತಿಳಿಸಿಕೊಡುವಳು. ವಾಗಭಿಮಾನಿನಿಯಾದ ಸ್ವಾಹಾದೇವಿಯ ಅನುಗ್ರಹ ಇಲ್ಲದಿರುತ್ತಿದ್ದರೆ, ವಾಗಿಂದ್ರಿಯವೇ ಶಕ್ತಿಹೀನವೆನಿಸಿ, ಧರ್ಮ- ಅಧರ್ಮ, ಸತ್ಯ-ಅಸತ್ಯ, ಯೋಗ್ಯವಾದದ್ದು- ಅಯೋಗ್ಯವಾದದ್ದು, ಹೃದಯದಲ್ಲಿರುವ ಪರಮಾತ್ಮನನ್ನು ತಿಳಿದವನು-ತಿಳಿಯದವನು ಇವು ಯಾವುದರ ಅರಿವೂ ಜೀವರಿಗೆ ಉಂಟಾಗುತ್ತಿರಲಿಲ್ಲ. ಆದುದರಿಂದ ಎಲ್ಲವನ್ನೂ ವಾಗಿಂದ್ರಿಯಾಭಿಮಾನಿನಿಯಾದ ಸ್ವಾಹಾದೇವಿಯೇ ತಿಳಿಸಿಕೊಡುತ್ತಾಳೆ. ಇಂತಹ ವಾಗಭಿಮಾನಿನಿಯಾದ ಸ್ವಾಹಾದೇವಿಯಲ್ಲಿ ಪರಮಾತ್ಮನನ್ನು ಆರಾಧಿಸು.

'ಸ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ । ಯಾವತ್ ವಾಚೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ।' 'ಅಸ್ತಿ ಭಗವೋ ವಾಚೋ ಭೂಯಃ?' ಇತಿ । 'ವಾಚೋ ವಾವ ಭೂಯೋಽಸ್ತಿ' ಇತಿ । 'ತನ್ಮೇ ಭಗವಾನ್ ಬ್ರವೀತು' ಇತಿ ॥

'ಯಾರು ವಾಗಭಿಮಾನಿನಿಯಾದ ಸ್ವಾಹಾದೇವಿಯಲ್ಲಿ ಪರಬ್ರಹ್ಮನನ್ನಾರಾಧಿಸುವನೋ ಅವನು ಸ್ವಾಹಾದೇವಿಯ ಲೋಕವನ್ನು ಹೊಂದಿ, ಅಲ್ಲಿ ಅವಳು ಎಲ್ಲಿಯ ತನಕ ವ್ಯಾಪಿಸಿಕೊಂಡಿರುವಳೋ ಅಲ್ಲೆಲ್ಲಾ ಇಚ್ಛಾನುಸಾರೇಣ ಸಂಚರಿಸುವ ಶಕ್ತಿ

ಉಳ್ಳವನಾಗುವನು' ಎಂದು ಸನತ್ಕುಮಾರರು ಉಪದೇಶಿಸಿದಾಗ ನಾರದರು 'ಪೂಜ್ಯರೇ ! ವಾಗಭಿಮಾನಿನಿಯಾದ ಸ್ವಾಹಾದೇವಿಗಿಂತಲೂ ಉತ್ತಮರಾದವರು ಇರುವರೇನು ?' ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ ಸನತ್ಕುಮಾರರು 'ಸ್ವಾಹಾದೇವಿಗಿಂತಲೂ ಉತ್ತಮರಿದ್ದಾರೆ' ಎಂದು ಹೇಳಿದಾಗ ನಾರದರು 'ಪೂಜ್ಯರಾದ ತಾವು ಅದನ್ನು ನನಗೆ ತಿಳಿಸಿ ಹೇಳಿ' ಎಂದು ಪ್ರಾರ್ಥಿಸಿದರು.

'ಮನೋ ವಾ ವಾಚೋ ಭೂಯಃ । ಯಥಾ ವೈ ದ್ವೇ ವಾಽಽಮಲಕೇ, ದ್ವೇ ವಾ ಕೋಲೇ, ದ್ವೌ ವಾಽಕ್ಷೌ ಮುಷ್ಟಿರನು ಭವತ್ಯೇವಂ ವಾಚಂ ಚ ನಾಮ ಚ ಮನೋಽನುಭವತಿ । ಸ ಯದಾ ಮನಸಾ ಮನಸ್ಯತಿ ಮಂತ್ರಾನಧಿಯೀಯೇತಿ ಅಥಾಧೀತೇ । ಕರ್ಮಾಣಿ ಕುರ್ವೀಯೇತಿ ಅಥ ಕುರುತೇ । ಪುತ್ರಾಂಶ್ಚ ಪಶೂಂಶ್ಚೇಚ್ಛೇಯೇತಿ ಅಥೇಚ್ಛತೇ । ಇಮಂ ಚ ಲೋಕಮಮುಂ ಚೇಚ್ಛೇಯೇತಿ ಅಥೇಚ್ಛತೇ। ಮನೋಹ್ಯಾತ್ಮಾ। ಮನೋ ಹಿ ಲೋಕಃ। ಮನೋ ಹಿ ಬ್ರಹ್ಮ। ಮನ ಉಪಾಸ್ಸ್ವ' ಇತಿ ॥

ಮಳೆಯನ್ನು ಸುರಿಸುವ ಮೂಲಕ ಬೀಜದಿಂದ ಮೊಳಕೆಯುಂಟು ಮಾಡುವುದರಿಂದಲೂ ಮನಸ್ಸಿಗೆ ಅಭಿಮಾನಿನಿಯಾದ್ದರಿಂದಲೂ ಮನಃ ಎಂಬ ಹೆಸರುಳ್ಳ ಪರ್ಜನ್ಯನು ವಾಗಭಿಮಾನಿನಿಯಾದ ಸ್ವಾಹಾದೇವಿಗಿಂತಲೂ ಉತ್ತಮನು. ಹೇಗೆ ಎರಡು ನೆಲ್ಲಿಕಾಯಿಗಳನ್ನಾಗಲೀ, ಎರಡು ಅಡಿಕೆಗಳಗನ್ನಾಗಲೀ, ಎರಡು ದಾಳಗಳನ್ನಾಗಲೀ ಮುಷ್ಟಿಯು ತನ್ನೊಳಗೆ ಸೇರಿಸಿಕೊಳ್ಳುವುದೋ ಹಾಗೆಯೇ ಮನೋಭಿಮಾನಿಯಾದ ಪರ್ಜನ್ಯನು ವಾಗಭಿಮಾನಿನಿಯಾದ ಸ್ವಾಹಾದೇವಿಯನ್ನೂ ನಾಮಾಭಿಮಾನಿಯಾದ ಉಷಾದೇವಿಯನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿರುವನು, ತಾನು ಮಂತ್ರಗಳನ್ನು ಅಧ್ಯಯನ ಮಾಡಬೇಕೆಂದು ಯಾವಾಗ ಪುರುಷನು ಮನಸ್ಸಿನಲ್ಲಿ ಆಲೋಚಿಸುತ್ತಾನೋ ಆಗಲೇ ಮಂತ್ರಗಳನ್ನು ಅಧ್ಯಯನ ಮಾಡುತ್ತಾನೆ. ತಾನು ಕರ್ಮಗಳನ್ನು ಮಾಡಬೇಕೆಂದು ಯಾವಾಗ ಮನಸ್ಸಿನಲ್ಲಿ ಆಲೋಚಿಸುತ್ತಾನೋ ಆಗಲೇ ಕರ್ಮಗಳನ್ನು ಆಚರಿಸುತ್ತಾನೆ. ಪುತ್ರರನ್ನು ಪಶುಗಳನ್ನು ಯಾವಾಗ ಮನಸ್ಸಿನಲ್ಲಿ ಬೇಕೆಂದು ಆಲೋಚಿಸುತ್ತಾನೋ ಆಗ ಅವನ್ನು ಇಚ್ಛಿಸಿ ಪಡೆಯುತ್ತಾನೆ. ಈ ಲೋಕವನ್ನೇ ಆಗಲೀ, ಪರಲೋಕವನ್ನೇ ಆಗಲಿ ಹೊಂದಬೇಕೆಂದು ಯಾವಾಗ ಮನಸ್ಸಿನಲ್ಲಿ ಆಲೋಚಿಸುತ್ತಾನೋ ಆಗ ಅವನ್ನು ಇಚ್ಛಿಸಿ ಹೊಂದುತ್ತಾನೆ. ಹೀಗೆ ಜೀವನು ಮನಸ್ಸಿಗೆ ಅಧೀನನಾಗಿರುವುದರಿಂದ ಮನಸ್ಸು ಅವನ ಸ್ವಾಮಿ (ಆತ್ಮಾ) ಎನಿಸಿಕೊಂಡಿದೆ. ಲೋಕವೆಲ್ಲವೂ

ಮನಸ್ಸಿನ ಅಧೀನವಾಗಿರುವುದರಿಂದ ಮನಸ್ಸೇ ಲೋಕವೆನಿಸಿದೆ. ಈ ಮನೋಭಿಮಾನಿಯಾದ ಪರ್ಜನ್ಯನಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನು. ಮನೋನಿಯಾಮಕನಾದ ಪರ್ಜನ್ಯನಲ್ಲಿ ಪರಬ್ರಹ್ಮನನ್ನು ಆರಾಧಿಸು.

'ಸ ಯೋ ಮನೋ ಬ್ರಹ್ಮೇತ್ಯುಪಾಸ್ತೇ । ಯಾವನ್ಮನಸೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಮನೋ ಬ್ರಹ್ಮೇತ್ಯುಪಾಸ್ತೇ।' 'ಅಸ್ತಿ ಭಗವೋ ಮನಸೋ ಭೂಯಃ?' ಇತಿ । 'ಮನಸೋವಾವ ಭೂಯೋಽಸ್ತಿ' ಇತಿ । 'ತನ್ಮೇ ಭಗವಾನ್ ಬ್ರವೀತು' ಇತಿ।

'ಯಾರು ಪರ್ಜನ್ಯನಲ್ಲಿ ಪರಬ್ರಹ್ಮನಿರುವನೆಂದು ಉಪಾಸನೆಗೈಯುವನೋ ಅವನು ಪರ್ಜನ್ಯಲೋಕವನ್ನು ಹೊಂದಿ ಎಲ್ಲಿಯ ತನಕ ಪರ್ಜನ್ಯನ ವ್ಯಾಪ್ತಿ ಇರುವುದೋ ಆ ಎಲ್ಲ ಪ್ರದೇಶಗಳಲ್ಲಿ ಇಚ್ಛಾನುಸಾರೇಣ ಸಂಚರಿಸಲು ಶಕ್ತನಾಗುವನು' ಎಂದು ಸನತ್ಕುಮಾರರು ಉಪದೇಶಿಸಲು ನಾರದರು 'ಪೂಜ್ಯರೇ ! ಮನೋಭಿಮಾನಿನಿಯಾದ ಪರ್ಜನ್ಯನಿಗಿಂತಲೂ ಶ್ರೇಷ್ಠರಾದವರಿರುವರೇನು ?' ಎಂದು ಪ್ರಶ್ನಿಸಿದರು. 'ಮನೋಭಿಮಾನಿಯಾದ ಪರ್ಜನ್ಯನಿಗಿಂತಲೂ ಉತ್ತಮರಾದವರಿರುವರು' ಎಂದು ಸನತ್ಕುಮಾರರು ಉತ್ತರಿಸಲು 'ಅದನ್ನು ನನಗೆ ಪೂಜ್ಯರಾದ ತಾವು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

'ಸಂಕಲ್ಪೋ ವಾವ ಮನಸೋ ಭೂಯಾನ್ । ಯದಾ ವೈ ಸಂಕಲ್ಪಯತೇಽಥ ಮನಸ್ಯತಿ । ಅಥ ವಾಚಮೀರಯತಿ । ತಾಮು ನಾಮ್ನೀರಯತಿ । ನಾಮ್ನಿ ಮಂತ್ರಾ ಏಕಂ ಭವಂತಿ । ಮಂತ್ರೇಷು ಕರ್ಮಾಣಿ' ।

ಸಂಕಲ್ಪಕ್ಕೆ ಅಭಿಮಾನಿಯಾದುದರಿಂದ ಸಂಕಲ್ಪವೆನಿಸಿಕೊಂಡಿರುವ ಮಿತ್ರದೇವನು, ಮನಸ್ಸಿಗೆ ಅಭಿಮಾನಿಯಾಗಿದ್ದು ಮನೋನಾಮಕನಾದ ಪರ್ಜನ್ಯನಿಗಿಂತ ಶ್ರೇಷ್ಠನು. ಪುರುಷನು ಯಾವಾಗ ಯಾವುದಾದರೊಂದು ಕರ್ಮವನ್ನು ಮಾಡಬೇಕೆಂದು ಸಂಕಲ್ಪಿಸುತ್ತಾನೋ ಆಗ ಆ ವಿಷಯದಲ್ಲಿ ಮನಸ್ಸನ್ನು ಪ್ರೇರಿಸುತ್ತಾನೆ. ಹೀಗೆ ಮನಸ್ಸನ್ನು ಪ್ರೇರಿಸಿದ ನಂತರ, ವಾಗಿಂದ್ರಿಯವನ್ನು ಆ ವಿಷಯದಲ್ಲಿ ಪ್ರೇರಿಸುತ್ತಾನೆ. ಆ ವಾಗಿಂದ್ರಿಯವನ್ನೇ ವಿಷ್ಣುವಿನ ನಾಮವೆನಿಸಿಕೊಂಡಿರುವ ಋಗ್ವೇದಾದಿಗಳಲ್ಲಿ ಪ್ರೇರಿಸಿ ಅವುಗಳನ್ನು ಪಠಿಸುವಂತೆ ಮಾಡುತ್ತಾನೆ. ನಾಮವೆನಿಸಿರುವ ಈ ಋಗ್ವೇದಾದಿ ಶಬ್ದರಾಶಿಯಲ್ಲಿ ಮಂತ್ರಗಳೂ ಸೇರಿಕೊಂಡಿವೆ. ಈ ಮಂತ್ರಗಳಿಂದ ಪ್ರಕಾಶಿತವಾದಾಗ ಕರ್ಮಗಳು ಆಚರಿಸಲ್ಪಡುವುದರಿಂದ ಕರ್ಮಗಳು ಮಂತ್ರದಲ್ಲಿ ಸೇರಿಕೊಂಡಿವೆ.

ತಾನಿ ಹ ವಾ ಏತಾನಿ ಸಂಕಲ್ಪೈಕಾಯನಾನಿ, ಸಂಕಲ್ಪಾತ್ಮಕಾನಿ, ಸಂಕಲ್ಪೇ ಪ್ರತಿಷ್ಠಿತಾನಿ। ಸಮಕ್ಲ್ಪತಾಂ ದ್ಯಾವಾ ಪೃಥಿವೀ। ಸಮಕಲ್ಪೇತಾಂ ವಾಯುಶ್ಚಾಕಾಶಶ್ಚ। ಸಮಕಲ್ಪಂತಾಪಶ್ಚ ತೇಜಶ್ಚ। ತೇಷಾಂ ಸಂಕ್ಲೃಪ್ತ್ಯೈ ವರ್ಷಂ ಸಂಕಲ್ಪತೇ। ವರ್ಷಸ್ಯ ಸಂಕ್ಲೃಪ್ತ್ಯಾ ಅನ್ನಂ ಸಂಕಲ್ಪತೇ। ಅನ್ನಸ್ಯ ಸಂಕ್ಲೃಪ್ತ್ಯೈ ಪ್ರಾಣಾಃ ಸಂಕಲ್ಪಂತೇ। ಪ್ರಾಣಾನಾಂ ಸಂಕ್ಲೃಪ್ತ್ಯೈ ಮಂತ್ರಾಃ ಸಂಕಲ್ಪಂತೇ। ಮಂತ್ರಾಣಾಂ ಸಂಕ್ಲೃಪ್ತ್ಯೈ ಕರ್ಮಾಣಿ ಸಂಕಲ್ಪಂತೇ। ಕರ್ಮಣಾ ಸಂಕ್ಲಪ್ತ್ಯೈ ಲೋಕಾಃ ಸಂಕಲ್ಪಂತೇ। ಲೋಕಾನಾಂ ಸಂಕ್ಲೃಪ್ತ್ಯೈ ಸರ್ವಂ ಸಂಕಲ್ಪತೇ। ಸ ಏಷ ಸಂಕಲ್ಪಃ। ಸಂಕಲ್ಪಮುಪಾಸ್ಸ್ವ' ಇತಿ॥

ಈ ಮನಸ್ಸು ವಾಗಿಂದ್ರಿಯ, ನಾಮ, ಮಂತ್ರ, ಕರ್ಮ ಹಾಗೂ ಇವೆಲ್ಲವುಗಳ ಅಭಿಮಾನಿದೇವತೆಗಳಾದ ಉಷಾದೇವಿ ಮೊದಲಾದವರು ಸಂಕಲ್ಪನೆನಿಸಿಕೊಂಡಿರುವ ಮಿತ್ರದೇವನನ್ನು ಆಶ್ರಯಿಸಿಕೊಂಡಿರುವರು. ಈ ಮಿತ್ರನು ಅವರಿಗೆ ಸ್ವಾಮಿಯಾಗಿ ಇರುವನು. ಮೋಕ್ಷದಲ್ಲೂ ಅವು ಮಿತ್ರನ ಅಧೀನವಾಗಿರುವುವು. ಸಂಕಲ್ಪವೆನಿಸಿಕೊಂಡಿರುವ ಈ ಮಿತ್ರನಿಂದಲೇ ಭೂಮಿ ಹಾಗೂ ಸ್ವರ್ಗಗಳು ಹುಟ್ಟಿರುವವು. ವಾಯು ಹಾಗೂ ಆಕಾಶಗಳಿಗೂ ಈ ಮಿತ್ರನಿಂದಲೇ ಉತ್ಪತ್ತಿ. ನೀರು ಹಾಗೂ ತೇಜಸ್ಸುಗಳು ಈ ಮಿತ್ರನ ಸೃಷ್ಟಿಯೇ ಆಗಿವೆ. ಆ ಭೂಮಿ, ಸ್ವರ್ಗ, ವಾಯು, ಆಕಾಶ, ನೀರು ಹಾಗೂ ತೇಜಸ್ಸುಗಳ ಸ್ಥಿತಿಗೋಸ್ಕರವೇ ಮಿತ್ರನಿಂದ ಮಳೆಯುಂಟಾಗುತ್ತದೆ. ಮಳೆಯ ಸೃಷ್ಟಿಯಿಂದಾಗಿ ಅನ್ನದ ಉತ್ಪತ್ತಿಯಾಗುತ್ತದೆ. ಅನ್ನದ ಸ್ಥಿತಿಗೋಸ್ಕರ ಪ್ರಾಣಗಳು ಪೋಷಿಸಲ್ಪಡುತ್ತವೆ. ಪ್ರಾಣಗಳ ಪೋಷಣೆಗಾಗಿ ಮಿತ್ರನಿಂದ ಮಂತ್ರಗಳ ಪ್ರವೃತ್ತಿಯುಂಟಾಗುತ್ತದೆ. ಮಂತ್ರಗಳ ಪ್ರವೃತ್ತಿಗೋಸ್ಕರ ಕರ್ಮಗಳು ಸೃಷ್ಟಿಸಲ್ಪಡುತ್ತವೆ. ಕರ್ಮಗಳ ಅನುಷ್ಠಾನಕ್ಕಾಗಿ ಲೋಕಗಳು ಸೃಷ್ಟಿಸಲ್ಪಡುತ್ತವೆ. ಲೋಕಗಳ ಸೃಷ್ಟಿಗಾಗಿ ಇತರ ಎಲ್ಲಾ ಅಚೇತನ ವಸ್ತುಗಳೂ ಈ ಮಿತ್ರನಿಂದಲೇ ಸೃಷ್ಟಿಸಲ್ಪಡುತ್ತವೆ. ಹೀಗೆ ಎಲ್ಲವೂ ಸಂಕಲ್ಪನೆನಿಸಿರುವ ಮಿತ್ರನ ಅಧೀನವಾಗಿವೆ. ಈ ಮಿತ್ರನಲ್ಲಿ ನಿಯಾಮಕನಾಗಿ ಬ್ರಹ್ಮನಿರುವನೆಂದು ಆರಾಧಿಸು.

'ಸ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ ಕ್ಲೃಪ್ತಾನ್ ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನ ವ್ಯಥಮಾನೋಽಭಿಸಿಧ್ಯತಿ। ಯಾವತ್ ಸಂಕಲ್ಪಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ।' 'ಅಸ್ತಿ ಭಗವತಃ ಸಂಕಲ್ಪಾದ್ಭೂಯಃ ?' ಇತಿ। ಸಂಕಲ್ಪಾದ್ವಾವ ಭೂಯೋಽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।

'ಯಾರು ಸಂಕಲ್ಪನೆನಿಸಿರುವ ಮಿತ್ರನಲ್ಲಿ ಪರಬ್ರಹ್ಮನಿರುವನೆಂದು ಆರಾಧಿಸುವನೋ ಅವನು ಸ್ವತಃ ನಿತ್ಯನೂ ಸುಸ್ಥಿತಿ ಉಳ್ಳವನೂ, ದುಃಖರಹಿತನೂ ಆಗಿ ಮಿತ್ರನಿಂದ ಅಧಿಷ್ಠಿತವಾದ ಪ್ರತಿಷ್ಠಿತವಾದ ಹಾಗೂ ದುಃಖರಹಿತವಾದ ಲೋಕಗಳನ್ನೂ ಹೊಂದುವನು. ಸಂಕಲ್ಪನೆನಿಸಿರುವ ಮಿತ್ರನು ಎಷ್ಟು ಪ್ರದೇಶಗಳಲ್ಲಿ ವ್ಯಾಪಿಸಿಕೊಂಡಿರುವನೋ ಆ ದೇಶಗಳಲ್ಲೆಲ್ಲಾ ಆ ಉಪಾಸಕನು ಇಚ್ಛಾನುಸಾರವಾಗಿ ಸಂಚರಿಸಬಲ್ಲವನಾಗುವನು' ಎಂದು ಸನತ್ಕುಮಾರರು ನಾರದರಿಗೆ ಉಪದೇಶಿಸಿದರು. ಆಗ ನಾರದರು 'ಪೂಜ್ಯರೇ ! ಸಂಕಲ್ಪನೆನಿಸಿರುವ ಮಿತ್ರನಿಗಿಂತಲೂ ಉತ್ತಮರಾದವರು ಇರುವರೇನು ?' ಎಂದು ಪ್ರಶ್ನಿಸಲು, ಸನತ್ಕುಮಾರರು 'ಸಂಕಲ್ಪನೆನಿಸಿರುವ ಮಿತ್ರನಿಗಿಂತಲೂ ಉತ್ತಮರಿರುವರು' ಎಂದುತ್ತರಿಸಿದರು. 'ಹಾಗಿದ್ದರೆ ಪೂಜ್ಯರಾದ ತಾವು ನನಗೆ ಅದನ್ನು ಉಪದೇಶಿಸಿರಿ' ಎಂದು ಅವರನ್ನು ನಾರದರು ಪ್ರಾರ್ಥಿಸಿದರು.

ಚಿತ್ತಂ ವಾವ ಸಂಕಲ್ಪಾತ್ ಭೂಯಃ। ಯದಾ ವೈ ಚೇತಯತೇಽಥ ಸಂಕಲ್ಪಯತೇ।
ಅಥ ಮನಸ್ಯತಿ। ಅಥ ವಾಚಮೀರಯತಿ। ತಾಮು ನಾಮ್ನೀರಯತಿ ನಾಮ್ನಿ ಮಂತ್ರಾಃ
ಏಕಂ ಭವಂತಿ। ಮಂತ್ರೇಷು ಕರ್ಮಾಣಿ॥

ಸಂಕಲ್ಪನೆನಿಸಿರುವ ಮಿತ್ರನಿಗಿಂತ ಚಿತ್ತಕ್ಕೆ ಅಂದರೆ ಅಸ್ಥಿರವಾದ ಸ್ಮರಣೆಗೆ ನಿಯಾಮಕನಾಗಿದ್ದು, ಅಗ್ನಿಕುಂಡದಲ್ಲ ಪೂಜಿತನಾಗುವ ಕಾರಣ ಚಿತ್ತ ಎಂದೆನಿಸಿಕೊಂಡಿರುವ ಅಗ್ನಿದೇವನು ಉತ್ತಮನು. ಯಾವಾಗ ಪುರುಷನು ಕರ್ತವ್ಯಾಕರ್ತವ್ಯಗಳನ್ನು ಸ್ಮರಿಸುತ್ತಾನೋ ಆಗ 'ಇದು ನನ್ನ ಕರ್ತವ್ಯ' ಎಂದು ಸಂಕಲ್ಪಿಸುತ್ತಾನೆ. ಆ ಮೇಲೆ ಆ ಸಂಕಲ್ಪದಂತೆ ಮನಸ್ಸನ್ನು ಪ್ರೇರಿಸುತ್ತಾನೆ. ಅನಂತರ ಅದಕ್ಕನುಗುಣವಾಗಿ ವಾಗಿಂದ್ರಿಯವನ್ನು ಪ್ರಚೋದಿಸುತ್ತಾನೆ. ಆ ವಾಗಿಂದ್ರಿಯವನ್ನೇ ವಿಷ್ಣುವಿನ ನಾಮವೆನಿಸಿರುವ ಋಗ್ವೇದಾದಿಗಳನ್ನು ಪಠಿಸಲು ಪ್ರೇರಿಸುತ್ತಾನೆ. ನಾಮವೆನಿಸಿರುವ ಋಗ್ವೇದಾದಿಗಳಲ್ಲಿ ಮಂತ್ರಗಳು ಸೇರಿಕೊಂಡಿವೆ. ಮಂತ್ರಗಳಲ್ಲಿ ಅವುಗಳಿಂದ ಪ್ರಕಾಶಿತವಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಸೇರಿಕೊಂಡಿವೆ.

'ತಾನಿ ಹವಾ ಏತಾನಿ ಚಿತ್ತೈಕಾಯನಾನಿ ಚಿತ್ತಾತ್ಮಕಾನಿ ಚಿತ್ತೇ ಪ್ರತಿಷ್ಠಿತಾನಿ ತಸ್ಮಾದ್ಯದ್ಯಪಿ ಬಹುವಿದಚಿತ್ತೋ ಭವತಿ ನಾಯಮಸ್ತೀತ್ಯೇವೈನಮಾಹುಃ। ಯದಯಂ ವೇದ ಯದ್ವಾ ಅಯಂ ವಿದ್ವಾನ್ ನೇತ್ಥಮಚಿತ್ತಃ ಸ್ಯಾದಿತಿ ಅಥ ಯದ್ಯಲ್ಪವಿತ್ ಚಿತ್ತವಾನ್ ಭವತಿ ತಸ್ಮಾದೇತತ್ ಶುಶ್ರೂಷಂತೇ। ಚಿತ್ತಂ ಹ್ಯೇವೈಷಾಮೇಕಾಯನಂ। ಚಿತ್ತಮಾತ್ಮಾ। ಚಿತ್ತಂ ಪ್ರತಿಷ್ಠಾ। ಚಿತ್ತಮುಪಾಸ್ಸ್ವ' ಇತಿ।

ಈ ಸಂಕಲ್ಪ, ಮನಸ್ಸು, ವಾಕ್, ನಾಮ, ಮಂತ್ರ, ಕರ್ಮ ಹಾಗೂ ಇವುಗಳ ಅಭಿಮಾನಿದೇವತೆಗಳು ಚಿತ್ತನೆನಿಸಿರುವ ಅಗ್ನಿಯನ್ನು ಆಶ್ರಯಿಸಿಕೊಂಡಿವೆ. ಈ ಅಗ್ನಿಯು ಅವರಿಗೆ ಸ್ವಾಮಿಯಾಗಿರುವನು. ಮೋಕ್ಷದಲ್ಲೂ ಅವು ಅಗ್ನಿಯ ಅಧೀನ. ಚಿತ್ತವು ಸಂಕಲ್ಪಾದಿಗಳಿಗಿಂತ ಉತ್ತಮವಾಗಿರುವುದರಿಂದಲೇ ಬಹುಶಾಸ್ತ್ರಗಳನ್ನು ಅರಿತಿರುವನಾಗಿದ್ದು ಸ್ಮರಣಶಕ್ತಿರಹಿತನಾಗಿದ್ದರೆ, ಅವನು ಇದ್ದರೂ ಇಲ್ಲವೆಂದೇ ಜ್ಞಾನಿಗಳು ಹೇಳುತ್ತಾರೆ. ಅಂದರೆ ಅವನು ವಿದ್ವಾಂಸನಾಗಿದ್ದರೂ ವಿದ್ವಾಂಸನಾಗಿಲ್ಲ ಎಂದೆನ್ನುತ್ತಾರೆ. ಅವನು ಒಂದು ವೇಳೆ ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಶಾಸ್ತ್ರಗಳನ್ನು ಅರಿತವನಾಗಿದ್ದರೆ, ಈ ರೀತಿಯಾಗಿ ಸ್ಮರಣಶಕ್ತಿರಹಿತನಾಗುತ್ತಿರಲಿಲ್ಲ. ಸ್ಮರಣೆ ರಹಿತನಾಗಿರುವುದರಿಂದ ಅವನು ವಿದ್ವಾಂಸನಲ್ಲವೆಂದು ಆ ಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಒಂದುವೇಳೆ ಅಲ್ಪಜ್ಞಾನಿಯಾಗಿದ್ದರೂ ಸ್ಮರಣಶಕ್ತಿಯುಳ್ಳವನಾಗಿದ್ದರೆ ಅವನಿಂದ ತಮಗೆ ಇಷ್ಟವಾದ ಪ್ರಮೇಯಗಳನ್ನು ಕೇಳಿ ತಿಳಿದುಕೊಳ್ಳಲು ಇಚ್ಛಿಸುತ್ತಾರೆ. ಹೀಗೆ ಸಂಕಲ್ಪ, ಮನಸ್ಸು, ವಾಕ್, ನಾಮ, ಮಂತ್ರ, ಕರ್ಮ ಹಾಗೂ ಅವುಗಳ ಅಭಿಮಾನಿದೇವತೆಗಳಿಗೆ, ಚಿತ್ತನೆನಿಸಿರುವ ಅಗ್ನಿದೇವನೇ ಆಶ್ರಯನು. ಅವನೇ ಸ್ವಾಮಿಯು. ಮೋಕ್ಷದಲ್ಲೂ ಇವರೆಲ್ಲರೂ ಈ ಅಗ್ನಿದೇವನ ಅಧೀನ. ಚಿತ್ತನೆನಿಸಿರುವ ಈ ಅಗ್ನಿದೇವನಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನೆಂದು ಉಪಾಸಿಸು.

**'ಸ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇ ಚಿತ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿ-ಸಿಧ್ಯತಿ। ಯಾವತ್ ಚಿತ್ತಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಃ ಚಿತ್ತಂ ಬ್ರಹ್ಮೇತ್ಯುಪಾಸ್ತೇ'। 'ಅಸ್ತಿ ಭಗವಃ ಚಿತ್ತಾತ್ ಭೂಯಃ?' ಇತಿ। ಚಿತ್ತಾದ್ವಾವ ಭೂಯೋಽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।**

ಯಾರು ಚಿತ್ತನೆನಿಸಿರುವ ಅಗ್ನಿಯಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನೆಂದು ಉಪಾಸನೆ ಗೈಯುವನೋ ಅವನು ಸ್ವತಃ ನಾಶರಹಿತನೂ, ಒಳ್ಳೆಯ ಸ್ಥಿತಿವಂತನೂ, ದುಃಖರಹಿತನೂ ಆಗಿ, ನಾಶರಹಿತವಾದ, ಪ್ರತಿಷ್ಠಿತವಾದ ದುಃಖರಹಿತವಾದ ಚಿತ್ತಾಭಿಮಾನಿ ಅಗ್ನಿಯಿಂದ ಅಧಿಷ್ಠಿತವಾದ ಲೋಕಗಳನ್ನು ತಲುಪುತ್ತಾನೆ. ಅಲ್ಲಿ ಎಲ್ಲಿಯ ತನಕ ಚಿತ್ತನೆನಿಸಿರುವ ಅಗ್ನಿಯ ವ್ಯಾಪ್ತಿ ಇದೆಯೋ ಅಲ್ಲೆಲ್ಲಾ ತನ್ನ ಇಚ್ಛಾನುಸಾರವಾಗಿ ಸಂಚರಿಸಬಲ್ಲವನಾಗುವನು ಎಂದು ಸನತ್ಕುಮಾರರು ಉಪದೇಶಿಸಿದಾಗ ನಾರದರು, ಪೂಜ್ಯರೇ ! ಚಿತ್ತನೆನಿಸಿರುವ ಈ

ಅಗ್ನಿಗಿಂತಲೂ ಶ್ರೇಷ್ಠರಿರುವರೇನು ?' ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ 'ಚಿತ್ತನಿಗಿಂತಲೂ ಉತ್ತಮರಿರುವರು' ಎಂದು ಸನತ್ಕುಮಾರರು ಹೇಳಿದ್ದಾಗ 'ಹಾಗಿದ್ದಲ್ಲಿ ಪೂಜ್ಯರಾದ ತಾವು ಅದನ್ನು ನನಗೆ ತಿಳಿಯಹೇಳಿ' ಎಂದು ನಾರದರು ಪ್ರಾರ್ಥಿಸಿದರು.

ಧ್ಯಾನಂ ವಾವ ಚಿತ್ತಾತ್ ಭೂಯಃ । ಧ್ಯಾಯತೀವ ಪೃಥಿವೀ । ಧ್ಯಾಯತೀವ ದ್ಯೌಃ । ಧ್ಯಾಯತೀವಾಂತರಿಕ್ಷಮ್ । ಧ್ಯಾಯಂತೀವಾಪಃ । ಧ್ಯಾಯಂತೀವ ಪರ್ವತಾಃ । ಧ್ಯಾಯಂತೀವ ದೇವಮನುಷ್ಯಾಃ । ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವಂತಿ ಧ್ಯಾನಾಪಾದಂಶಾ ಇವೈವ ತೇ ಭವಂತಿ । ಅಥ ಯೇಽಲ್ಪಾಃ ಕಲಹಿನಃ ಪಿಶುನಾ ಉಪವಾದಿನಸ್ತೇ । ಅಥ ಯೇ ಪ್ರಭವೋ ಧ್ಯಾನಾಪಾದಂಶಾ ಇವೈವ ತೇ ಭವಂತಿ । ಧ್ಯಾನಮುಪಾಸ್ವ ಇತಿ ॥

ಮುಕ್ತಿ ಹಾಗೂ ಸಂಸಾರಾವಸ್ಥೆಗಳಲ್ಲಿ ಚಿತ್ತನೆನಿಸಿಕೊಂಡಿರುವ ಅಗ್ನಿದೇವನಿಗಿಂತ ಧ್ಯಾನಾಭಿಮಾನಿಯಾಗಿದ್ದು ಧ್ಯಾನನೆನಿಸಿರುವ ವರುಣದೇವನು ಶ್ರೇಷ್ಠನು. ಆದುದರಿಂದ ಪೃಥಿವೀ, ಸ್ವರ್ಗ, ಅಂತರಿಕ್ಷ ನೀರು ಹಾಗೂ ಪರ್ವತ ಇವುಗಳಿಗೆ ಅಭಿಮಾನಿಗಳಾಗಿರುವ ದೇವತೆಗಳು ಹಾಗೂ ಮನುಷ್ಯದೇಹವನ್ನು ಹೊಂದಿರುವ ದೇವತೆಗಳು ಬಹುಭಾಷಿಗಳಾಗಿರದೆ, ಧ್ಯಾನವಿಷಯದಲ್ಲಿ ಅಸ್ವತಂತ್ರರಾಗಿದ್ದರೂ, ಪರಮಾತ್ಮನ ಪ್ರೇರಣೆಯಿಂದ ಧ್ಯಾನದಲ್ಲೇ ಮಗ್ನರಾಗಿರುತ್ತಾರೆ. ಧ್ಯಾನಾಭಿಮಾನಿಯು ಶ್ರೇಷ್ಠನಾಗಿರುವುದರಿಂದಲೇ ಮನುಷ್ಯರ ಮಧ್ಯದಲ್ಲಿ ಯಾರು ಜ್ಞಾನ, ಬಲ, ಐಶ್ವರ್ಯ, ಭಕ್ತಿ ಮೊದಲಾದ ಸದ್ಗುಣಗಳ ವಿಷಯದಲ್ಲಿ ಶ್ರೇಷ್ಠರೆನಿಸಿಕೊಂಡಿರುವರೋ ಅಂತಹವರ ಆ ಶ್ರೇಷ್ಠತೆಯು ಪರಮಾತ್ಮನ ಅನುಗ್ರಹದಿಂದ ಲಭಿಸಿದ ಧ್ಯಾನಫಲದ ಒಂದಂಶವಾಗಿದೆ. ಧ್ಯಾನ ಫಲೈಕದೇಶವಾದ ಇಂತಹ ಶ್ರೇಷ್ಠತೆ ಇಲ್ಲದಿರುವುದರಿಂದ ಮನುಷ್ಯರಲ್ಲಿ ಯಾರು ಅಲ್ಪರೆನಿಸಿಕೊಂಡಿರುವರೋ ಅವರು ಧ್ಯಾನದ ಲೇಶವನ್ನು ಮಾಡಲಾರದವರಾಗಿ ಕಲಹಶೀಲರೂ, ಚಾಡಿ ಹೇಳುವ ಸ್ವಭಾವದವರೂ, ಪರರನ್ನು ನಿಂದಿಸುವವರೂ ಆಗಿರುವರು. ಯಾರು ಶ್ರೇಷ್ಠರಾಗಬೇಕೆಂಬ ಇಚ್ಛೆಯುಳ್ಳವರೋ ಅವರ ಅಂತಹ ಇಚ್ಛೆಯೂ ಪರಮಾತ್ಮನ ಅನುಗ್ರಹದಿಂದ ಲಭಿಸಿದ ಧ್ಯಾನಫಲದ ಒಂದಂಶವಾಗಿದೆ. ಧ್ಯಾನಾಭಿಮಾನಿಯಾಗಿದ್ದು ಧ್ಯಾನನೆನಿಸಿರುವ ವರುಣನಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನೆಂದು ಆರಾಧಿಸು.

'ಸ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇ । ಯಾವತ್ ಧ್ಯಾನಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವೋ

ಧ್ಯಾನಾತ್ ಭೂಯಃ ?' ಇತಿ । 'ಧ್ಯಾನಾದ್ವಾವಭೂಯೋಽಸ್ತಿ' ಇತಿ । 'ತನ್ಮೇ ಭಗವಾನ್ ಬ್ರವೀತು' ಇತಿ ॥

ಮುಕ್ತಿ ಹಾಗೂ ಸಂಸಾರಾವಸ್ಥೆಗಳಲ್ಲಿ 'ಧ್ಯಾನಾಭಿಮಾನಿಯಾಗಿರುವ ವರುಣನಲ್ಲಿ ನಿಯಾಮಕನಾಗಿರುವ ಪರಬ್ರಹ್ಮನನ್ನು ಯಾರು ಉಪಾಸಿಸುವನೋ ಅವನು ವರುಣಲೋಕವನ್ನು ಹೊಂದಿ, ಅಲ್ಲಿ ಎಲ್ಲಿಯತನಕ ವರುಣನ ವ್ಯಾಪ್ತಿ ಇರುವುದೋ ಅಲ್ಲೆಲ್ಲಾ ತನ್ನ ಇಚ್ಛಾನುಸಾರವಾಗಿ ಸಂಚರಿಸಬಲ್ಲವನಾಗುವನು' ಎಂದು ಸನತ್ಕುಮಾರರು ಉಪದೇಶಿಸಲು ನಾರದರು 'ಪೂಜ್ಯರೇ ! ಧ್ಯಾನನಾಮಕನಾದ ವರುಣದೇವನಿಗಿಂತಲೂ ಶ್ರೇಷ್ಠರಿರುವರೇನು ?' ಎಂದು ಪ್ರಶ್ನಿಸಿದರು. ಆಗ ಸನತ್ಕುಮಾರರು 'ಧ್ಯಾನನಾಮಕನಾದ ವರುಣನಿಗಿಂತಲೂ ಶ್ರೇಷ್ಠರಿರುವರು' ಎಂದು ಉತ್ತರಿಸಲು, 'ಹಾಗಿದ್ದಲ್ಲಿ ಪೂಜ್ಯರಾದ ತಾವು ಅದನ್ನು ನನಗೆ ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

'ವಿಜ್ಞಾನಂ ವಾವ ಧ್ಯಾನಾತ್ ಭೂಯಃ । ವಿಜ್ಞಾನೇನ ವಾ ಋಗ್ವೇದಂ ವಿಜಾನಾತಿ । ಯಜುರ್ವೇದಂ ಸಾಮವೇದಮಾರ್ಥರ್ವಣಂ ಚತುರ್ಥಮಿತಿಹಾಸ ಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪ ದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚ ಆಪಶ್ಚ ತೇಪಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ತೃಣ ವನಸ್ಪತೀನ್ ಶ್ವಾಪದಾನ್ಯಾಕೀಟಪತಂಗಪಿಪೀಲಿಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚಾನ್ನಂ ಚ ರಸಂ ಚೇಮಂ ಚ ಲೋಕ ಮಮುಂ ಚ ವಿಜ್ಞಾನೇ ನೈವ ವಿಜಾನಾತಿ । ವಿಜ್ಞಾನಮುಪಾಸ್ಸ' ಇತಿ ॥

ವಿಜ್ಞಾನಕ್ಕೆ ಅಭಿಮಾನಿಯಾಗಿರುವುದರಿಂದಲೂ, ಸತ್ಯವನ್ನು ಶೋಧಿಸುವ ನಿಮಿತ್ತದಿಂದಲೂ ವಿಜ್ಞಾನನೆನಿಸಿರುವ ಚಂದ್ರನು ಧ್ಯಾನನೆನಿಸಿರುವ ವರುಣನಿಗಿಂತಲೂ ಉತ್ತಮನು. ವಿಜ್ಞಾನನೆನಿಸಿರುವ ಚಂದ್ರನಿಂದಾಗಿಯೇ ಋಗ್ವೇದವನ್ನು ಯಜುರ್ವೇದವನ್ನೂ, ಸಾಮವೇದವನ್ನೂ, ಅಥರ್ವಣವೇದವನ್ನೂ, ವೇದಗಳ ಸರಿಸಮಾನವಾಗಿರುವುದರಿಂದ ಪಂಚಮವೇದವೆನಿಸಿರುವ ಇತಿಹಾಸಪುರಾಣಗಳನ್ನೂ ಪಿತೃಲಕ್ಷಣವನ್ನು ನಿರೂಪಿಸುವ ಶಾಸ್ತ್ರವನ್ನೂ, ಗಣಿತವಾಸ್ತ್ರವನ್ನೂ, ದೇವತೆಗಳ ಲಕ್ಷಣವನ್ನು ನಿರೂಪಿಸುವ ಶಾಸ್ತ್ರವನ್ನೂ

ನಿಧಿಯ ಚಿಹ್ನೆಯನ್ನು ತಿಳಿಸಿಕೊಡುವ ಶಾಸ್ತ್ರವನ್ನೂ, ಮೂಲವೇದವನ್ನೂ, ಪಂಚರಾತ್ರವನ್ನೂ, ದೇವತೆಗಳಿಗೆ ಮಾತ್ರ ಅರ್ಥವಾಗುವುದರಿಂದ ದೇವತಾ ವಿದ್ಯೆಯೆನಿಸಿರುವ ಶಾಸ್ತ್ರವನ್ನೂ, ಆರಣ್ಯಕಗಳನ್ನೂ, ಪಂಚಭೂತಗಳ ಲಕ್ಷಣಪರಶಾಸ್ತ್ರವನ್ನೂ, ನೀತಿಶಾಸ್ತ್ರವನ್ನೂ, ಜ್ಯೋತಿಃ ಶಾಸ್ತ್ರವನ್ನೂ, ಸರ್ಪಗಳ ಹಾಗೂ ದೇವಸೇವಕರಾದ ಗಂಧರ್ವರ ಪರಿಚಾಯಕವಾದ ಶಾಸ್ತ್ರವನ್ನೂ ಆಯಾಯಾ ಶಾಸ್ತ್ರಗಳಿಗೆ ಸಂಬಂಧಿಸಿದ ಅಧ್ಯೇತೃಗಳು ಅರಿತುಕೊಳ್ಳುತ್ತಾರೆ. ಸ್ವರ್ಗ, ಪೃಥಿವೀ, ವಾಯು, ಆಕಾಶ, ಜಲ, ತೇಜಸ್ಸು, ದೇವತೆಗಳು, ಮನುಷ್ಯರು, ಪಶುಪಕ್ಷಿಗಳು, ಹುಲ್ಲು, ಮರ, ಅರಣ್ಯದಲ್ಲಿರುವ ಜಂತುಗಳು, ಕೀಟ, ಪತಂಗ, ಇರುವೆ ಇವೇ ಮೊದಲಾದ ಎಲ್ಲಾ ಪ್ರಾಣಿಗಳನ್ನೂ ಧರ್ಮವನ್ನೂ, ಅಧರ್ಮವನ್ನೂ, ಸತ್ಯಾಸತ್ಯಗಳನ್ನು, ಯೋಗ್ಯ ಹಾಗೂ ಅಯೋಗ್ಯ ವಿಷಯಗಳನ್ನೂ, ಹೃದಯದಲ್ಲಿ ನಿಯಾಮಕನಾಗಿರುವ ಪರತತ್ತ್ವವನ್ನರಿತವನನ್ನೂ, ಇಂತಹ ಪರತತ್ತ್ವಕ್ಕಿಂತ ಇತರವಾದ ಜಗತ್ತನ್ನು ಅರಿತವನನ್ನೂ, ಅನ್ನವನ್ನೂ, ರಸವನ್ನೂ, ಇಹ ಹಾಗೂ ಪರಲೋಕಗಳನ್ನೂ ವಿಜ್ಞಾನನೆನಿಸಿರುವ ಚಂದ್ರನ ಅನುಗ್ರಹದಿಂದಲೇ ಅಧಿಕಾರಿಗಳು ಅರಿತುಕೊಳ್ಳುವರು. ವಿಜ್ಞಾನನೆನಿಸಿರುವ ಚಂದ್ರನಲ್ಲಿ ನಿಯಾಮಕನಾಗಿರುವ ಪರಮಾತ್ಮನನ್ನು ಆರಾಧಿಸು.

'ಸ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ ವಿಜ್ಞಾನವತೋ ಹ ವೈ ಲೋಕಾನ್ ಜ್ಞಾನವತೋಽಭಿಸಿಧ್ಯತಿ । ಯಾವತ್ ವಿಜ್ಞಾನಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವೋ ವಿಜ್ಞಾನಾತ್ ಭೂಯಃ?' ಇತಿ । ವಿಜ್ಞಾನಾದ್ವಾವ ಭೂಯೋಽಸ್ತಿ' ಇತಿ । ತನ್ಮೇ ಭಗವಾನ್ ಬ್ರವೀತು' ಇತಿ ।

'ಯಾರು ವಿಜ್ಞಾನನೆನಿಸಿರುವ ಚಂದ್ರನಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನೆಂದು ಉಪಾಸನೆಗೈಯುವನೋ ಅವನು ವಿಶೇಷ ಜ್ಞಾನ ಹಾಗೂ ಸಾಮಾನ್ಯಜ್ಞಾನಗಳಿಗೆ ಅಭಿಮಾನಿಯಾದ ಚಂದ್ರನಿಂದ ಅಧಿಷ್ಠಿತ ಲೋಕಗಳನ್ನು ಸಾಧಿಸಿಕೊಳ್ಳುವನು. ಆ ಲೋಕಗಳಲ್ಲಿ ಎಲ್ಲಿಯ ತನಕ ವಿಜ್ಞಾನನೆನಿಸಿರುವ ಚಂದ್ರನ ವ್ಯಾಪ್ತಿಯಿರುವುದೋ ಅಲ್ಲೆಲ್ಲಾ ಆ ಉಪಾಸಕನು ಇಚ್ಛಾನುಸಾರವಾಗಿ ಸಂಚರಿಸಬಲ್ಲವ- ನಾಗುವನು' ಎಂದು ಸನತ್ಕುಮಾರರು ಉಪದೇಶಿಸಿದಾಗ ನಾರದರು, 'ಪೂಜ್ಯರೇ ! ವಿಜ್ಞಾನನೆನಿಸಿರುವ ಚಂದ್ರನಿಗಿಂತಲೂ ಶ್ರೇಷ್ಠರಿರುವರೇನು?' ಎಂದು ಪ್ರಶ್ನಿಸಿದರು. ಅದಕ್ಕೆ ಉತ್ತರವಾಗಿ ಸನತ್ಕುಮಾರರು 'ವಿಜ್ಞಾನನಿಗಿಂತಲೂ ಉತ್ತಮರಿರುವರು' ಎಂದು ಹೇಳಲು, 'ಪೂಜ್ಯರಾದ ತಾವು ನನಗೆ ಅದನ್ನು ತಿಳಿಯ ಹೇಳಿ' ಎಂದು ನಾರದರು ಪ್ರಾರ್ಥಿಸಿದರು.

ಬಲಂ ವಾವ ವಿಜ್ಞಾನಾತ್ ಭೂಯಃ । ಅಪೀಹ ಶತಂ ವಿಜ್ಞಾನವತಾಮೇಕೋ ಬಲವಾನಾಕಂಪಯತೇ । ಸ ಯದಾ ಬಲೀ ಭವತ್ಯಥೋತ್ಥಾತಾ ಭವತಿ । ಉತ್ತಿಷ್ಠನ್ ಪರಿಚರಿತಾ ಭವತಿ । ಪರಿಚರನ್ನುಪಸತ್ತಾ ಭವತಿ । ಉಪಸೀದನ್ ದ್ರಷ್ಟಾ ಭವತಿ । ಶ್ರೋತಾ ಭವತಿ । ಮಂತಾ ಭವತಿ । ಬೋದ್ಧಾ ಭವತಿ । ಕರ್ತಾ ಭವತಿ । ವಿಜ್ಞಾತಾ ಭವತಿ । ಬಲೇನ ವೈ ಪೃಥಿವೀ ತಿಷ್ಠತಿ । ಬಲೇನಾಂತರಿಕ್ಷಮ್। ಬಲೇನ ದ್ಯೌಃ । ಬಲೇನಾಪಃ । ಬಲೇನ ಪರ್ವತಾಃ । ಬಲೇನ ದೇವಮನುಷ್ಯಾಃ । ಬಲೇನ ಪಶವಶ್ಚ ವಯಾಂಸಿ ಚ ತೃಣ ವನಸ್ಪತಯಃ ಶ್ವಾಪದಾನ್ಯಾಕೀಟ ಪತಂಗ ಪಿಪೀಲಿಕಮ್ । ಬಲೇನ ವೈ ಲೋಕಃ ತಿಷ್ಠತಿ । ಬಲಮುಪಾಸ್ವ ಇತಿ ॥

'ಯುಕ್ತಿಯಿಂದ ವಿವೇಚಿಸಿ ಸಂಪಾದಿಸಲ್ಪಟ್ಟ ದೃಢವಾದ ನಿರ್ಣಯವು ಆಂತರಿಕ ಬಲ, ದೇಹದಾರ್ಢ್ಯವು ಬಾಹ್ಯಬಲ, ಇವೆರಡಕ್ಕೂ ಅಭಿಮಾನಿಯಾಗಿರುವುದರಿಂದ ಬಲವೆನಿಸಿರುವ ಭೂತ ವಾಯ್ವಭಿಮಾನಿದೇವತೆಯು ವಿಜ್ಞಾನನಾಮಕನಾದ ಚಂದ್ರನಿಗಿಂತಲೂ ಶ್ರೇಷ್ಠನು. ಆಂತರಿಕಬಲಶಾಲಿಯೆನಿಸಿದ ಒಬ್ಬ ಜ್ಞಾನಿಯು. ಇಂತಹ ನಿರ್ಣಯವನ್ನು ಸಂಪಾದಿಸದೇ ಇರುವ ನೂರಾರು ಜ್ಞಾನಿಗಳನ್ನು, ತನ್ನ ಆ ಬಲದ ಸಹಾಯದಿಂದ ನಡುಗಿಸಬಲ್ಲನು. ಪುರುಷನು ಯಾವಾಗ ಆಂತರಿಕ ಬಲವುಳ್ಳವನಾಗುತ್ತಾನೋ ಆಗ ಸಂಸಾರ ಮೋಹದಿಂದ ಎಚ್ಚೆತ್ತವನಾಗುವನು. ಹೀಗೆ ಎಚ್ಚೆತ್ತವನು ಜ್ಞಾನಸಂಪಾದನೆಗಾಗಿ ಗುರುಗಳನ್ನು ಸೇವಿಸುವನು. ಗುರುಗಳನ್ನು ಸೇವಿಸಿದವನು ಅವರ ಪ್ರೀತಿಪಾತ್ರನೆನಿಸಿ ಆಪ್ತನಾಗುವನು. ಆಪ್ತನೆನಿಸಿದವನು ಶಾಸ್ತ್ರಶ್ರವಣ ಮಾಡಿದವನೂ, ಶಾಸ್ತ್ರಾರ್ಥ ವಿಚಾರ ಮಾಡಿದವನೂ, ಪರತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡವನೂ, ವರ್ಣಾಶ್ರಮೋಚಿತ ಕರ್ಮಾನುಷ್ಠಾನಗೈಯುವವನೂ, ವಿಶೇಷಜ್ಞಾನವನ್ನು ಸಂಪಾದಿಸಿಕೊಂಡವನೂ ಆಗುವನು. ದೇಹದಾರ್ಢ್ಯರೂಪಬಲವುಳ್ಳವನು ಆವಶ್ಯಕವಾದ ಕೆಲಸಗಳನ್ನು ಮಾಡಲು ಎದ್ದೇಳುತ್ತಾನೆ. ಮೇಲೆದ್ದವನು ಎಲ್ಲಾ ಕಡೆ ತಿರುಗಾಡುತ್ತಾನೆ. ತಿರುಗಾಡುತ್ತಾ ತನಗೆ ಯೋಗ್ಯರಾದ ಗುರುಗಳನ್ನು ಸಮೀಪಿಸಿ, ಅವರನ್ನು ಸೇವಿಸಿ, ಅವರಿಗೆ ಪ್ರೀತಿಪಾತ್ರನೆನಿಸಿ, ಅವರ ಅನುಗ್ರಹದಿಂದ ಶಾಸ್ತ್ರಾರ್ಥಶ್ರವಣ ಹಾಗೂ ಶಾಸ್ತ್ರಾರ್ಥವಿಚಾರಗಳನ್ನು ಮಾಡಿ ಪರತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ದೇಹದಾರ್ಢ್ಯ- ವಿರುವುದರಿಂದಲೇ ವರ್ಣಾಶ್ರಮೋಚಿತ ಕರ್ಮಾನುಷ್ಠಾನಗೈಯುವನು. ಮೋಕ್ಷೋಪಯೋಗಿಯಾದ ವಿಶೇಷಜ್ಞಾನವನ್ನೂ ಹೊಂದುವನು. ಹೀಗೆ ಶ್ರೇಯಸ್ಸಿಗೆ ಆಂತರಿಕ ಹಾಗೂ ಬಾಹ್ಯಬಲಗಳೇ ಕಾರಣವಾಗಿರುವುದರಿಂದ ಬಲಾಭಿಮಾನಿಯಾದ ವಾಯುದೇವನು

ಶ್ರೇಷ್ಠನೆಂದು ಸಿದ್ಧಿಸುತ್ತದೆ. ಬಲಾಭಿಮಾನಿಯಾದ ಈ ವಾಯುದೇವನ ಅನುಗ್ರಹದಿಂದಲೇ ಪೃಥಿವೀ, ಅಂತರಿಕ್ಷ, ಸ್ವರ್ಗ, ನೀರು, ಪರ್ವತಗಳು ಇವುಗಳ ಅಭಿಮಾನಿದೇವತೆಗಳೂ, ಮನುಷ್ಯರಾಗಿ ಅವತರಿಸಿದ ದೇವತೆಗಳೂ ಒಳ್ಳೆಯ ಸ್ಥಿತಿಯುಳ್ಳವರಾಗಿರುವರು. ಪಶುಗಳೂ, ಹಕ್ಕಿಗಳೂ, ತೃಣಗಳೂ, ಮರಗಳೂ, ದುಷ್ಟಮೃಗಗಳೂ, ಹುಳು, ಚಿಟ್ಟೆ, ಇರುವೆ ಪರ್ಯಂತ ಎಲ್ಲಾ ಜೀವಿಗಳೂ ಬಲಾಭಿಮಾನಿಯಾದ ಈ ವಾಯುದೇವನ ಅನುಗ್ರಹದಿಂದಲೇ ನಿಯತವಾದ ಸ್ಥಿತಿಯುಳ್ಳವುಗಳಾಗಿವೆ. ಇಂತಹ ಬಲಾಭಿಮಾನಿಯಾದ ಭೂತ ವಾಯ್ವಾಭಿಮಾನಿ ದೇವತೆಯಲ್ಲಿ ನಿಯಾಮಕನಾಗಿ ಪರಬ್ರಹ್ಮನಿರುವನೆಂದು ಆರಾಧಿಸು.

'ಸ ಯೋ ಬಲಂ ಬ್ರಹ್ಮೇತ್ಯುಪಾಸ್ತೇ । ಯಾವದ್ಬಲಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಬಲಂ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವೋ ಬಲಾತ್ ಭೂಯಃ?' ಇತಿ। 'ಬಲಾದ್ವಾವ ಭೂಯೋಽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।

ಯಾರು ಬಲನೆನಿಸಿಕೊಂಡಿರುವ ಈ ವಾಯುದೇವನಲ್ಲಿ ಪರಬ್ರಹ್ಮನನ್ನು ಉಪಾಸಿಸುವನೋ ಅವನು ಈ ಬಲಾಭಿಮಾನಿಯ ಲೋಕವನ್ನು ಹೊಂದಿ, ಅಲ್ಲಿ ಎಷ್ಟು ಪ್ರದೇಶದಲ್ಲಿ ಬಲಾಭಿಮಾನಿಯ ವ್ಯಾಪ್ತಿಯಿದೆಯೋ ಅಲ್ಲೆಲ್ಲಾ ಇಚ್ಛಾನುಸಾರವಾಗಿ ತಿರುಗಾಡಲು ಶಕ್ತನಾಗುವನು ಎಂದು ಸನತ್ಕುಮಾರರು ಉಪದೇಶಿಸಲು ನಾರದರು 'ಪೂಜ್ಯರೇ, ಈ ಬಲಾಭಿಮಾನಿ ವಾಯುದೇವನಿಗಿಂತಲೂ ಶ್ರೇಷ್ಠರು ಇರುವರೇನು?' ಎಂದು ಪ್ರಶ್ನಿಸಿದರು. ಇದಕ್ಕೆ ಉತ್ತರವಾಗಿ ಸನತ್ಕುಮಾರರು ಬಲಾಭಿಮಾನಿಗಿಂತಲೂ ಶ್ರೇಷ್ಠರಿರುವರು' ಎಂದು ಹೇಳಿದಾಗ ನಾರದರು 'ಪೂಜ್ಯರಾದ ತಾವು ನನಗೆ ಅದನ್ನು ತಿಳಿಯಹೇಳಿ' ಎಂದು ಪ್ರಾರ್ಥಿಸಿದರು.

ಅನ್ನಂ ವಾವ ಬಲಾತ್ ಭೂಯಃ । ತಸ್ಮಾದ್ಯದ್ಯಪಿ ದಶರಾತ್ರೀರ್ನಾಶ್ನೀಯಾತ್ ಯದ್ಯುಹ ಜೀವೇದಥಾಽದ್ರಷ್ಟಾಽಶ್ರೋತಾಽಮಂತಾಽಬೋದ್ಧಾಽಕರ್ತಾಽ-ವಿಜ್ಞಾತಾ ಭವತಿ । ಅಥಾನ್ನಸ್ಯಾಶೀ ದ್ರಷ್ಟಾ ಭವತಿ । ಶ್ರೋತಾ ಭವತಿ । ಮಂತಾ ಭವತಿ । ಬೋದ್ಧಾ ಭವತಿ । ಕರ್ತಾ ಭವತಿ । ವಿಜ್ಞಾತಾ ಭವತಿ । ಅನ್ನಮುಪಾಸ್ಸ್ವ ಇತಿ ।

ಬಲಾಭಿಮಾನಿಯಾದ ಪ್ರವಹನಿಗಿಂತಲೂ, ಅನ್ನಾಭಿಮಾನಿಯಾಗಿದ್ದು ಅನ್ನನೆನಿಸಿರುವ ಅನಿರುದ್ಧನು ಶ್ರೇಷ್ಠನು. ಈ ಅನ್ನಾಭಿಮಾನಿಯು ಶ್ರೇಷ್ಠನಾಗಿರುವುದರಿಂದಲೇ ಹತ್ತು ದಿವಸ ಉಣ್ಣದೇ ಇರುವವನು ಒಂದು ವೇಳೆ ಜೀವಿಸಿದರೂ ಶ್ರವಣ, ಮನನ,

ಸಾಕ್ಷಾತ್ಕಾರ, ಸ್ವಕರ್ಮಾಚರಣೆ, ವಿಶೇಷವಾದ ಅರಿವು ಎಂಬೀ ಯಾವ ವ್ಯಾಪಾರಗಳಿಗೂ ಅಶಕ್ತನೆನಿಸುವನು. ಅನ್ನವನ್ನು ಸೇವಿಸಿದನೆಂದರೆ ಆಗ ಶ್ರವಣ, ಮನನ, ಸಾಕ್ಷಾತ್ಕಾರ, ನಾನಾ ಕರ್ಮಾಚರಣೆ, ವಿಶೇಷವಾದ ಅರಿವು ಎಂಬೀ ಎಲ್ಲಾ ವ್ಯಾಪಾರಗಳಲ್ಲೂ ಶಕ್ತನೆನಿಸುವನು. ಅನ್ನಕ್ಕಭಿಮಾನಿಯಾಗಿದ್ದು ಅನ್ನನೆನಿಸಿರುವ ಅನಿರುದ್ಧನಲ್ಲಿ ಪರಬ್ರಹ್ಮನಿರುವನೆಂದು ಉಪಾಸಿಸು.

'ಸ ಯೋऽನ್ನಂ ಬ್ರಹ್ಮೇತ್ಯುಪಾಸ್ತೇ ಅನ್ನವತೋ ಹ ವೈ ಲೋಕಾನ್ ಪಾನವತೋऽಭಿಸಿದ್ಧ್ಯತಿ । ಯಾವದನ್ನಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋऽನ್ನಂ ಬ್ರಹ್ಮೇತ್ಯುಪಾಸ್ತೇ'।'ಅಸ್ತಿ ಭಗವೋऽನ್ನಾದ್ಭೂಯಃ?' ಇತಿ। ಅನ್ನಾದ್ವಾವ ಭೂಯೋऽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।

'ಯಾರು ಅನ್ನನೆನಿಸಿರುವ ಅನಿರುದ್ಧನಲ್ಲಿ ಪರಬ್ರಹ್ಮನಿರುವನೆಂದು ಉಪಾಸಿಸುವನೋ ಅವನು ಅನ್ನಪಾನಾದಿಗಳಿಂದ ಸಮೃದ್ಧವಾದ ಅನಿರುದ್ಧನ ಲೋಕಗಳನ್ನು ಹೊಂದುತ್ತಾನೆ. ಅಲ್ಲಿ ಎಲ್ಲಿಯ ತನಕ ಅನಿರುದ್ಧನ ವ್ಯಾಪ್ತಿಯಿದೆಯೋ ಅಲ್ಲೆಲ್ಲಾ ಇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುವನು' ಎಂದು ಸನತ್ಕುಮಾರರು ಉಪದೇಶಿಸಿದರು. ಆಗ ನಾರದರು 'ಪೂಜ್ಯರೇ ! ಅನ್ನಾಭಿಮಾನಿಗಿಂತಲೂ ಶ್ರೇಷ್ಠರೆನಿಸಿದವರಿರುವರೇನು ?' ಎಂದು ಪ್ರಶ್ನಿಸಲು, ಸನತ್ಕುಮಾರರು 'ಅನ್ನಾಭಿಮಾನಿಗಿಂತಲೂ ಉತ್ತಮರಿರುವರು' ಎಂದುತ್ತರಿಸಿದರು. 'ಹಾಗಿದ್ದರೆ ಪೂಜ್ಯರಾದ ತಾವು ನನಗದನ್ನು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

'ಆಪೋ ವಾವಾನ್ನಾತ್ ಭೂಯಸ್ಯಃ । ತಸ್ಮಾದ್ಯದಾ ಸುವೃಷ್ಟಿರ್ನ ಭವತಿ ವ್ಯಾಧೀಯಂತೇ ಪ್ರಾಣಾ 'ಅನ್ನಂ ಕನೀಯೋ ಭವಿಷ್ಯತಿ' ಇತಿ । 'ಅಥ ಯದಾ ವೃಷ್ಟಿರ್ಭವತ್ಯಾನಂದಿನಃ ಪ್ರಾಣಾ ಭವಂತಿ 'ಅನ್ನಂ ಬಹು ಭವಿಷ್ಯತಿ' ಇತಿ । ಅಪ ಏವೇಮಾ ಮೂರ್ತಾ ಯೇऽಯಂ ಪೃಥಿವೀ, ಯದಂತರಿಕ್ಷಂ, ಯತ್ ದ್ಯೌಃ, ಯತ್ ಪರ್ವತಾಃ, ಯತ್ ದೇವಮನುಷ್ಯಾಃ, ಯತ್ ಪಶವಶ್ಚ ವಯಾಂಸಿ ಚ ತೃಣ ವನಸ್ಪತಯಃ ಶ್ವಾಪದಾನ್ಯಾಕೀಟಪತಂಗಪಿಪೀಲಿಕಮ್ । ಆಪ ಏವೇಮಾ ಮೂರ್ತಾಃ। ಅಪ ಉಪಾಸ್ವ' ಇತಿ ॥

ಅನ್ನಾಭಿಮಾನಿ ಅನಿರುದ್ಧನಿಗಿಂತಲೂ, ತೃಪ್ತಿಯೆಂಬ ಅಂತರಜಲ ಹಾಗೂ ದ್ರವರೂಪವಾದ ಬಾಹ್ಯಜಲ ಎಂಬೀ ಎರಡು ರೀತಿಯ ಜಲಕ್ಕೂ ಅಭಿಮಾನಿಯಾಗಿರುವುದರಿಂದಲೂ, ದೇಹವನ್ನು ವ್ಯಾಪಿಸಿಕೊಂಡಿರುವುದರಿಂದಲೂ 'ಅಪ್' ಎನಿಸಿಕೊಂಡಿರುವ

ಅಹಂಕಾರಿಕ ಪ್ರಾಣನು ಉತ್ತಮನಾಗಿರುವನು. ಅನ್ನಾಭಿಮಾನಿಗಿಂತ ಅಭಿಮಾನಿಯು ಶ್ರೇಷ್ಠನಾಗಿರುವುದರಿಂದಲೇ ಯಾವಾಗ ಚೆನ್ನಾಗಿ ಮಳೆಯಾಗುವುದಿಲ್ಲವೋ ಆಗ ಅನ್ನವು ಕಡಿಮೆ ಉಂಟಾಗುವುದೆಂದು ಪ್ರಾಣಿಗಳು ವ್ಯಥೆಪಡುತ್ತವೆ. ಯಾವಾಗ ಚೆನ್ನಾಗಿ ಮಳೆ ಸುರಿಯುತ್ತದೋ ಆಗ ಬಹಳ ಅನ್ನವುಂಟಾಗುವುದೆಂದು ಸಂತೋಷಗೊಳ್ಳುತ್ತವೆ. ಭೂಮಿ, ಆಕಾಶ, ಸ್ವರ್ಗ, ಪರ್ವತಗಳು, ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಹುಲ್ಲು, ಮರಗಳು, ಚಿರತೆಗಳು, ಹುಳು, ಹಾತೆ, ಇರುವೆ ವರೆಗಿನ ಎಲ್ಲಾ ಜಂತುಗಳು, ಹೀಗೆ ಎಲ್ಲಾ ಮೂರ್ತ ವಸ್ತುಗಳು ಅಬಭಿಮಾನಿಯ ಅಧೀನವಾಗಿರುವುದರಿಂದಲೇ 'ಅಪ್' ಎನಿಸಿಕೊಂಡಿವೆ. ಅಬಭಿಮಾನಿ ಅಹಂಕಾರಿಕ ಪ್ರಾಣನಲ್ಲಿ ಪರಬ್ರಹ್ಮನಿರುವನೆಂದು ಆರಾಧಿಸು.

'ಸ ಯೋಽಪೋ ಬ್ರಹ್ಮೇತ್ಯುಪಾಸ್ತೇ ಆಪ್ನೋತಿ ಸರ್ವಾನ್ ಕಾಮಾನ್ ತೃಪ್ತಿಮಾನ್ ಭವತಿ। ಯಾವದಪಾಂ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋಽಪೋ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವೋಽದ್ಭ್ಯೋ ಭೂಯ?' ಇತಿ। 'ಅದ್ಭ್ಯೋವಾವ ಭೂಯೋಽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।

ಅಬಭಿಮಾನಿ ಅಹಂಕಾರಿಕ ಪ್ರಾಣನಲ್ಲಿ ಪರಮಾತ್ಮನನ್ನು ಯಾರು ಆರಾಧಿಸುವನೋ ಅವನು ಎಲ್ಲ ಅಭೀಷ್ಟಗಳನ್ನು ಹೊಂದಿ ತೃಪ್ತನಾಗುವನು. ಈ ಪ್ರಾಣನ ವ್ಯಾಪ್ತಿಯು ಎಲ್ಲಿಯತನಕ ಇರುವುದೋ ಅಲ್ಲೆಲ್ಲಾ ಉಪಾಸಕನು ಇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುವನು. ಹೀಗೆ ಸನತ್ಕುಮಾರರು ಉಪದೇಶಿಸಿದಾಗ ನಾರದರು 'ಪೂಜ್ಯರೇ ! ಅಬಭಿಮಾನಿಗಿಂತಲೂ ಉತ್ತಮರಾದವರಿರುವರೇನು?' ಎಂದು ಪ್ರಶ್ನಿಸಿದರು. ಆಗ ಸನತ್ಕುಮಾರರು 'ಅಬಭಿಮಾನಿಗಿಂತಲೂ ಉತ್ತಮರಾದವರಿರುವರು' ಎಂದುತ್ತರಿಸಲು 'ಹಾಗಿದ್ದಲ್ಲಿ ಅದನ್ನು ಪೂಜ್ಯರಾದ ತಾವು ನನಗೆ ತಿಳಿಸಿ ಕೊಡಿ' ಎಂದು ನಾರದರು ಪ್ರಾರ್ಥಿಸಿದರು.

'ತೇಜೋವಾವಾದ್ಭ್ಯೋಭೂಯಃ। ತದ್ವಾ ಏತದ್ವಾಯುಮಾಗೃಹ್ಯಾಕಾಶಮಭಿತಪತಿ ತದಾಹುರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ । ತೇಜ ಏವ ತತ್ ಪೂರ್ವಂ ದರ್ಶಯಿತ್ವಾಥಾಽಽಪಃ ಸೃಜತೇ । ತದೇತದೂರ್ಧ್ವಾಭಿಶ್ಚತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರಂತಿ । ತಸ್ಮಾದಾಹುರ್ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ ಇತಿ। ತೇಜ ಏವ ತತ್ ಪೂರ್ವಂ ದರ್ಶಯಿತ್ವಾಥಾಽಽಪಃ ಸೃಜತೇ। ತೇಜ ಉಪಾಸ್ಸ್ವ' ಇತಿ।

ಪ್ರತಿಭಾ ಎಂಬ ಅಂತರತೇಜಸ್ಸು ಹಾಗೂ ಬಾಹ್ಯತೇಜಸ್ಸು ಇವುಗಳಿಗೆ ಅಭಿಮಾನಿಯಾಗಿದ್ದು ಓಜೋರೂಪ, ಅಂದರೆ ಇತರರನ್ನು ತಿರಸ್ಕರಿಸುವ ಶಕ್ತಿರೂಪನಾದುದರಿಂದ ತೇಜ ಎಂಬ ಹೆಸರುಳ್ಳ ಪುರಂದರನೂ ಅವನಿಗೆ ಸಮನಾದ ಕಾಮನೂ ಅಪ್‌ನಾಮಕ ಅಹಂಕಾರಿಕ ಪ್ರಾಣನಿಗಿಂತ ಉತ್ತಮ. ಹೀಗೆ ಪುರಂದರನು ಶ್ರೇಷ್ಠನಾಗಿರುವುದರಿಂದಲೇ ತೇಜನೆನಿಸಿಕೊಂಡಿರುವ ಅವನು ವಾಯುವನ್ನು ನಿಶ್ಚಲಗೊಳಿಸಿ ಆಕಾಶದಲ್ಲೆಲ್ಲಾ ತಾಪವನ್ನುಂಟುಮಾಡುತ್ತಾನೆ. ಆಗ ಲೋಕದ ಜನರು ಆದಿತ್ಯನು ಈಗ ಎಲ್ಲರಿಗೂ ದುಃಖವನ್ನುಂಟುಮಾಡುತ್ತಿದ್ದಾನೆ. ಏಕೆಂದರೆ ಬಹಳ ತಾಪವನ್ನುಂಟು- ಮಾಡುತ್ತಿದ್ದಾನೆ. ಆದುದರಿಂದ ಬೇಗನೆ ಮಳೆ ಸುರಿಸಲಿರುವನು ಎಂದು ಹೇಳಿಕೊಳ್ಳುತ್ತಾರೆ. ತೇಜೋನಾಮಕ ಪುರಂದರನೇ ತೇಜಸ್ಸನ್ನು ಮೊದಲು ವ್ಯಕ್ತಮಾಡಿ ಆಮೇಲೆ ನೀರನ್ನು ಸುರಿಸುತ್ತಾನೆ. ತೇಜೋಭಿಮಾನಿಯಾದ ಪುರಂದರನಿಂದಾಗಿಯೇ ಗುಡುಗಿನಿಂದ ಕೂಡಿದ ಮೇಘಗಳು ಮೇಲ್ಮುಖವಾಗಿಯೂ ಅಡ್ಡವಾಗಿಯೂ ಬೆಳಗುವ ಮಿಂಚುಗಳಿಂದ ಕೂಡಿ ಸಂಚರಿಸುತ್ತದೆ. ಆದ್ದರಿಂದ ಅದನ್ನು ನೋಡಿ ಜನರು ಮಿಂಚುತ್ತಿದೆ, ಗುಡುಗುತ್ತಿದೆ. ಆದ್ದರಿಂದ ಮಳೆ ಸುರಿಯುತ್ತದೆ ಎನ್ನುತ್ತಾರೆ. ತೇಜಸ್ಸಿಗೆ ಅಭಿಮಾನಿಯಾದ ಪುರಂದರನೇ ತೇಜೋರೂಪದ ಮಿಂಚನ್ನು ತೋರಿಸಿ ಮಳೆಯನ್ನು ಸುರಿಸುತ್ತಾನೆ. ತೇಜೋಭಿಮಾನಿಯಾದ ಪುರಂದರನಲ್ಲಿ ಪರಬ್ರಹ್ಮನನ್ನು ಉಪಾಸಿಸು.'

'ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ ತೇಜಸ್ವೀ ವೈಸ ತೇಜಸ್ವತೋ ಲೋಕಾನ್ ಭಾಸ್ವತೋಽಪಹತತಮಸ್ಕಾನಭಿಸಿದ್ಧ್ಯತಿ । ಯಾವತ್ ತೇಜಸೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವಸ್ತೇಜಸೋ ಭೂಯಃ?' ಇತಿ । 'ತೇಜಸೋ ಭೂಯೋಽಸ್ತಿ' ಇತಿ । 'ತನ್ಮೇ ಭಗವಾನ್ ಬ್ರವೀತು' ಇತಿ ।

'ಯಾರು ತೇಜಸ್ಸಿಗೆ ಅಭಿಮಾನಿಯಾಗಿದ್ದು ತೇಜ ಎಂಬ ಹೆಸರುಳ್ಳ ಪುರಂದರನಲ್ಲಿ ನಿಯಾಮಕನಾಗಿರುವ ಪರಬ್ರಹ್ಮನನ್ನು ಉಪಾಸಿಸುವನೋ, ಅವನು ತೇಜಸ್ವಿಯಾಗಿ ತೇಜೋಭಿಮಾನಿಯಾದ ಪುರಂದರನ ಸುಡುವ ಹಾಗೂ ಪ್ರಕಾಶಗೊಳಿಸುವ ಶಕ್ತಿಗಳುಳ್ಳ, ಅಜ್ಞಾನಂಧಾಕಾರರಹಿತವಾದ ಲೋಕಗಳನ್ನು ಪಡೆಯುತ್ತಾನೆ. ತೇಜ ಎನಿಸಿರುವ ಪುರಂದರನ ವ್ಯಾಪ್ತಿಯು ಎಲ್ಲಿಯ ತನಕ ಇದೆಯೋ ಅಲ್ಲೆಲ್ಲಾ ಇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುವನು' ಎಂದು ಸನತ್ಕುಮಾರರು ಉಪದೇಶಿಸಿದರು. ಆಗ ನಾರದರು 'ಪೂಜ್ಯರೇ! ತೇಜೋಭಿಮಾನಿಯಾದ ಪುರಂದರನಿಗಿಂತಲೂ ಉತ್ತಮರಾದವರಿರುವರೇನು ?'

ಎಂದು ಪ್ರಶ್ನಿಸಲು, ಆದಕ್ಕೆ ಉತ್ತರವಾಗಿ ಸನತ್ಕುಮಾರರು 'ತೇಜೋಭಿಮಾನಿಯಾದ ಪುರಂದರನಿಗಿಂತಲೂ ಉತ್ತಮರಿರುವರು' ಎಂದು ಹೇಳಿದರು. 'ಹಾಗಿದ್ದಲ್ಲಿ ಪೂಜ್ಯರಾದ ತಾವು ನನಗೆ ಅದನ್ನು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

'ಆಕಾಶೋವಾವತೇಜಸೋಭೂಯಾನ್। ಆಕಾಶೇವೈಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣ್ಯಗ್ನಿಃ । ಆಕಾಶೇನಾಹ್ವಯತಿ। ಆಕಾಶೇನ ಶೃಣೋತಿ । ಆಕಾಶೇನ ಪ್ರತಿಶೃಣೋತಿ । ಆಕಾಶೇ ರಮತೇ। ಆಕಾಶೇ ನ ರಮತೇ । ಆಕಾಶೇ ಜಾಯತೇ ಆಕಾಶಮಭಿಜಾಯತೇ । ಆಕಾಶಮುಪಾಸ್ವ' ಇತಿ ॥

ತೇಜಸ್ಸಿಗೆ ಅಭಿಮಾನಿಯಾದ ಪುರಂದರನಿಗಿಂತಲೂ ಬಾಹ್ಯ ಹಾಗೂ ಆಂತರಿಕ ಆಕಾಶಗಳಿಗೆ ಅಭಿಮಾನಿನಿಯಾಗಿದ್ದು ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶ ಎಂಬ ಹೆಸರುಳ್ಳ ಉಮಾದೇವಿಯು ಶ್ರೇಷ್ಠಳು. ಆಕಾಶಾಭಿಮಾನಿನಿಯ ಅಧೀನದಲ್ಲಿ ಸೂರ್ಯ-ಚಂದ್ರರು ಮಿಂಚು, ನಕ್ಷತ್ರ, ಅಗ್ನಿ ಇವರೆಲ್ಲರೂ ಇರುವರು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ಭಕ್ತನು ದೇವತೆಗಳನ್ನು ಆಹ್ವಾನಿಸುವನು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ದೇವತೆಗಳು ಆ ಆಹ್ವಾನವನ್ನು ಕೇಳಿಸಿಕೊಳ್ಳುವರು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ದೇವತೆಗಳು ಹೇಳಿದ ಮಾತನ್ನು ಭಕ್ತನು ಕೇಳಿಸಿಕೊಳ್ಳುವನು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ಸುಖ-ದುಃಖಗಳನ್ನು ಪ್ರತಿಯೊಬ್ಬನೂ ಅನುಭವಿಸುವನು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ಸಂತತಿ ಹುಟ್ಟುವುದು. ಆಕಾಶಾಭಿಮಾನಿನಿಯ ಪ್ರೇರಣೆಯಿಂದಲೇ ಎಲ್ಲವೂ ಹುಟ್ಟುತ್ತದೆ. ಆಕಾಶಾಭಿಮಾನಿನಿಯಲ್ಲಿ ಪರಬ್ರಹ್ಮನನ್ನು ಉಪಾಸಿಸು.

'ಸ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇ ಆಕಾಶವತೋ ಹ ವೈ ಸ ಲೋಕಾನ್ ಪ್ರಕಾಶವತೋಽಸಂಬಾಧಾನುರುಗಾಯವತೋಽಭಿಸಿದ್ಧ್ಯತಿ । ಯಾವದಾಕಾಶಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇ' । 'ಅಸ್ತಿ ಭಗವ ಆಕಾಶಾತ್ ಭೂಯಃ?' ಇತಿ। 'ಆಕಾಶಾದ್ವಾವ ಭೂಯೋಽಸ್ತಿ' ಇತಿ। ತನ್ಮೇ ಭಗವಾನ್ ಬ್ರವೀತು' ಇತಿ।

'ಯಾರು ಆಕಾಶಾಭಿಮಾನಿನಿ ಪಾರ್ವತಿಯಲ್ಲಿ ಪರಬ್ರಹ್ಮನನ್ನು ಉಪಾಸಿಸುವನೋ ಅವನು ಆಕಾಶಾಭಿಮಾನಿನಿ ಪಾರ್ವತಿಯ ಅಧೀನದಲ್ಲಿರುವ ಪ್ರಕಾಶಯುಕ್ತವಾಗಿರುವ ಜನನಿಬಿಡವಾಗದಿರುವ ಶ್ರೀಹರಿಯಿರುವ ಲೋಕಗಳನ್ನು ಹೊಂದುತ್ತಾನೆ. ಅಲ್ಲಿ ಎಲ್ಲಿಯ ತನಕ

ಆಕಾಶಾಭಿಮಾನಿನಿ ಪಾರ್ವತಿಯ ವ್ಯಾಪ್ತಿಯಿದೆಯೋ ಅಲ್ಲೆಲ್ಲಾ ಇಚ್ಛಾನುಸಾರ ಸಂಚರಿಲು ಶಕ್ತನಾಗುವನು' ಹೀಗೆ ಸನತ್ಕುಮಾರರು ಉಪದೇಶಿಸಿದಾಗ ನಾರದರು 'ಪೂಜ್ಯರೇ ! ಆಕಾಶಾಭಿಮಾನಿನಿಗಿಂತಲೂ ಉತ್ತಮರಿರುವರೇನು?' ಎಂದು ಪ್ರಶ್ನಿಸಿದರು. ಸನತ್ಕುಮಾರರು 'ಆಕಾಶಾಭಿಮಾನಿನಿ ಪಾರ್ವತಿಗಿಂತಲೂ ಉತ್ತಮರಿರುವರು' ಎಂದು ಹೇಳಲು, 'ಹಾಗಿದ್ದಲ್ಲಿ ಪೂಜ್ಯರಾದ ತಾವು ನನಗೆ ಅದನ್ನು ತಿಳಿಯಹೇಳಿ' ಎಂದು ನಾರದರು ಪ್ರಾರ್ಥಿಸಿದರು.

'ಸ್ಮರೋ ವಾ ಆಕಾಶಾತ್ ಭೂಯಾನ್ । ತಸ್ಮಾದ್ಯದ್ಯಪಿ ಬಹವ ಆಸೀರನ್ನ ಸ್ವರಂತೋ ನೈವ ತೇ ಕಂಚನ ಶೃಣುಯುಃ । ನ ಮನ್ವೀರನ್। ನ ವಿಜಾನೀರನ್ । ಯದಾ ವಾವ ತೇ ಸ್ಮರೇಯುರಥ ಶೃಣುಯುಃ । ಅಥ ಮನ್ವೀರನ್ । ಅಥ ವಿಜಾನೀರನ್ । ಸ್ಮರೇಣ ವೈ ಪುತ್ರಾನ್ ವಿಜಾನಾತಿ । ಸ್ಮರೇಣ ಪಶೂನ್ । ಸ್ಮರಮುಪಾಸ್ವ' ಇತಿ ॥

'ಆಕಾಶಾಭಿಮಾನಿನಿಯಾದ ಪಾರ್ವತಿಗಿಂತಲೂ ಸ್ಥಿರಸ್ಮರಣೆಗೆ ಅಭಿಮಾನಿಯಾಗಿರುವುದರಿಂದಲೂ, ಏಕಪ್ರಕಾರವಾಗಿ ಭಗವಂತನ ಆರಾಧನೆಯಲ್ಲಿ ನಿರತರಾದುದರಿಂದಲೂ, ಸ್ಮರನೆನಿಸಿರುವ ರುದ್ರದೇವರು ಉತ್ತಮರು. ಆದುದರಿಂದ ಅನೇಕ ಜನರು ಗುರುಗಳ ಬಳಿ ಕುಳಿತರೂ, ಅವರು ಸ್ಮರಣಶಕ್ತಿರಹಿತರಾದರೆ ಶ್ರವಣ, ಮನನ, ಜ್ಞಾನಗಳಿಂದ ವಿರಹಿತರೇ ಆಗುವರು. ಸ್ಮರಣಶಕ್ತಿ ಉಳ್ಳವರಾದರೆ ಶ್ರವಣ, ಮನನ, ಜ್ಞಾನಸಂಪನ್ನರಾಗುವರು. ಸ್ಥಿರಸ್ಮರಣೆಗೆ ಅಭಿಮಾನಿಯಾದ ರುದ್ರದೇವರ ಅನುಗ್ರಹದಿಂದಲೇ ಜನರು ತಮ್ಮ ಮಕ್ಕಳನ್ನೂ ಪಶುಗಳನ್ನೂ ಸದಾ ಗುರುತಿಸುವರು. ಸ್ಥಿರಸ್ಮರಣೆಗೆ ಅಭಿಮಾನಿಯಾದ ರುದ್ರದೇವರಲ್ಲಿ ಪರಬ್ರಹ್ಮನಿರುವನೆಂದು ಉಪಾಸಿಸು.

'ಸ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇ ಯಾವತ್ ಸ್ಮರಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇ। 'ಅಸ್ತಿ ಭಗವಃ ಸ್ಮರಾತ್ ಭೂಯಃ?' ಇತಿ। 'ಸ್ಮರಾದ್ವಾವ ಭೂಯೋಽಸ್ತಿ' ಇತಿ। 'ತನ್ಮೇ ಭಗವಾನ್ ಬ್ರವೀತು' ಇತಿ।

'ಯಾರು ಸ್ಥಿರಸ್ಮರಣಾಭಿಮಾನಿ ರುದ್ರದೇವರಲ್ಲಿ ಪರಬ್ರಹ್ಮನನ್ನು ಉಪಾಸಿಸುವನೋ ಅವನು ಆ ರುದ್ರದೇವರ ಲೋಕಗಳನ್ನು ಸೇರಿ ಅಲ್ಲಿ ಅವರ ವ್ಯಾಪ್ತಿಯು ಎಲ್ಲಿಯ ತನಕ ಇರುವುದೋ ಅಲ್ಲೆಲ್ಲಾ ಇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುವನು' ಎಂದು ಸನತ್ಕುಮಾರರು ಉಪದೇಶಿಸಿದಾಗ ನಾರದರು 'ಪೂಜ್ಯರೇ ! ಸ್ಥಿರಸ್ಮರಣಾಭಿಮಾನಿ ರುದ್ರದೇವರಿಗಿಂತಲೂ ಶ್ರೇಷ್ಠರಾದವರಿರುವರೇನು ?' ಎಂದು ಪ್ರಶ್ನಿಸಿದರು. ಆಗ

ಸನತ್ಕುಮಾರರು 'ಸ್ಥಿರಸ್ಮರಣಾಭಿಮಾನಿ ರುದ್ರದೇವರಿಗಿಂತಲೂ ಶ್ರೇಷ್ಠರಿರುವರು' ಎಂದುತ್ತರಿಸಲು, 'ಹಾಗಿದ್ದಲ್ಲಿ ಪೂಜ್ಯರಾದ ತಾವು ನನಗೆ ಅದನ್ನು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

ಆಶಾ ವಾವ ಸ್ಮರಾತ್ ಭೂಯಸೀ । ಆಶೇದ್ಧೋ ವೈ ಸ್ಮರೋಮಂತ್ರಾನಧೀತೇ । ಕರ್ಮಾಣಿ ಕುರುತೇ । ಪುತ್ರಾಂಶ್ಚ ಪಶೂಂಶ್ಚೇಚ್ಛತೇ। ಇಮಂ ಚ ಲೋಕಮಮುಂ ಚೇಚ್ಛತೇ । ಆಶಾಮುಪಾಸ್ವ ಇತಿ ।

ಸ್ಥಿರ ಸ್ಮರಣಾಭಿಮಾನಿ ರುದ್ರದೇವರಿಗಿಂತಲೂ ಪೂರ್ಣಸುಖಳಾಗಿರುವುದರಿಂದಲೂ, ಆಶೆಗೆ ಅಭಿಮಾನಿನಿಯಾಗಿರುವುದರಿಂದಲೂ ಆಶಾನಾಮಕಳಾದ ಸರಸ್ವತೀದೇವಿಯು ಶ್ರೇಷ್ಠಳು. ಜೀವನು ಅಧ್ಯಯನ ಕರ್ಮಾದಿಗಳನ್ನು ಮಾಡಬೇಕೆಂಬ ಪ್ರಬಲ ಆಶೆಯಿಂದ ಯುಕ್ತನಾದಾಗ ಸ್ಮರಣಶಕ್ತಿ ಹೊಂದಿ ಮಂತ್ರಗಳನ್ನು ಅಧ್ಯಯನ ಮಾಡುವನು. ಕರ್ಮಗಳನ್ನು ಆಚರಿಸುವನು, ಮಕ್ಕಳು ಹಾಗೂ ಪಶುಗಳನ್ನು ಇಚ್ಛಿಸುತ್ತಾನೆ. ಇಹ ಪರಲೋಕಗಳನ್ನು ಇಚ್ಛಿಸುತ್ತಾನೆ, ಆಶಾಭಿಮಾನಿನಿಯಾದ ಸರಸ್ವತೀದೇವಿಯಲ್ಲಿ ಪರಬ್ರಹ್ಮನಿರುವನೆಂದು ಆರಾಧಿಸು.

ಸ ಯ ಆಶಾಂ ಬ್ರಹ್ಮೇತ್ಯುಪಾಸ್ತೇ ಆಶಯಾಽಸ್ಯ ಸರ್ವೇ ಕಾಮಾಃ ಸಮೃದ್ಧ್ಯಂತಿ । ಅಮೋಘಾ ಹಾಸ್ಯಾಽಶಿಷೋ ಭವಂತಿ । ಯಾವದಾಶಾಯಾ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯ ಆಶಾಂ ಬ್ರಹ್ಮೇತ್ಯುಪಾಸ್ತೇ' । 'ತನ್ಮೇ ಭಗವಾನ್ ಬ್ರವೀತು' ಇತಿ ।

'ಯಾರು ಆಶಾಭಿಮಾನಿನಿಯಾದ ಸರಸ್ವತೀ ದೇವಿಯಲ್ಲಿ ಪರಬ್ರಹ್ಮನನ್ನು ಆರಾಧಿಸುವನೋ ಅವನು ಬಯಸಿದುದೆಲ್ಲಾ ಇಚ್ಛಾಮಾತ್ರದಿಂದ ಕೈಗೂಡುವುವು. ಅವನ ಆಸೆ ವ್ಯರ್ಥವಾಗುವುದಿಲ್ಲ. ಆಶಾಭಿಮಾನಿನಿ ಸರಸ್ವತೀದೇವಿಯ ವ್ಯಾಪ್ತಿಯು ಎಲ್ಲಿಯ ತನಕ ಇರುತ್ತದೋ ಅಲ್ಲೆಲ್ಲಾ ಅವನು ತನ್ನ ಇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುವನು' ಎಂದು ಸನತ್ಕುಮಾರರು ಉಪದೇಶಿಸಲು, ನಾರದರು 'ಪೂಜ್ಯರೇ ! ಆಶಾಭಿಮಾನಿನಿಯಾದ ಸರಸ್ವತೀದೇವಿಗಿಂತಲೂ ಉತ್ತಮರಿರುವರೇನು? ಎಂದು ಕೇಳಿದರು. ಆಗ ಸನತ್ಕುಮಾರರು 'ಆಶಾಭಿಮಾನಿನಿ ಸರಸ್ವತೀದೇವಿಗಿಂತಲೂ ಉತ್ತಮರಿರುವರು' ಎಂದು ಉತ್ತರಿಸಲು, ಹಾಗಿದ್ದಲ್ಲಿ 'ಪೂಜ್ಯರಾದ ತಾವು ನನಗದನ್ನು ವಿಶದಪಡಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

**ಪ್ರಾಣೋ ವಾ ಆಶಾಯಾ ಭೂಯಾನ್ । ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಂ ಸಮರ್ಪಿತಂ । ಪ್ರಾಣಃ ಪ್ರಾಣೇನ ಯಾತಿ । ಪ್ರಾಣಃ ಪ್ರಾಣಂ ದದಾತಿ । ಪ್ರಾಣಾಯ ದದಾತಿ । ಪ್ರಾಣೋ ಹ ಪಿತಾ । ಪ್ರಾಣೋ ಮಾತಾ । ಪ್ರಾಣೋ ಭ್ರಾತಾ । ಪ್ರಾಣಃ ಸ್ವಸಾ । ಪ್ರಾಣ ಆಚಾರ್ಯಃ । ಪ್ರಾಣೋ ಬ್ರಾಹ್ಮಣಃ ।**

ಪೂರ್ಣಾನಂದ ಸ್ವರೂಪರಾದ ಭಾರತೀ ಸರಸ್ವತೀ ದೇವಿಯರಿಗಿಂತ ಉತ್ತಮರಾದ್ದರಿಂದಲೂ ಪ್ರಾಣಾಭಿಮಾನಿಯಾಗಿರುವುದರಿಂದಲೂ, ಉತ್ತಮರಾದ ನಾಮಾದಿದೇವತೆಗಳೆಲ್ಲರಿಗೂ ನಾಯಕರಾದುದರಿಂದಲೂ ಪ್ರಾಣರೆನಿಸಿರುವ ಮುಖ್ಯಪ್ರಾಣ-ಬ್ರಹ್ಮದೇವರು ಆಶಾಳೆನಿಸಿರುವ ಭಾರತೀ-ಸರಸ್ವತೀ ದೇವಿಯರಿಗಿಂತಲೂ ಉತ್ತಮರು. ಹೇಗೆ ಅಚ್ಚುಮರಗಳು ರಥಚಕ್ರದ ಮಧ್ಯಭಾಗದಲ್ಲಿ ಸೇರಿಸಲ್ಪಟ್ಟು, ಅದನ್ನೇ ಆಶ್ರಯಿಸಿರುತ್ತವೋ ಹಾಗೆಯೇ ಆ ಮುಖ್ಯಪ್ರಾಣದೇವರಲ್ಲಿ ಸರ್ವ ಜಗತ್ತೂ ಆಶ್ರಯ ಪಡೆದಿದೆ. ಈ ಮುಖ್ಯಪ್ರಾಣದೇವರು ತನಗೂ ಪ್ರೇರಕನಾದ ಪ್ರಾಣನಾಮಕ ಪರಮಾತ್ಮನ ಪ್ರೇರಣೆಯಿಂದಲೇ ಪ್ರವೃತ್ತಿ ಮಾಡುವರು. ಪ್ರಾಣನಾಮಕ ಪರಮಾತ್ಮನನ್ನು ಶಿಷ್ಯರಿಗೆ ತೋರಿಸಿಕೊಡುವರು. ಪ್ರಾಣನಾಮಕ ಪರಮಾತ್ಮನಿಗೆ ಭಕ್ತರನ್ನು ಒಯ್ದುಕೊಡುವರು. ಆದ್ದರಿಂದ ಪರಮಾತ್ಮನು ಪ್ರಾಣದೇವರಿಗೆ ಸಕಲಾಭೀಷ್ಟನೀಡುವನು. ಲೋಕದಲ್ಲಿ ತಂದೆ ತಾಯಿ ಸಹೋದರ ಸಹೋದರಿ ಗುರು ಬ್ರಾಹ್ಮಣ ಇವರೆಲ್ಲರ ಬದುಕಿಗೆ ಕಾರಣರಾಗಿದ್ದು ಅವರಲ್ಲೆಲ್ಲ ಇರುವುದರಿಂದ ಈ ಮುಖ್ಯಪ್ರಾಣದೇವರೇ ಮುಖ್ಯವಾಗಿ ಲೋಕಕ್ಕೆ ತಂದೆ-ತಾಯಿ ಸಹೋದರ ಸಹೋದರಿ ಗುರು ಬ್ರಾಹ್ಮಣ ಎಲ್ಲ ಆಗಿರುವರು.

**ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಽಽಚಾರ್ಯಂ ವಾ ಬ್ರಾಹ್ಮಣಂ ವಾ ಕಿಂಚಿತ್ ಭೃಶಮಿವ ಪ್ರತ್ಯಾಹ 'ಧಿಕ್ ತ್ವಾಽಸ್ತು' ಇತ್ಯೇವೈನಮಾಹುಃ। 'ಪಿತೃಹಾ ವೈ ತ್ವಮಸಿ, ಮಾತೃಹಾ ವೈ ತ್ವಮಸಿ, ಭ್ರಾತೃಹಾ ವೈ ತ್ವಮಸಿ, ಸ್ವಸೃಹಾ ವೈ ತ್ವಮಸಿ, ಆಚಾರ್ಯಹಾ ವೈ ತ್ವಮಸಿ, ಬ್ರಾಹ್ಮಣಹಾ ವೈ ತ್ವಮಸಿ' ಇತಿ ॥**

'ಪ್ರಾಣದೇವರು ತಂದೆ, ತಾಯಿ ಸೋದರ ಮೊದಲಾದವರಿಗೆ ಜೀವನಪ್ರದರಾಗಿದ್ದು ಅವರಲ್ಲಿ ಇರುವಾಗ ಯಾರಾದನೊಬ್ಬನು ತನ್ನ ತಂದೆಯನ್ನೋ, ತಾಯಿಯನ್ನೋ, ಸಹೋದರರನ್ನೋ, ಸಹೋದರಿಯನ್ನೋ, ಆಚಾರ್ಯನನ್ನೋ, ಬ್ರಾಹ್ಮಣನನ್ನೋ ಸ್ವಲ್ಪ ಕಠಿಣವಾಗಿ ಅವಮಾನಿಸಿದರೆ ಸಾಕು, ಜನರು 'ನಿನಗೆ ಧಿಕ್ಕಾರ ! ನೀನು ತಂದೆಯನ್ನು ಕೊಂದವ,

ತಾಯಿಯನ್ನು ಕೊಂದವ, ಸಹೋದರನನ್ನು ಕೊಂದವ, ಸಹೋದರಿಯನ್ನು ಕೊಂದವ, ಆಚಾರ್ಯರನ್ನು ಕೊಂದವ, ಬ್ರಾಹ್ಮಣಹತ್ಯೆ ಮಾಡಿರುವವ' ಎನ್ನುವರು

ಅಥ ಯದ್ಯಪ್ಯೇನಾನುತ್ಕ್ರಾಂತ ಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್, ನೈವೈನಂ ಬ್ರೂಯುಃ ಪಿತೃಹಾऽಸೀತಿ, ನ ಮಾತೃಹಾऽಸೀತಿ, ನ ಭ್ರಾತೃಹಾऽಸೀತಿ, ನ ಸ್ವಸೃಹಾऽಸೀತಿ, ನಾಚಾರ್ಯಹಾऽಸೀತಿ, ನ ಬ್ರಾಹ್ಮಣಹಾऽಸೀತಿ ॥

ಆದರೆ ಪ್ರಾಣೋತ್ಕ್ರಮಣ ಹೊಂದಿದ ಬಳಿಕ ಈ ತಂದೆ ತಾಯಿ ಮೊದಲಾದವರನ್ನು ಶೂಲದಿಂದ ಸಂಪೂರ್ಣವಾಗಿ ತಿವಿದು ಸುಟ್ಟರೂ, ಅಂತಹವರನ್ನು ಜನರು ಪಿತೃಘಾತುಕನೆಂದಾಗಲೀ, ಮಾತೃಘಾತಿಯೆಂದಾಗಲೀ, ಸಹೋದರ ಹಂತಕನೆಂದಾಗಲೀ, ಸಹೋದರಿಯನ್ನು ಕೊಂದವನೆಂದಾಗಲೀ, ಆಚಾರ್ಯರನ್ನು ಹಿಂಸಿಸಿದವನೆಂದಾಗಲೀ, ಬ್ರಹ್ಮಹತ್ಯೆಯನ್ನು ಗೈದವನೆಂದಾಗಲೀ ಜರಿಯುವುದಿಲ್ಲ. ಇದರಿಂದ ತಂದೆ ತಾಯಿ ಮೊದಲಾದವರಲ್ಲಿರುವ ಮಹತ್ವ ಪ್ರಾಣದೇವರ ಸನ್ನಿಧಾನದಿಂದಲೇ ಎಂಬುದು ಸ್ಫುಟವಾಗುತ್ತದೆ.

ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ । ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನತಿವಾದೀ ಭವತಿ । ತಂ ಚೇದ್ಬ್ರೂಯುರತಿವಾದ್ಯಸೀತಿ, ಅತಿವಾದ್ಯಸ್ಮೀತ್ಯೇವ ಬ್ರೂಯಾತ್ । ನಾಪಹ್ನುವೀತ ॥

ಈ ತಂದೆ ತಾಯಿ ಮೊದಲಾದವರೆಲ್ಲ ಪ್ರಾಣದೇವರ ಅಧೀನರು. ಯಾರು ಹೀಗೆ ಮುಖ್ಯಪ್ರಾಣದೇವರ ಮಹಿಮೆಯನ್ನು ಕೇಳಿ, ಮನನ ಮಾಡಿ ಸಾಕ್ಷಾತ್ಕರಿಸಿಕೊಳ್ಳುವನೋ ಅವನು ಅತ್ಯುತ್ಕೃಷ್ಟತತ್ತ್ವಬೋಧಕನೆನಿಸುತ್ತಾನೆ. ಅವನನ್ನು ಯಾರಾದರೂ 'ನೀನು ಅತ್ಯುತ್ಕೃಷ್ಟ-ತತ್ತ್ವಬೋಧಕನಾಗಿರುವಿ' ಎಂದು ಹೇಳಿದರೆ ಆಗ ಅವನು 'ನಾನು ಅತ್ಯುತ್ಕೃಷ್ಟತತ್ತ್ವಬೋಧಕನು ಹೌದು' ಎಂದೇ ಹೇಳಬೇಕು. ಪ್ರಾಣತತ್ತ್ವಬೋಧಕನಿಗೆ ಭಯವಿಲ್ಲದಿರುವುದರಿಂದ ನಿರಾಕರಣೆ ಕೂಡದು.

ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ । 'ಸೋऽಹಂ ಭಗವಃ ಸತ್ಯೇನಾತಿವದಾನಿ' ಇತಿ । 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ' ಇತಿ । 'ಸತ್ಯಂ ಭಗವೋ ವಿಜಿಜ್ಞಾಸ' ಇತಿ ।

'ಪೂಜ್ಯರೇ ! ಪ್ರಾಣದೇವರಿಗಿಂತಲೂ ಉತ್ತಮರಾದವರಿರುವರೇನು ? ಎಂದು ನಾರದರು ಪ್ರಶ್ನಿಸಲು, ಸನತ್ಕುಮಾರರು 'ಪ್ರಾಣದೇವರಿಗಿಂತಲೂ ಉತ್ತಮರಿರುವರು'

ಎಂದುತ್ತರಿಸಿದರು. 'ಅದನ್ನು ನನಗೆ ತಿಳಿಯಹೇಳಿ' ಎಂದು ನಾರದರು ಪ್ರಾರ್ಥಿಸಲು ಸನತ್ಕುಮಾರರು, 'ಸತ್ಯನಾಮಕ ಪರಮಾತ್ಮನು ಪ್ರಾಣನಿಗಿಂತ ಉತ್ತಮನು' ಎಂದರು. 'ಯಾರು ನಿರ್ದೋಷನೂ ಸರ್ವನಿಯಾಮಕನೂ ಆಗಿರುವುದರಿಂದ ಸತ್ಯನೆನಿಸಿರುವ ಪರಮಾತ್ಮನನ್ನು ಸರ್ವೋತ್ತಮನೆಂದು ಉಪದೇಶಿಸುವನೋ, ಅವನೇ ಮುಖ್ಯಪ್ರಾಣಬೋಧಕನಿಗಿಂತಲೂ ಅತ್ಯುತ್ಕೃಷ್ಟತತ್ತ್ವಬೋಧಕನೆನಿಸಿಕೊಳ್ಳುವನು' 'ಪೂಜ್ಯರಾದ ಸನತ್ಕುಮಾರರೇ ! ನಾನು, ಸತ್ಯನೆನಿಸಿರುವ ಸರ್ವೋತ್ಕೃಷ್ಟನಾದ ಪರಬ್ರಹ್ಮನನ್ನು ಉಪದೇಶಿಸಲು ಶಕ್ತನಾಗುವಂತೆ ಅನುಗ್ರಹಿಸಿ' ಎಂದು ನಾರದರು ಬೇಡಿಕೊಂಡಾಗ ಸನತ್ಕುಮಾರರು ಹೇಳಿದರು. 'ಅದಕ್ಕೆ ಸತ್ಯನೆನಿಸಿರುವ ಪರಬ್ರಹ್ಮನನ್ನೇ ವಿಶೇಷವಾಗಿ ವಿಚಾರ ಮಾಡಬೇಕು.' ಆಗ ನಾರದರು 'ಪೂಜ್ಯರೇ ! ಸತ್ಯನಾಮಕ ಪರಮಾತ್ಮನ ಗುಣವನ್ನರಿಯಲು ಅಪೇಕ್ಷಿಸುವೆನು. ನನಗೆ ಉಪದೇಶಿಸಿರಿ' ಎಂದು ಕೇಳಿಕೊಂಡರು.

**'ಯದಾ ವೈ ವಿಜಾನಾತಿ ಅಥ ಸತ್ಯಂ ವದತಿ । ನಾವಿಜಾನನ್ ಸತ್ಯಂ ವದತಿ । ವಿಜಾನನ್ನೇವ ಸತ್ಯಂ ವದತಿ । ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಂ' ಇತಿ । 'ವಿಜ್ಞಾನಂ ಭಗವೋ ವಿಜಿಜ್ಞಾಸ' ಇತಿ ।**

'ಜನರು ಯಾವಾಗ ಸರಿಯಾಗಿ ತಿಳಿಯುವರೋ ಆಗಲೇ ಸತ್ಯವನ್ನು ನುಡಿಯುತ್ತಾರೆ, ಸರಿಯಾದ ಅರಿವಿಲ್ಲದವರು ಸತ್ಯವನ್ನು ನುಡಿಯಲಾರರು. ಆದ್ದರಿಂದ ಸರಿಯಾದ ಅರಿವು ಇರುವವರೇ ಸತ್ಯವನ್ನು ನುಡಿಯುತ್ತಾರೆ. ಹೀಗೆ ಸತ್ಯಕ್ಕೂ ವಿಜ್ಞಾನಕ್ಕೂ ಕಾರ್ಯಕಾರಣಭಾವ ಸಂಬಂಧವಿದೆ. ಆದುದರಿಂದ ಸತ್ಯನಾಮಕ ಪರಮಾತ್ಮನನ್ನು ಅರಿಯಬಯಸುವವನು, ಅವನು ವಿಜ್ಞಾನವೆಂಬ ಗುಣವನ್ನು ಅರಿತುಕೊಳ್ಳಬೇಕು' ಎಂದು ಸನತ್ಕುಮಾರರು ಉತ್ತರಿಸಲು, ನಾರದರು 'ಪೂಜ್ಯರೇ ! ಪರಮಾತ್ಮನ ವಿಜ್ಞಾನವೆಂಬ ಗುಣವನ್ನು ಅರಿಯಲು ಅಪೇಕ್ಷಿಸುವೆನು. ಅದನ್ನು ನನಗೆ ತಿಳಿಸಿಕೊಡಿರಿ' ಎಂದು ಪ್ರಾರ್ಥಿಸಿದರು.

**ಯದಾ ವೈ ಮನುತೇಽಥ ವಿಜಾನಾತಿ । ನಾಮತ್ವಾ ವಿಜಾನಾತಿ । ಮತ್ವೈವ ವಿಜಾನಾತಿ । ಮತಿಸ್ತ್ವೇವ ವಿಜಿಜ್ಞಾಸಿತವ್ಯಾ ಇತಿ । ಮತಿಂ ಭಗವೋ ವಿಜಿಜ್ಞಾಸ ಇತಿ ।**

'ಜನರು ಯಾವಾಗ ಸಾಮಾನ್ಯಜ್ಞಾನ ಸಂಪಾದಿಸುವರೋ ಆಗಲೇ ವಿಶೇಷ ಜ್ಞಾನವನ್ನೂ ಸಂಪಾದಿಸಿಕೊಳ್ಳುವರು. ಸಾಮಾನ್ಯಜ್ಞಾನವನ್ನು ಸಂಪಾದಿಸದೆ ವಿಶೇಷಜ್ಞಾನವನ್ನು ಸಂಪಾದಿಸಿಕೊಳ್ಳಲಾರರು. ಆದ್ದರಿಂದ ಸಾಮಾನ್ಯಜ್ಞಾನವನ್ನು ಸಂಪಾದಿಸಿಯೇ ವಿಶೇಷಜ್ಞಾನ

ಸಂಪಾದಿಸುವರು. ಹೀಗೆ ಸಾಮಾನ್ಯಜ್ಞಾನ ಹಾಗೂ ವಿಶೇಷಜ್ಞಾನಗಳಿಗೆ ಕಾರ್ಯಕಾರಣ-ಭಾವವಿರುವುದರಿಂದ ಪರಮಾತ್ಮನ ವಿಜ್ಞಾನ ರೂಪಗುಣವನ್ನು ಅರಿಯ ಬಯಸುವವರು 'ಮನನ' ಅಂದರೆ ಸಾಮಾನ್ಯಜ್ಞಾನ ರೂಪಗುಣವನ್ನು ಅರಿತುಕೊಳ್ಳಬೇಕು' ಎಂದು ಸನತ್ಕುಮಾರರು ಹೇಳಿದಾಗ, 'ಹಾಗಿದ್ದಲ್ಲಿ ಪೂಜ್ಯರೇ ! ಪರಬ್ರಹ್ಮನ ಮನನರೂಪ ಗುಣವನ್ನು ತಿಳಿಯಲಪೇಕ್ಷಿಸುವೆನು. ಪೂಜ್ಯರಾದ ತಾವು ಅದನ್ನು ಉಪದೇಶಿಸಿರಿ' ಎಂದು ನಾರದರು ಪ್ರಾರ್ಥಿಸಿದರು.

ಯದಾ ವೈ ಶ್ರದ್ದಧಾತ್ಯಥ ಮನುತೇ । ನಾಶ್ರದ್ದಧತ್ ಮನುತೇ । ಶ್ರದ್ದಧದೇವ ಮನುತೇ । ಶ್ರದ್ಧಾತ್ವೇವ ವಿಜಿಜ್ಞಾಸಿತವ್ಯಾ ಇತಿ । ಶ್ರದ್ಧಾಂ ಭಗವೋ ವಿಜಿಜ್ಞಾಸ ಇತಿ ।

'ಜನರು ಯಾವಾಗ ಶ್ರದ್ಧಾಯುಕ್ತರಾಗುವರೋ ಆಗ ಸಾಮಾನ್ಯ ಜ್ಞಾನರೂಪವಾದ ಮನನವನ್ನು ಸಂಪಾದಿಸಿಕೊಳ್ಳುವರು. ಶ್ರದ್ಧಾಯುಕ್ತರೆನಿಸದವರು ಇಂತಹ ಸಾಮಾನ್ಯಜ್ಞಾನವನ್ನು ಪಡೆಯಲಾರರು. ಆದ್ದರಿಂದ ಶ್ರದ್ಧಾಯುಕ್ತರೇ ಮನನ ಉಳ್ಳವರಾಗುವರು. ಹೀಗೆ ಶ್ರದ್ಧೆ ಹಾಗೂ ಮನನಗಳಿಗೆ ಕಾರ್ಯಕಾರಣಭಾವ ಸಂಬಂಧವಿರುವುದರಿಂದ, ಪರಮಾತ್ಮನ ಮನನರೂಪ ಗುಣವನ್ನು ಅರಿಯಬಯಸುವವನು ಅವನ ಶ್ರದ್ಧಾಗುಣವನ್ನು ತಿಳಿಯಬೇಕು' ಎಂದು ಸನತ್ಕುಮಾರರು ಉಪದೇಶಿಸಿದಾಗ, ನಾರದರು 'ಪೂಜ್ಯರೇ ! ಪರಬ್ರಹ್ಮನ ಶ್ರದ್ಧಾರೂಪಗುಣವನ್ನರಿಯಲು ಅಪೇಕ್ಷಿಸುವೆನು, ಉಪದೇಶಿಸಿರಿ' ಎಂದು ಪ್ರಾರ್ಥಿಸಿದರು.

ಯದಾ ವೈ ನಿಸ್ತಿಷ್ಠತ್ಯಥ ಶ್ರದ್ದಧಾತಿ । ನಾನಿಸ್ತಿಷ್ಠನ್ ಶ್ರದ್ದಧಾತಿ । ನಿಸ್ತಿಷ್ಠನ್ನೇವ ಶ್ರದ್ದಧಾತಿ । ನಿಷ್ಠಾತ್ವೇವ ವಿಜಿಜ್ಞಾಸಿತವ್ಯಾ' ಇತಿ । 'ನಿಷ್ಠಾಂ ಭಗವೋ ವಿಜಿಜ್ಞಾಸ' ಇತಿ ।

'ಜನರು ಯಾವಾಗ ಸ್ಥಿರಚಿತ್ತವುಳ್ಳವರಾಗುವರೋ ಆಗಲೇ ಶ್ರದ್ಧಾಯುಕ್ತರಾಗುವರು. ಚಿತ್ತಸ್ಥೈರ್ಯವನ್ನು ಸಂಪಾದಿಸದೆ ಶ್ರದ್ಧಾಯುಕ್ತರಾಗಲಾರರು. ಆದ್ದರಿಂದ ಚಿತ್ತಸ್ಥೈರ್ಯವಿದ್ದರೇನೇ ಶ್ರದ್ಧಾಯುಕ್ತರೆನಿಸುವರು. ಹೀಗೆ ಚಿತ್ತಸ್ಥೈರ್ಯ ಹಾಗೂ ಶ್ರದ್ಧೆಗಳಿಗೆ ಕಾರ್ಯಕಾರಣಭಾವ ಸಂಬಂಧವಿರುವುದರಿಂದ ಪರಮಾತ್ಮನ ಶ್ರದ್ಧಾರೂಪಗುಣವನ್ನು ಅರಿಯ ಬಯಸುವವನು ಅವನು ಚಿತ್ತಸ್ಥೈರ್ಯಗುಣವನ್ನು ತಿಳಿದುಕೊಳ್ಳಬೇಕು' ಎಂದು ಸನತ್ಕುಮಾರರು ಉಪದೇಶಿಸಲು, ನಾರದರು 'ಪೂಜ್ಯರೇ ! ಪರಮಾತ್ಮನ ಚಿತ್ತಸ್ಥೈರ್ಯಗುಣವನ್ನು ಉಪದೇಶಿಸಿ ಎಂದು ಬೇಡಿಕೊಂಡರು.

'ಯದಾ ವೈ ಕರೋತ್ಯಥ ನಿಸ್ತಿಷ್ಠತಿ। ನಾಕೃತ್ವಾನಿಸ್ತಿಷ್ಠತಿ। ಕೃತ್ವೈವ ನಿಸ್ತಿಷ್ಠತಿ। ಕೃತಿಸ್ತ್ವೇವ ವಿಜಿಜ್ಞಾಸಿತವ್ಯಾ' ಇತಿ। 'ಕೃತಿಂ ಭಗವೋ ವಿಜಿಜ್ಞಾಸ' ಇತಿ।

'ಜನರು ತಮ್ಮ ಕರ್ತವ್ಯಕರ್ಮವನ್ನು ನಿರ್ವಹಿಸಿದರೇನೇ ಸ್ಥಿರಚಿತ್ತರೆನಿಸುವರು. ಕರ್ತವ್ಯವನ್ನು ನಿರ್ವಹಿಸದೆ ಸ್ಥಿರಚಿತ್ತರೆನಿಸಲಾರರು. ಆದ್ದರಿಂದ ಕರ್ತವ್ಯವನ್ನು ನಿರ್ವಹಿಸಿಯೇ ಸ್ಥಿರಚಿತ್ತರೆನಿಸುವರು. ಹೀಗೆ ಕೃತಿ ಹಾಗೂ ಚಿತ್ತಸ್ಥೈರ್ಯಗಳಿಗೆ ಕಾರ್ಯಕಾರಣಭಾವ ಸಂಬಂಧವಿರುವುದರಿಂದ ಪರಮಾತ್ಮನಲ್ಲಿರುವ ಚಿತ್ತಸ್ಥೈರ್ಯಗುಣವನ್ನು ಅರಿಯಲು ಅವನ ಸೃಷ್ಟಿಕರ್ತೃತ್ವರೂಪವಾದ ಕೃತಿ ಎಂಬ ಗುಣವನ್ನು ತಿಳಿದುಕೊಳ್ಳಬೇಕು' ಎಂದು ಸನತ್ಕುಮಾರರು ಉಪದೇಶಿಸಿದಾಗ, ನಾರದರು 'ಪೂಜ್ಯರೇ ! ಪರಮಾತ್ಮನ ಕೃತಿರೂಪ ಗುಣವನ್ನರಿಯಲು ಅಪೇಕ್ಷಿಸುವೆನು. ಅದನ್ನು ಉಪದೇಶಿಸಿರಿ' ಎಂದು ಪ್ರಾರ್ಥಿಸಿದರು.

ಯದಾ ವೈ ಸುಖಂ ಲಭತೇಽಥ ಕರೋತಿ। ನಾಸುಖಂ ಲಬ್ಧ್ವಾ ಕರೋತಿ। ಸುಖಮೇವ ಲಬ್ಧ್ವಾ ಕರೋತಿ। ಸುಖಂ ತ್ವೇವ ವಿಜಿಜ್ಞಾಸಿತವ್ಯಂ ಇತಿ। ಸುಖಂ ಭಗವೋ ವಿಜಿಜ್ಞಾಸ ಇತಿ।

'ಜನರು ಯಾವಾಗ ಸುಖಿಗಳಾಗುತ್ತಾರೋ ಆಗಲೇ ಕರ್ತವ್ಯವನ್ನು ನಿರ್ವಹಿಸುತ್ತಾರೆ. ದುಃಖಿಗಳಾಗಿದ್ದಾರೆ ಕರ್ತವ್ಯವನ್ನು ನಿರ್ವಹಿಸಲಾರರು. ಹೀಗೆ ಸುಖ ಹಾಗೂ ಕೃತಿಗಳಿಗೆ ಕಾರ್ಯಕಾರಣಭಾವ ಸಂಬಂಧವಿರುವುದರಿಂದ ಪರಮಾತ್ಮನ ಕೃತಿರೂಪಗುಣವನ್ನರಿಯ ಬಯಸುವವನು ಅವನ ಸುಖರೂಪ ಗುಣವನ್ನು ಅರಿಯಬೇಕು' ಎಂದು ಸನತ್ಕುಮಾರರು ಉಪದೇಶಿಸಲು ನಾರದರು 'ಪೂಜ್ಯರೇ ! ಪರಬ್ರಹ್ಮನ ಸುಖರೂಪ ಗುಣವನ್ನರಿಯಲು ಅಪೇಕ್ಷಿಸುವೆನು, ಉಪದೇಶಿಸಿರಿ' ಎಂದು ಬಿನ್ನವಿಸಿಕೊಂಡರು.

'ಯೋ ವೈ ಭೂಮಾ ತತ್ ಸುಖಮ್ । ನಾಲ್ಪೇ ಸುಖಮಸ್ತಿ । ಭೂಮೈವ ಸುಖಮ್ । ಭೂಮಾ ತ್ವೇವ ವಿಜಿಜ್ಞಾಸಿತವ್ಯ' ಇತಿ । 'ಭೂಮಾನಂ ಭಗವೋ ವಿಜಿಜ್ಞಾಸ' ಇತಿ।

'ಯಾರು ಪೂರ್ಣಗುಣಗಳುಳ್ಳವನಾಗಿರುವನೋ ಅವನೇ ಪೂರ್ಣಸುಖನು. ಅಲ್ಪರಾದ ಮುಕ್ತರಲ್ಲಿಯೂ ಪೂರ್ಣಸುಖವಿರಲಾರದು. ಆದ್ದರಿಂದ ಪೂರ್ಣಗುಣನೇ ಪೂರ್ಣಸುಖನು. ಹೀಗೆ ಪರಮಾತ್ಮನ ಈ ಸುಖರೂಪಗುಣವನ್ನು ಅರಿಯಬಯಸುವವನು ಅವನ ಗುಣಪರಿಪೂರ್ಣತೆಯನ್ನು ತಿಳಿದುಕೊಳ್ಳಬೇಕು' ಎಂದು ಸನತ್ಕುಮಾರರು ಉಪದೇಶಿಸಿದಾಗ,

ನಾರದರು 'ಪೂಜ್ಯರೇ ! ಪರಮಾತ್ಮನ ಗುಣಪರಿಪೂರ್ಣತೆಯನ್ನು ತಿಳಿಯಲಪೇಕ್ಷಿಸುತ್ತೇನೆ. ಅದನ್ನು ನನಗೆ ಉಪದೇಶಿಸಿರಿ' ಎಂದು ಪ್ರಾರ್ಥಿಸಿದರು.

**'ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯತ್ ವಿಜಾನಾತಿ ಸ ಭೂಮಾ । ಅಥ ಯತ್ರಾನ್ಯತ್ ಪಶ್ಯತ್ಯನ್ಯತ್ ಶೃಣೋತ್ಯನ್ಯತ್ ವಿಜಾನಾತಿ ತದಲ್ಪಮ್ । ಯೋ ವೈ ಭೂಮಾ ತದಮೃತಮ್ । ಅಥ ಯದಲ್ಪಂ ತನ್ಮರ್ತ್ಯಮ್' । 'ಸ ಭಗವಃ ಕಸ್ಮಿನ್ ಪ್ರತಿಷ್ಠಿತ' ಇತಿ । 'ಸ್ವೇ ಮಹಿಮ್ನಿ, ಯದಿ ವಾ ನ ಮಹಿಮ್ನಿ' ಇತಿ ॥**

'ಯಾರ ಅಧೀನವಲ್ಲದೆ ಸ್ವತಂತ್ರವಾಗಿ ಬೇರೆ ಯಾವುದೂ ದರ್ಶನ ಶ್ರವಣ ವಿಶೇಷಜ್ಞಾನಗಳಿಗೆ ಗೋಚರಿಸದೋ ಅವನೇ ಪರಿಪೂರ್ಣಗುಣಸ್ವರೂಪನಾದ ಪರಮಾತ್ಮ ಯಾರ ಅಧೀನವಲ್ಲದೆ ಸ್ವತಂತ್ರವಾಗಿ ಬೇರೆ ಪದಾರ್ಥವು ದರ್ಶನ ಶ್ರವಣ ವಿಶೇಷಜ್ಞಾನಗಳಿಗೆ ಗೋಚರವಾಗುತ್ತದೋ ಅವರು ಅಲ್ಪಗುಣವುಳ್ಳವರು. ಪೂರ್ಣಗುಣ ಸ್ವರೂಪನಾದ ಪರಬ್ರಹ್ಮನು ನಿತ್ಯಮುಕ್ತನು. ಮುಕ್ತರಾದ ಅಲ್ಪಗುಣರಾದ ಬ್ರಹ್ಮಾದಿಗಳು ಮೊದಲಿಗೆ ಮರಣವುಳ್ಳವರೇ ಆಗಿರುತ್ತಾರೆ' ಎಂದು ಸನತ್ಕುಮಾರರು ಪರಿಪೂರ್ಣಗುಣಸ್ವರೂಪನಾದ ಪರಮಾತ್ಮನ ಮಹಿಮೆಯನ್ನು ಉಪದೇಶಿಸಿದಾಗ, ನಾರದರು 'ಪೂಜ್ಯರೇ ! ಆ ಪರಮಾತ್ಮನು ಯಾವುದನ್ನು ಆಶ್ರಯಿಸಿಕೊಂಡಿರುವನು?' ಎಂದು ಪ್ರಶ್ನಿಸಿದರು. ಆಗ ಸನತ್ಕುಮಾರರು ಅವನು ತನ್ನ ಸ್ವರೂಪಭೂತವಾದ ಸಂಪತ್ತನ್ನು ಆಶ್ರಯಿಸಿಕೊಂಡಿರುವನು ಎನ್ನಬಹುದು ಅಥವಾ ಬೇರೆ ಸಂಪತ್ತನ್ನು ಆಶ್ರಯಿಸಿಕೊಂಡಿಲ್ಲ ಎಂದೂ ಎನ್ನಬಹುದು' ಎಂದು ಉತ್ತರಿಸಿದರು.

**ಗೋಅಶ್ವಮಿಹ ಮಹಿಮೇತ್ಯಾಚಕ್ಷತೇ । ಹಸ್ತಿಹಿರಣ್ಯಂ ದಾಸ ಭಾರ್ಯಂ ಕ್ಷೇತ್ರಾಣ್ಯಾಯತನಾನಿ ಇತಿ । 'ನಾಹಮೇವಂ ಬ್ರವೀಮಿ' ಇತಿ ಹೋವಾಚ । 'ಅನ್ಯೋ ಹ್ಯನ್ಯಸ್ಮಿನ್ ಪ್ರತಿಷ್ಠಿತ' ಇತಿ ।**

'ಹಸು ಕುದುರೆ ಆನೆ ಸುವರ್ಣ ಸೇವಕರು ಹೆಂಡತಿ ಭೂಮಿ ಮನೆ ಇವೆಲ್ಲವನ್ನೂ ಲೋಕದಲ್ಲಿ ಸಂಪತ್ತು ಎಂದೆನ್ನುವರು. ಆದರೆ ಇಂತಹ ಅಲ್ಪವಾದ ಸಂಪತ್ತನ್ನು ಪೂರ್ಣಗುಣನಾದ ಪರಮಾತ್ಮನು ಆಶ್ರಯಿಸಿರುವನೆಂದು ನಾನು ಹೇಳುವುದಿಲ್ಲ. ಪರಮಾತ್ಮನನ್ನು ಹೊರತು ಬೇರೆ ಎಲ್ಲರೂ ತಮ್ಮ ಸ್ವರೂಪಭೂತವಲ್ಲದ ಅಲ್ಪವಾದ ಸಂಪತ್ತನ್ನೇ ಆಶ್ರಯಿಸಿರುತ್ತಾರೆ ಪರಮಾತ್ಮನು ಹಾಗೆ ಮಾಡುವುದಿಲ್ಲ' ಎಂದು ಹೇಳಿದರು.

**'ಸ ಏವಾಧಸ್ತಾತ್ । ಸ ಉಪರಿಷ್ಟಾತ್ । ಸ ಪಶ್ಚಾತ್ । ಸ ಪುರಸ್ತಾತ್ । ಸ ದಕ್ಷಿಣತಃ । ಸ ಉತ್ತರತಃ । ಸ ಏವೇದಂ ಸರ್ವಂ' ಇತಿ ।**

ಈ ಗುಣಪೂರ್ಣನಾದ ನಾರಾಯಣನಾಮಕ ಪರಮಾತ್ಮನ ಲಕ್ಷಣ ಇದು. ಅವನೆ ಕೆಳಗೆ ಮೇಲೆ ಹಿಂದೆ ಮುಂದೆ ಎಡಗಡೆ ಬಲಗಡೆ ಹೀಗೆ ಎಲ್ಲೆಡೆ ವ್ಯಾಪಿಸಿಕೊಂಡಿರುವನು. ಎಲ್ಲವೂ ಅವನ ಅಧೀನ. ಅವನೇ ಸ್ವತಂತ್ರ.

**'ಅಥಾತೋऽಹಂಕಾರಾದೇಶ ಏವ । ಅಹಮೇವಾಧಸ್ತಾತ್ । ಅಹಮುಪರಿಷ್ಟಾತ್। ಅಹಂ ಪಶ್ಚಾತ್ । ಅಹಂ ಪುರಸ್ತಾತ್ । ಅಹಂ ದಕ್ಷಿಣತಃ । ಅಹಮುತ್ತರತಃ । ಅಹಮೇವೇದಂ ಸರ್ವಂ' ಇತಿ ।**

ಹೀಗೆ ಗುಣಪೂರ್ಣನಾದ ಪರಮಾತ್ಮನ ಉಪದೇಶವಾದ ಮೇಲೆ ಅವನ ಅನುಗ್ರಹದಿಂದ, ಜೀವಾಂತರ್ಗತ ಅಹಂಕನಾಮಕ ಅನಿರುದ್ಧನ ಉಪದೇಶವನ್ನೂ ಮಾಡುತ್ತೇವೆ. ಈ ಅನಿರುದ್ಧನು ಯಾರೆಂದರೆ ಗುಣಪೂರ್ಣನಾರಾಯಣನ ಲಕ್ಷಣವೆ ಅವನ ಲಕ್ಷಣ. ಇಬ್ಬರೂ ಒಂದೇ. ಅವನೆ ಕೆಳಗೆ ಮೇಲೆ ಹಿಂದೆ ಮುಂದೆ ಎಡಗಡೆ ಬಲಗಡೆ ಹೀಗೆ ಎಲ್ಲೆಡೆ ವ್ಯಾಪಿಸಿಕೊಂಡಿರುವನು. ಎಲ್ಲವೂ ಅವನ ಅಧೀನವೇ ಅವನೇ ಸ್ವತಂತ್ರ.

**ಅಥಾತ ಆತ್ಮಾದೇಶ ಏವ। ಆತ್ಮೈವಾಧಸ್ತಾತ್। ಆತ್ಮೋಪರಿಷ್ಟಾತ್। ಆತ್ಮಾ ಪಶ್ಚಾತ್। ಆತ್ಮಾ ಪುರಸ್ತಾತ್। ಆತ್ಮಾ ದಕ್ಷಿಣತಃ। ಆತ್ಮೋತ್ತರತಃ। ಆತ್ಮೈವೇದಂ ಸರ್ವಂ ಇತಿ।**

ಹೀಗೆ ಅಹಂನಾಮಕನಾದ ಜೀವಾಂತರ್ಗತ ಅನಿರುದ್ಧನ ಉಪದೇಶದ ಅನಂತರ ಅವನ ಅನುಗ್ರಹದಿಂದ. ಸರ್ವತ್ರವ್ಯಾಪ್ತನಾದುದರಿಂದ ಆತ್ಮಾ ಎಂಬ ಹೆಸರುಳ್ಳ ವಾಸುದೇವನ ಉಪದೇಶವನ್ನೂ ಮಾಡುತ್ತೇವೆ. ಈ ವಾಸುದೇವನು ಯಾರೆಂದರೆ ಗುಣಪೂರ್ಣ-ನಾರಾಯಣನ ಲಕ್ಷಣವೆ ಅವನ ಲಕ್ಷಣ. ಇಬ್ಬರೂ ಒಂದೇ. ಅವನೇ ಕೆಳಗೆ ಮೇಲೆ ಹಿಂದೆ ಮುಂದೆ ಎಡಗಡೆ ಬಲಗಡೆಗೆ ಹೀಗೆ ಎಲ್ಲೆಡೆ ವ್ಯಾಪಿಸಿಕೊಂಡಿರುವನು. ಎಲ್ಲವೂ ಅವನ ಅಧೀನ. ಅವನೇ ಸ್ವತಂತ್ರ.

**ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ । ಸ ಸ್ವರಾಟ್ ಭವತಿ । ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ। ಅಥಯೇऽನ್ಯಥಾತೋ ವಿದುರನ್ಯರಾಜಾನಸ್ತೇ ಕ್ಷಯ್ಯಲೋಕಾ ಭವಂತಿ। ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ' ಇತಿ।**

ನಾಮಾದಿ ಪ್ರಾಣಪರ್ಯಂತ ಸಕಲದೇವತೆಗಳಿಗಿಂತ ಉತ್ತಮನೆಂದೂ, ಸರ್ವಗುಣಪೂರ್ಣ, ಸರ್ವವ್ಯಾಪ್ತನೆಂದೂ ಈ ಪರಮಾತ್ಮನನ್ನು ಕೇಳಿ, ತಿಳಿದು, ಧ್ಯಾನಮಾಡಿ

ಸಾಕ್ಷಾತ್ಕರಿಸಿಕೊಳ್ಳುವ ಉಪಾಸಕನು, ಮುಖ್ಯವಾಗಿ ಚತುರ್ಮುಖ ಬ್ರಹ್ಮನು, ಪರಮಾತ್ಮನ ದರ್ಶನದಿಂದಲೇ ಪೂರ್ಣತೃಪ್ತನಾಗಿ, ಪರಮಾತ್ಮನೊಡನೆ ವಿಹರಿಸುತ್ತ, ಪರಮಾತ್ಮನೊಡನೆ ತಾನು ಸ್ತ್ರೀರೂಪದಿಂದ ರಮಿಸುತ್ತ, ಪರಮಾತ್ಮನ ಅನುಗ್ರಹದಿಂದ ಅಭಿವ್ಯಕ್ತವಾದ ಸ್ವರೂಪಾನಂದ ಭೋಗಿಸುತ್ತ, ಪ್ರತ್ಯಕ್ಷವಾಗಿ ಪರಮಾತ್ಮನ ಆಜ್ಞೆಗೆ ತಲೆಬಾಗುತ್ತಾನೆ. ಎಲ್ಲಾ ಲೋಕಗಳಲ್ಲಿ ಸ್ವೇಚ್ಛಾನುಸಾರವಾಗಿ ಸಂಚರಿಸಲು ಶಕ್ತನಾಗುತ್ತಾನೆ. ಇದಕ್ಕೆ ವಿರುದ್ಧವಾದ ರೀತಿಯಲ್ಲಿ ಯಾರು ಪರಮಾತ್ಮನನ್ನು ತಿಳಿಯುವನೋ ಅವನು ತನಗಿಂತ ಹೀನರಾದವರ ಅಧೀನನಾಗಿರುತ್ತಾನೆ. ಅವನಿಗೆ ಕೇವಲ ನಶ್ವರಲೋಕ ಪ್ರಾಪ್ತಿಯಾಗುತ್ತದೆ. ಅವನಿಗೆ ಸ್ವೇಚ್ಛಾನುಸಾರವಾಗಿ ಎಲ್ಲ ಲೋಕಗಳಲ್ಲಿ ಸಂಚರಿಸುವ ಸಾಮರ್ಥ್ಯವು ಸಿದ್ಧಿಸದು.

ತಸ್ಯ ಹ ವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿಜಾನತ ಆತ್ಮತಃ ಪ್ರಾಣತಃ । ಆತ್ಮತ ಆಶಾ । ಆತ್ಮತಃ ಸ್ಮರಃ । ಆತ್ಮತಃ ಆಕಾಶಃ । ಆತ್ಮತಃ ತೇಜಃ । ಆತ್ಮತಃ ಆಪಃ । ಆತ್ಮತ ಆವಿರ್ಭಾವತಿರೋಭಾವೌ । ಆತ್ಮತೋಽನ್ನಂ । ಆತ್ಮತೋ ಬಲಂ । ಆತ್ಮತೋ ವಿಜ್ಞಾನಂ । ಆತ್ಮತೋ ಧ್ಯಾನಂ । ಆತ್ಮತಃ ಚಿತ್ತಂ । ಆತ್ಮತಃ ಸಂಕಲ್ಪಃ । ಆತ್ಮತೋ ಮನಃ । ಆತ್ಮತೋ ವಾಗ್ । ಆತ್ಮತೋ ನಾಮ। ಆತ್ಮತೋ ಮಂತ್ರಾಃ । ಆತ್ಮತಃ ಕರ್ಮಾಣಿ । ಆತ್ಮತಃ ಏವೇದಂ ಸರ್ವಮಿತಿ ॥

ಶ್ರವಣ-ಮನನಪೂರ್ವಕವಾಗಿ ಈ ರೀತಿಯಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಮುಕ್ತರಾಗಿರುವ ಬ್ರಹ್ಮದೇವರೇ ಮೊದಲಾದ ಮುಕ್ತರಿಗೆ ಪರಮಾತ್ಮನಿಂದ ಪ್ರಾಣ ಆಶಾ ಸ್ಮರ ಆಕಾಶ ತೇಜಸ್ಸು ಅಪ್ ಅನ್ನ ಬಲ ವಿಜ್ಞಾನ ಧ್ಯಾನ ಚಿತ್ತ ಸಂಕಲ್ಪ ಮನಸ್ಸು ವಾಕ್ ನಾಮ ಮಂತ್ರಕರ್ಮ ಎಂಬೀ ಎಲ್ಲಾ ದೇವತೆಗಳು ಹಾಗೂ ಹುಟ್ಟುವುದು, ರಕ್ಷಿಸಲ್ಪಡುವುದು, ಲಯ ಹೊಂದುವುದು, ನಿಯಮಿಸಲ್ಪಡುವುದು ಇವೆಲ್ಲವೂ ಪ್ರತ್ಯಕ್ಷವಾಗಿ ಗೋಚರಿಸುತ್ತವೆ. ಇದೇ ರೀತಿಯಾಗಿ ಪರಮಾತ್ಮನಿಂದ ಉಂಟಾಗುತ್ತಿರುವ ಎಲ್ಲ ಜಗತ್ತಿನ ಉತ್ಪತ್ತಿ ಹಾಗೂ ನಾಶಗಳು ಆ ಮುಕ್ತರಿಗೆ ಪ್ರತ್ಯಕ್ಷವಾಗಿ ಗೋಚರಿಸುತ್ತವೆ.

ತದೇಷ ಶ್ಲೋಕಃ -

ನ ಪಶ್ಯೋ ಮೃತ್ಯುಂ ಪಶ್ಯತಿ
ನ ರೋಗಂ ನೋ ದುಃಖತಾಂ ।
ಸರ್ವಂ ಹ ಪಶ್ಯಃ ಪಶ್ಯತಿ
ಸರ್ವಮಾಪ್ನೋತಿ ಸರ್ವಶ ಇತಿ ।
ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ।

ಸಪ್ತಧಾ ನವಧಾ ಚೈವ ಪುನಶ್ಚೈಕಾದಶಃ ಸ್ಮೃತಃ ॥
ಶತಂ ಚ ದಶ ಚೈಕಶ್ಚ ಸಹಸ್ರಾಣಿ ಚ ವಿಂಶತಿಃ ।
ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ।
ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ ॥

ತಸ್ಮೈ ಮೃದಿತಕಷಾಯಾಯ ತಮಸಃ ಪಾರಂ ದರ್ಶಯತಿ ದೇವರ್ಷಯೇ ನಾರದಾಯ ಭಗವಾನ್ ಸನತ್ಕುಮಾರ । ತಂ ಸ್ಕಂದ ಇತ್ಯಾಚಕ್ಷತೇ । ತಂ ಸ್ಕಂದ ಇತ್ಯಾಚಕ್ಷತೇ ॥

॥ ಇತಿ ಶ್ರೀ ಛಾಂದೋಗ್ಯೋಪನಿಷದಿ ಸಪ್ತಮೋಽಧ್ಯಾಯಃ ॥

ಮುಕ್ತನು ಪರಮಾತ್ಮನ ಸೃಷ್ಟ್ಯಾದಿಕಾರ್ಯಗಳನ್ನು ಕಣ್ಣಾರೆ ಕಾಣುವನೆಂದು ಮುಂತಾದ ವಿಷಯದಲ್ಲಿ ಈ ಶ್ಲೋಕಗಳು ಗಮನಾರ್ಹವಾಗಿವೆ. ಪರಮಾತ್ಮಾಪರೋಕ್ಷಜ್ಞಾನಿಯಾದ ಮುಕ್ತನು ಮರಣ ರೋಗ ದುಃಖ ಇವೇ ಮೊದಲಾದ ಅನರ್ಥಗಳನ್ನು ನೋಡುವುದಿಲ್ಲ. ಪರಮಾತ್ಮನಿಂದ ಉಂಟಾಗುತ್ತಿರುವ ಪ್ರಾಣಾದಿ ದೇವತೆಗಳ ಸೃಷ್ಟಿಯೇ ಮೊದಲಾದ ಎಲ್ಲ ಕಾರ್ಯಗಳನ್ನು ಮಾತ್ರ ಸಾಕ್ಷಾತ್ಕರಿಸುತ್ತಾನೆ. ಸರ್ವನೆನಿಸಿರುವ ಆ ಪರಮಾತ್ಮನನ್ನೂ, ಸಕಲ ಅಭೀಷ್ಟಗಳನ್ನೂ ಅವನು ಹೊಂದುತ್ತಾನೆ.

ಒಂದು ಮೂರು ಐದು ಏಳು ಒಂಭತ್ತು ಹನ್ನೊಂದು ನೂರ ಹನ್ನೊಂದು ಸಾವಿರದ ಇಪ್ಪತ್ತು ಎಂದು ಮುಂತಾಗಿ ಇಚ್ಛಾನುಸಾರ ಅನೇಕ ರೂಪಗಳುಳ್ಳವನಾಗುತ್ತಾನೆ.

ಶಾಸ್ತ್ರಶ್ರವಣ ಶುದ್ಧಿ ಇದ್ದರೆ, ಮನನ ಶುದ್ಧಿ ಲಭಿಸುತ್ತದೆ. ಮನನಶುದ್ಧಿ ಇದ್ದರೆ, ಸ್ಥಿರವಾದ ಸ್ಮರಣೆಯು ಸಿದ್ಧಿಸುತ್ತದೆ. ಸ್ಥಿರಸ್ಮರಣೆಯಿಂದ ಅಪರೋಕ್ಷ ಉಂಟಾಗಿ, ಅಜ್ಞಾನ ಕಾಮಕರ್ಮಗಳೇ ಮೊದಲಾದ ಎಲ್ಲ ಬಂಧನಗಳಿಂದ ಮುಕ್ತಿ ದೊರೆಯುತ್ತದೆ.

ಹೀಗೆ ಅಜ್ಞಾನದುಃಖಾದಿರಹಿತವಾದ ದೇವರ್ಷಿನಾರದರಿಗೆ ಪೂಜ್ಯರಾದ ಸನತ್ಕುಮಾರರು ಅಜ್ಞಾನದ ಸಂಪರ್ಕವಿಲ್ಲದ ಪರಮಾತ್ಮಸ್ವರೂಪವನ್ನು ತೋರಿಸಿಕೊಟ್ಟರು. ಜ್ಞಾನಿಗಳು ಈ ಸನತ್ಕುಮಾರರನ್ನು ಸ್ಕಂದನ ಅವತಾರವೆಂದು ಹೇಳುತ್ತಿದ್ದಾರೆ. ಆದುದರಿಂದ ಅವರಿಗೆ, ನಾರದರಿಗೆ ಉಪದೇಶಿಸುವ ಸಾಮರ್ಥ್ಯವಿದೆ.

ಇಲ್ಲಿಗೆ ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯ ಮುಗಿಯಿತು.

ವಿಷ್ಣುವೇ ಭೂಮಾ ಎನ್ನಲು ಅಸಾಧಾರಣವಾದ ಎರಡು ಹೇತುಗಳು

**तत्वप्रदीपः – 'सम्प्रसादः' पूर्णसुखं, सम्यक्प्रसीदत्यनेन पुरुष इति । पूर्णमेवात्र सुखं विवक्षितम् । ''नाल्पे सुखमस्ति'' इत्युक्तत्वात् ।**

'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಏಕೆಂದರೆ 'ಸಂಪ್ರಸಾದ' ಹಾಗೂ 'ಅಧ್ಯುಪದೇಶಾತ್' ಈ ಎರಡು ಹೇತುಗಳು ವಿಷ್ಣುವಿನಲ್ಲಿ ಮಾತ್ರ ಇರುತ್ತವೆ. 'ಸಂಪ್ರಸಾದ' ಶಬ್ದಕ್ಕೆ 'ಸಮ್ಯಕ್ ಪ್ರಸೀದಯತಿ ಅನೇನ' 'ಯಾವುದರಿಂದ ಚೆನ್ನಾಗಿ ಪ್ರಸನ್ನನಾಗಿದ್ದಾನೋ' ಎಂಬ ನಿಷ್ಪತ್ತಿಯಂತೆ ಪೂರ್ಣವಾದ ಸುಖವುಳ್ಳವನು ಎಂದರ್ಥ. ಸಂಪ್ರಸಾದ ಶಬ್ದದಿಂದ ಪೂರ್ಣವಾದ ಸುಖವನ್ನೇ ವಿವಕ್ಷಿಸಬೇಕು. ಏಕೆಂದರೆ 'ನಾಲ್ಪೇ ಸುಖಮಸ್ತಿ' ಅಲ್ಪರಾದವರಲ್ಲಿ ಪೂರ್ಣಸುಖವು ಇರಲು ಸಾಧ್ಯವಿಲ್ಲ ಎಂದು ಅದೇ ಉಪನಿಷತ್ತು ಹೇಳುತ್ತಿದೆ.

ಮಹಾವಿಷ್ಣುವೇ ಪೂರ್ಣಸುಖಸ್ವರೂಪನು, ಪೂರ್ಣಗುಣಗಳುಳ್ಳ ಭೂಮನೂ ಅವನೇ

**तत्वप्रदीपः – गुणगुण्यैक्यात् भूमा विष्णुरिति च युक्तमेव । विश्वतो दर्शनादिकमस्येति विश्वाक्षम् । विश्वशम्भुवं पूर्णसुखस्यानम् । विश्वं प्रविष्टत्वेन वर्तमानम् ।**

ಗುಣ ಹಾಗೂ ಗುಣಗಳಿಗೆ ಐಕ್ಯವಿರುವುದರಿಂದ ಭೂಮಾ ಎಂದರೆ ಮಹಾವಿಷ್ಣುವೇ ಆಗುತ್ತಾನೆ. ವಿಷ್ಣುವನ್ನು ಭೂಮಾ = ಪೂರ್ಣಗುಣಸ್ವರೂಪನು ಎಂದು ಹೇಳಿದ್ದು ಕ್ಲಿಷ್ಟವೇ ಆಗಿದೆ. ಮಹಾನಾರಾಯಣೋಪನಿಷತ್ತೂ ಕೂಡ ವಿಷ್ಣುವನ್ನೇ ಪೂರ್ಣಸುಖವುಳ್ಳವನೆಂದು ಹೇಳುತ್ತಿದೆ. 'ವಿಶ್ವಾಕ್ಷಮ್' ಎಂದರೆ ಎಲ್ಲವನ್ನು ನೋಡುವವನಾದ್ದರಿಂದ ನೋಡಿ ತಿಳಿದಿದ್ದಾನೆಂದರ್ಥ. 'ವಿಶ್ವಶಂಭುವಂ' ಎಂದರೆ ಪೂರ್ಣವಾದ ಸುಖದ ತಾಣ ಎಂದರ್ಥ. 'ವಿಶ್ವಂ' ಎಂಬ ಪದಕ್ಕೆ ಸಮಸ್ತ ವಿಶ್ವವನ್ನು ಪ್ರವೇಶಿಸಿ ನೆಲೆಸಿದ್ದಾನೆಂದರ್ಥ.

ನಾರಾಯಣ ಶ್ರುತ್ಯರ್ಥ

**तत्वप्रदीपः – नारायणं मुक्तसङ्घव्यक्तं देवं प्रकाशरूपं, 'द्यु प्रकाशे' इति धातोः । विश्वतः परमं च तदश्चेति विश्वतः परमाम् । 'विश्वं पूर्णं गुणैः ।।**

ಇಲ್ಲಿ ಬರುವ ಪ್ರಶ್ನೆ ಭೂಮಾ ಎಂದರೆ ಯಾರು ? ಮುಖ್ಯಪ್ರಾಣನೇಕೆ ಆಗಬಾರದು? ಎಂದು. ಆದರೆ ಪ್ರಕರಣವನ್ನು ಕೂಲಂಕಷವಾಗಿ ಆಲೋಚಿಸಿದಾಗ ಭೂಮಾ ಶಬ್ದವನ್ನು ಪ್ರಯೋಗಿಸಿದ ಸಂದರ್ಭದಲ್ಲಿ ವಿಷ್ಣುವಿನ ಅಸಾಧಾರಣ ಧರ್ಮಗಳನ್ನು ಉಪನಿಷತ್ತು ಹೇಳುತ್ತಿದೆ. ಸರ್ವತ್ರವ್ಯಾಪ್ತತ್ವ, ಸರ್ವತಂತ್ರಸ್ವತಂತ್ರತ್ವ, ಮುಕ್ತಾಶ್ರಯತ್ವ ಇತ್ಯಾದಿ ಧರ್ಮಗಳು ವಿಷ್ಣುವಿನಲ್ಲೇ ಇರುತ್ತವೆ ಹೊರತು ಮುಖ್ಯಪ್ರಾಣನಲ್ಲಿ ಇರುವುದಿಲ್ಲ ಆದಕಾರಣ ಭೂಮಾ ಶಬ್ದದಿಂದ ಪ್ರತಿಪಾದ್ಯನಾದವನು ಮುಖ್ಯಪ್ರಾಣನಾಗಲು ಸಾಧ್ಯವಿಲ್ಲ ಎಂಬ ಪ್ರಮೇಯವನ್ನು ಪ್ರತಿಪಾದಿಸುವುದಕ್ಕಾಗಿಯೇ ಈ ಭೂಮಾಧಿಕರಣವು ಹೊರಟಿದೆ. ಆದ್ದರಿಂದ ಏಳನೆಯ ಅಧ್ಯಾಯದ ಪ್ರಾರಂಭದ ಭಾಗವೆಲ್ಲವೂ ತಾರತಮ್ಯವನ್ನು ಹೇಳುತ್ತಿದೆ. ಕೊನೆಯಲ್ಲಿ ಮುಖ್ಯಪ್ರಾಣನು ಎಲ್ಲಾ ದೇವತೆಗಳಿಗಿಂತ ಉತ್ತಮನಾಗಿದ್ದಾನೆಂದೂ ಕೂಡ ಹೇಳುತ್ತಿದೆ. ಕೊನೆಯ ಪ್ರಕರಣ ಮಾತ್ರ ವಿಷ್ಣುವನ್ನು ಪ್ರತಿಪಾದನೆ ಮಾಡುವ ಮೂಲಕ ವಿಷ್ಣುಸರ್ವೋತ್ತಮತ್ವವನ್ನು ತಿಳಿಸುತ್ತಿದೆಯೆಂದು ತಿಳಿಯಬೇಕು. ಸಂಪೂರ್ಣ ಅಧ್ಯಾಯವು ವಿಷ್ಣುವನ್ನೇ ಹೇಳುತ್ತಿದೆ ಎಂಬುದು ಅಭಿಪ್ರಾಯವಲ್ಲ.

'ನಾರಾಯಣಂ' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿರುವ ನಾರಾಯಣ ಶಬ್ದದಿಂದಲೂ ಭಗವಂತನು ಸುಖಪೂರ್ಣನಾಗಿದ್ದಾನೆಂದು ತಿಳಿಯುತ್ತಿದೆ - ಅದು ಹೀಗೆ - 'ನ ವಿದ್ಯಂತೇ ಅರಾಃ ಏಷಾಂ ತೇ ನಾರಾಃ, ನಾರಾಣಾಂ ಸಮುದಾಯಃ ನಾರಂ' ಎಂಬ ನಿಷ್ಪತ್ತಿಯಂತೆ ಸಂಸಾರದೋಷವಿಲ್ಲದ ಮುಕ್ತರ ಸಮುದಾಯವು ನಾರಾ ಎಂದು ಕರೆಸಿಕೊಳ್ಳುತ್ತದೆ. ಅಂಥ ಮುಕ್ತಸಂಘಕ್ಕೆ ಆಶ್ರಯನಾಗಿರುವುದರಿಂದ ಇವನು ನಾರಾಯಣನಾಗಿದ್ದಾನೆ. ಕೇವಲ ಸುಖವನ್ನೇ ಹೊಂದಿರುವ ಮುಕ್ತರಿಗೆ ಆಶ್ರಯನಾಗಿರುವ ಕಾರಣ ಇವನು ಸುಖಪೂರ್ಣ-ನಾಗಿದ್ದಾನೆಂದು ಈ ಶಬ್ದದಿಂದ ತಿಳಿಯುತ್ತದೆ. ಅಥವಾ 'ನರೀಯಂತೇ ಇತಿ ನಾರಾಃ' ನಾಶವನ್ನು ಹೊಂದದ ಮುಕ್ತರು 'ನಾರಾಃ' ಎಂದು ಕರೆಸಿಕೊಳ್ಳುತ್ತಾರೆ. ಇವರಿಗೆ ಆಶ್ರಯನಾದ ಕಾರಣ ನಾರಾಯಣನಾಗಿದ್ದಾನೆ. ಆದ್ದರಿಂದ ಮುಕ್ತರಿಗಿಂತಲೂ ಇವನು ಶ್ರೇಷ್ಠನಾಗಿದ್ದಾನೆಂದು ತಿಳಿಯುತ್ತದೆ. ಸೂತ್ರದಲ್ಲಿ 'ಸಂಪ್ರಸಾದಾತ್' ಎಂಬ ಪದಕ್ಕೆ ಮುಕ್ತರೆಂದು ಅರ್ಥೈಸಿ ಅವರಿಗಿಂತಲೂ ಅಧ್ಯುಪದೇಶನಾಗಿದ್ದಾನೆ ಎಂದರೆ ವಿಶಿಷ್ಟನಾಗಿದ್ದಾನೆ ಎಂದು ಹೇಳಿದ್ದಾರೆ. ಅದನ್ನೇ ಈ ನಾರಾಯಣ ಶಬ್ದವು ಹೇಳುತ್ತಿದೆ. ಹೀಗೆ ಭಗವಂತನು ಸುಖಪೂರ್ಣನಾದ್ದರಿಂದ 'ಭೂಮಾ' ಎಂಬ ಪದದಿಂದ ಪ್ರತಿಪಾದ್ಯನಾಗುತ್ತಾನೆ ಎಂದು ತಿಳಿಯಬೇಕು.

## ಪಾಠಾಂತರದ ಬಗ್ಗೆ

'ಉತ್ಕ್ರಾಂತಪ್ರಾಣಾನ್ ಇತ್ಯಾದಿ ತಲ್ಲಿಂಗಾತ್ ಪ್ರಾಣಶಬ್ದಶ್ಚ' ಎಂಬುದು ಕೆಲವು ಪುಸ್ತಕಗಳಲ್ಲಿ ಪಾಠವಿದೆ. ಆದರೆ ವ್ಯಾಖ್ಯಾನಗಳ ಪ್ರಕಾರ 'ಉತ್ಕ್ರಾಂತಪ್ರಾಣಾನ್ ಇತ್ಯಾದಿ ಲಿಂಗಾತ್ ಪ್ರಾಣಶಬ್ದಶ್ಚ' ಎಂಬ ಪಾಠವನ್ನು ವಿವಕ್ಷಿಸಬೇಕು.

ಕೆಲವು ಪುಸ್ತಕಗಳಲ್ಲಿ 'ವಿಶ್ವತಃ ಪರಮಂ ನಿತ್ಯಂ' ಎಂಬ ಪಾಠವಿದೆ. ಆದರೆ ಪಂಡಿತಾಚಾರ್ಯರು ಪರಮಾಂ ನಿತ್ಯಂ' ಎಂಬ ಪಾಠವನ್ನು ಸ್ವೀಕರಿಸಿ ವ್ಯಾಖ್ಯಾನ ಮಾಡಿರುವುದರಿಂದ, ಈ ಪಾಠವನ್ನೇ ಪರಿಗಣಿಸಬೇಕು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಭೂಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

ವಿಷ್ಣುವೇ ಭೂಮನೆನ್ನಲು ಮತ್ತೊಂದು ಯುಕ್ತಿ

**तत्वप्रकाशिका – युक्त्यन्तरेण विष्णोर्भूमत्वप्रतिपादकं सूत्रमुपन्यस्य व्याचष्टे – धर्मेति ।।**

ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಭೂಮನಾಗಿದ್ದಾನೆಂಬುದನ್ನು ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಧರ್ಮ" ಇತ್ಯಾದಿ ವಾಕ್ಯದಿಂದ.

ವಿಷಯವಾಕ್ಯದಲ್ಲಿರುವ ವಿಷ್ಣುವಿನ ಅಸಾಧಾರಣ ಧರ್ಮಗಳು

**तत्वप्रकाशिका – 'स एवाधस्तात् स उपरिष्टात् स पश्चात् स पुरस्तात् स दक्षिणतः स उत्तरतः । स एवेदं सर्वम् । यत्र नान्यत् पश्यति नान्यत् शृणोति नान्यत् विजानाति स भूमा, स भगवः कस्मिन् प्रतिष्ठितः, स्वे महिम्नि' इत्यादिना भूम्नि सर्वगतत्वादिधर्मश्रवणाच्चासौ विष्णुरेव । तेषां विष्णावेवोपपत्तेरित्यर्थः । अतो विष्णुरेव भूमेति तस्यैवानन्दमयत्वमिति सिद्धम् ।। ९ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् भूमाधिकरणम् ।।**

"ಸ ಏವಾಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ । ಸ ಏವೇದಂ ಸರ್ವಮ್ । ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾ ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಸ್ವೇ ಮಹಿಮ್ನಿ"

"ಅವನು ಕೆಳಗೆ ಮೇಲೆ ಹಿಂದೆ ಮುಂದೆ ಎಡ ಬಲ ಹೀಗೆ ಎಲ್ಲೆಡೆಯಲ್ಲಿಯೂ ವ್ಯಾಪ್ತನಾಗಿದ್ದಾನೆ. ಸಕಲ ವಿಶ್ವವೂ ಅವನ ಅಧೀನವಾಗಿದೆ. ಅವನ ಅಧೀನವಿಲ್ಲದ ಯಾವುದೇ ವಸ್ತುವನ್ನು ನೋಡಲು ಸಾಧ್ಯವಿಲ್ಲ. ಕೇಳಲು ತಿಳಿಯಲೂ ಸಹ ಸಾಧ್ಯವಿಲ್ಲ. ಅವನೇ ಭೂಮನು. ಅಂತಹ ಭೂಮನು ಎಲ್ಲಿ ಇರುತ್ತಾನೆ" ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಉತ್ತರಿಸುತ್ತಾರೆ. "ಅವನು ತನ್ನಲ್ಲಿಯೇ ಇರುತ್ತಾನೆ". ಹೀಗೆ ಭೂಮನಲ್ಲಿ ಸರ್ವಗತತ್ವ, ಸ್ವೇ ಮಹಿಮ್ನಿಪ್ರತಿಷ್ಠಿತತ್ವ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ಇವೆಲ್ಲವೂ ಸಹ ವಿಷ್ಣುವಿನ ಅಸಾಧಾರಣವಾದ ಧರ್ಮವಾಗಿರುವುದರಿಂದ ವಿಷ್ಣುವೇ ಭೂಮನಾಗುತ್ತಾನೆ. ಆದ್ದರಿಂದ ಅವನೇ ಆನಂದಮಯನೂ ಆಗುತ್ತಾನೆಂಬುದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಭೂಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಭಾವದೀಪ

ಸರ್ವಗಗತ್ವಾದಿ ಎಂಬಲ್ಲಿರುವ ಆದಿಪದ ವ್ಯಾಖ್ಯಾನ

**भावदीपः – धर्मोपपत्तेश्च ।।** भाष्यस्थादिपदोक्तलिङ्गद्योतनाय यत्र नान्यदित्यादिशेषोक्तिः । यत्र यस्मिन् दृष्टे श्रुते विज्ञाते सतीत्यर्थः ।

ಭಾಷ್ಯದಲ್ಲಿರುವ "ಸರ್ವಗತ್ವಾದಿ" ಎಂಬಲ್ಲಿರುವ "ಆದಿ" ಪದದಿಂದ ಹೇಳಲ್ಪಟ್ಟ ಲಿಂಗವನ್ನು "ಯತ್ರ ನಾನ್ಯತ್ಪಶ್ಯತಿ" ಇತ್ಯಾದಿಯಾಗಿ ಉಲ್ಲೇಖಿಸುವ ಮೂಲಕ ವ್ಯಾಖ್ಯಾನಿಸಿದ್ದಾರೆ. "ಯತ್ರ" ಎಂದರೆ ಯಾರನ್ನು ನೋಡುವುದು, ಕೇಳುವುದು ಮತ್ತು ವಿಶೇಷಜ್ಞಾನ ಪಡೆಯುತ್ತಿರಲು ಎಂದರ್ಥ.

ಸೂತ್ರದಲ್ಲಿರುವ ಉಪಪತ್ತಿ ಪದದ ವ್ಯಾಖ್ಯಾನ

**भावदीपः** – उपपत्तिशब्दः सूत्रे लिङ्गानां निरवकाशत्वोक्तिपर इति भावेन धर्मश्रवणाच्च विष्णावेवोपपत्तेरिति विच्छिद्य व्याख्यातम् – **अत इति** ।। पूर्णसुखत्वादिहेतूनां भावात् ।

ಸೂತ್ರದಲ್ಲಿರುವ "ಉಪಪತ್ತಿ" ಶಬ್ದವು ಲಿಂಗಗಳ ನಿರವಕಾಶತ್ವವನ್ನು ನಿರೂಪಣೆ ಮಾಡುತ್ತದೆ. ಈ ಅಭಿಪ್ರಾಯದಿಂದಲೇ ಸರ್ವಗತತ್ವವೇ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿಯೇ ಉಪಪನ್ನವಾಗುತ್ತದೆ ಎಂಬುದನ್ನು "ಅತೋ ವಿಷ್ಣೋರೇವ" ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಪೂರ್ಣಸುಖವೇ ಮೊದಲಾದ ಹೇತುಗಳು ಇರುವುದರಿಂದ ಎಂದರ್ಥ.

ಸಕಲ ಸೂತ್ರಗಳ ಸಾರವೇನು ?

**भावदीपः** – भाष्यदिशा प्राणपदेनान्तर्याम्युक्त्या प्राणभूम्नोरेकत्वेन वा न्यायविवरणरीत्या प्राणभूम्नोर्भेदेन प्राणस्य वायुमात्रत्वेन वा भूमा विष्णुरेवेति सर्वसूत्रार्थः ।

'ಉತ್ಕ್ರಮಣ' ಎಂಬ ಲಿಂಗವು ಭಗವಂತನ ರೂಪವಿಶೇಷದಿಂದ ಉಪಪನ್ನವಾಗುತ್ತದೆ. "ಅನುಕ್ತಿ" ಎಂಬ ಲಿಂಗವೂ ಸಹ ಅಧ್ಯಾಹಾರದಿಂದ ಉಪಪನ್ನವಾಗುತ್ತದೆ. ಮತ್ತು "ರೂಪವಿಶೇಷ" "ವಿವಕ್ಷಾದ್ಯಾಹಾರಗಳೆಂಬ ಉಪಪತ್ತಿಗಳಿಂದ ಮತ್ತು ಬಾಧಕಗಳು ಇಲ್ಲದಿರುವುದರಿಂದ ಭೂಮಾ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. ಮತ್ತು ಭಾಷ್ಯದ ಪ್ರಕಾರ ಪ್ರಾಣಪದದಿಂದ ಅಂತರ್ಯಾಮಿಯನ್ನು ವಿವಕ್ಷೆ ಮಾಡಿದರೆ 'ಪ್ರಾಣ' ಮತ್ತು 'ಭೂಮಾ' ಇಬ್ಬರು ಒಬ್ಬನೇ ಆಗುತ್ತಾನೆ. ಅಥವಾ ನ್ಯಾಯವಿವರಣ ಪ್ರಕಾರವಾಗಿ ಪ್ರಾಣ ಮತ್ತು ಭೂಮಾ ಇಬ್ಬರು ಭಿನ್ನರು ಎಂದು ಒಪ್ಪುವುದಾದರೆ ಪ್ರಾಣ ಶಬ್ದದಿಂದ ವಾಯುದೇವರೇ ಪ್ರತಿಪಾದ್ಯರಾಗಿ ಭೂಮಾ ಶಬ್ದದಿಂದ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ ಎಂದು ನಿರ್ಣಯವಾಗುತ್ತದೆ. ಈ ಪ್ರಮೇಯವೇ ಸಕಲ ಸೂತ್ರಗಳ ಸಾರ.

ಭೂಮನಾದ ಮಹಾವಿಷ್ಣುವೇ ಆನದಂದಮಯ

**भावदीपः** – तमेव हेतूकृत्य 'यो वै भूमा तत्सुखम्' इत्युक्तेरिति पूर्वाक्षेपकभाष्यार्थमुपसंहरति – **इति तस्यैवानन्दमयत्वमिति** ।। 'तत् सुखम्' इत्युक्तपूर्णसुखत्वद्वारेत्यर्थः ।। ९ ।।

।। इति राघवेन्द्रयतिकृते भावदीपे भूमाधिकरणम् ।।

ಹಿಂದೆ ಹೇಳಿದ ಹೇತುಗಳ ಆಧಾರದಿಂದ ''ಯೋ ವೈ ಭೂಮಾ ತತ್ಸುಖಂ'' ಎಂಬ ಶ್ರುತಿಯ ಅನುಸಾರವಾಗಿ ಹಿಂದೆ ಭಾಷ್ಯದಲ್ಲಿ ಹೇಳಿದ ಆಕ್ಷೇಪವನ್ನು ''ಇತಿ ತಸ್ಯೈವ ಆನಂದಮಯತ್ವಂ'' ಎಂಬ ಟೀಕಾ ವಾಕ್ಯಗಳಿಂದ ಉಪಸಂಹಾರ ಮಾಡಿದ್ದಾರೆ. ''ತತ್ಸುಖಂ'' ಎಂದರೆ ಪೂರ್ಣಸುಖ ಮುಖಾಂತರ ಎಂದರ್ಥ.

ವಿಶೇಷವಿಚಾರ - 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿಯೂ ಮುಂದೆ ಇದೇ ವಿಷಯವನ್ನು ಪ್ರತಿಪಾದಿಸುವರಿದ್ದಾರೆ. ಆದ್ದರಿಂದ ಪ್ರಶ್ನಪ್ರತಿವಚನಗಳನ್ನು ಉಪನಿಷತ್ತಿನಲ್ಲಿ ಅನುಸಂಧಾನ ಮಾಡಿಕೊಂಡು ವಿಷ್ಣುವೇ ಭೂಮನಾಗಿದ್ದಾನೆಂದು ಸಮರ್ಥಿಸುವುದು ಯುಕ್ತವಲ್ಲವೆಂದು ಹೇಳಬಾರದು. ಹಾಗೂ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದನ್ನು ಹೇಳಿದ್ದು ಸತ್ಯ. ಆದರೆ ಅದನ್ನೇ ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಪುನುರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ನ್ಯಾಯವಿವರಣ ಹಾಗೂ ಛಾಂದೋಗ್ಯ ಭಾಷ್ಯಗಳಲ್ಲಿ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂದೇ ವ್ಯಾಖ್ಯಾನಿಸಿದ್ದಾರೆ. ಹಾಗಾದರೆ ಶ್ರುತಿಯಲ್ಲಿ ವಿಷ್ಣುವನ್ನು ಉಲ್ಲೇಖಿಸಿದಂತೆ ಆಗಲಿಲ್ಲವೆ? ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಅನಂತರ ಸತ್ಯವು ಪ್ರಸ್ತುತವಾಗಿದೆ. ಅಂತಹ ಸತ್ಯಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯಬೇಕು. ಆದ್ದರಿಂದಲೇ 'ಏವಂ ವಿಜಾನನ್ ಅತಿವಾದಿ' ಎಂದು ಮುಖ್ಯಪ್ರಾಣದೇವರನ್ನು ಯಾರು ತಿಳಿಯುತ್ತಾರೋ, ಅವನನ್ನು 'ಅತಿವಾದಿ' ಅಂದರೆ ಅಧಿಕಜ್ಞಾನಿಯೆಂದು ಶ್ರುತಿಯು ಪ್ರಶಂಸಿಸಿದೆ. ಅನಂತರ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂಬುದಾಗಿ ಯಾರು ಸತ್ಯಸ್ವರೂಪನಾದ ಬ್ರಹ್ಮನನ್ನು ತಿಳಿಯುತ್ತಾರೋ ಅವನು ಅತ್ಯಧಿಕವಾದ ಜ್ಞಾನಿ ಎಂಬುದಾಗಿ 'ತು' ಶಬ್ದವು ಅತಿಶಯವನ್ನು ತಿಳಿಸುತ್ತಿದೆ. ಆದ್ದರಿಂದ ಸತ್ಯಶಬ್ದದಿಂದ ಪರಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ವಿಷ್ಣುವಿನ ಉಲ್ಲೇಖವಿದೆ ಎಂದು ಸಿದ್ಧವಾಗುತ್ತದೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದಲ್ಲಿ ಭೂಮಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

ತಂತ್ರದೀಪಿಕೆಯಲ್ಲಿ ಭೂಮಾಧಿಕರಣದ ಸೂತ್ರಗಳು

**।। श्रीजानकीवदनाम्भोजराजहंसाय रामचन्द्राय नमः ।।**

**।। श्री गुरुभ्यो नमः ।।**

**श्री राघवेन्द्रतीर्थविरचिता**

# तन्त्रदीपिका

**भूमाधिकरणम् (१।३।२)**

ಛಾಂದ್ಯೋಗ್ಯದಲ್ಲಿ ಭೂಮಾ ಎಂದರೆ ಮಹಾವಿಷ್ಣು

**।। भूमा सम्प्रसादादध्युपदेशात् ।। १-३-८ ।।**

अत्र तादृश भूमनाम समन्वीयते । ''यो वृ भूमा तत्सुखम्'' इत्युक्तो भूमा ततु ब्रह्मैव । नतु प्राणः ।

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ 'ಭೂಮಾ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. 'ಯೋ ವೈ ಭೂಮಾ ತತ್ಸುಖಮ್' ಎಂಬುದಾಗಿ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಭೂಮನು ವಿಷ್ಣುವೇ ಆಗಿದ್ದಾನೆ ಹೊರತು ಮುಖ್ಯಪ್ರಾಣನಲ್ಲ.

ಭೂಮಾ ಸಂಪ್ರಸಾದಾತ್ ಎಂಬ ಸೂತ್ರದ ಪ್ರತಿಪದಾರ್ಥ

कुतः? सम्प्रसादात् सम्यक् प्रसीदत्यनेनेति सम्प्रसादः पूर्णसुखम् । ''तत्सुखम्'' इति पूर्णसुखत्वाभिधानात् । अध्युपदेशात्, अधि आधिकत्वेन नामादीनां सर्वेषामुपरि तदुत्तमत्वेन व्यपदेशाच्चेत्यग्रेतन-श्चकारोऽत्रानुकृष्यते ।

**ಸೂತ್ರಾರ್ಥ** - ಏಕೆಂದರೆ 'ಸಂಪ್ರಸಾದಾತ್' 'ಚೆನ್ನಾಗಿ ಯಾವುದರಿಂದ ಪ್ರಸನ್ನನಾಗುತ್ತಾನೋ ಅದು 'ಸಂಪ್ರಸಾದ' ಎನಿಸುತ್ತದೆ. ಪೂರ್ಣಸುಖವೆಂದರ್ಥ. 'ತತ್ಸುಖಮ್' ಎಂಬಲ್ಲಿ ಪೂರ್ಣಸುಖವನ್ನು ಹೇಳಿರುವುದರಿಂದ. ಅಧ್ಯುಪದೇಶಾತ್ = ಅಧಿ ಅಧಿಕವೆಂದು, ಸಾಮಾಭಿಮಾನಿ ಮೊದಲಾದವರಿಗಿಂತ ಉತ್ತಮನೆಂದು ಉಪದೇಶಿಸಿರುವುದರಿಂದಲೂ ಭೂಮಾ = ವಿಷ್ಣುವೇ ಭೂಮನಾಗಿದ್ದಾನೆ. ಮುಂದಿನ ಸೂತ್ರದಲ್ಲಿರುವ ಚಶಬ್ದವನ್ನು ಇಲ್ಲಿ ಅನ್ವಯ ಮಾಡಬೇಕು.

### ಭೂಮಾ ಎಂಬುದು ಪುಲ್ಲಿಂಗ ಶಬ್ದ

**अत्र भूमेति पुंनिर्देशः प्राग्वत् । सम्बन्धभूमेत्यस्य भावार्थत्वेऽपीह भावभवित्रोरभेदात्पूर्णरूपभवित्रर्थत्वं बोध्यम् ।**

ಇಲ್ಲಿ 'ಭೂಮಾ' ಎಂಬುದು ಪುಲ್ಲಿಂಗಶಬ್ದವಾಗಿದೆ. ವಾಸ್ತವಿಕವಾಗಿ 'ಭೂಮಾ' ಎಂಬ ಶಬ್ದವು 'ಸಂಬಂಧಭೂಮಾ' ಎಂಬ ಸೂತ್ರದಲ್ಲಿ ಹೇಳಿದಂತೆ ಧರ್ಮಾರ್ಥಕವೇ ಆಗಿದೆ. ಆದರೂ ಸಹ ಧರ್ಮ, ಹಾಗೂ ಧರ್ಮಿಗಳಿಗೆ ಅಭೇದವಿರುವ ಪ್ರಯುಕ್ತ ಪ್ರಕೃತ ಪೂರ್ಣ ಎಂಬ ಧರ್ಮ್ಯರ್ಥವನ್ನೇ ವಿವಕ್ಷಿಸಬೇಕೆಂದು ತಿಳಿಯಬೇಕು.

### ಪೂರ್ಣಸುಖತ್ವಾತ್ ಎಂದೇಕೆ ಸೂತ್ರದಲ್ಲಿ ಹೇಳಲಿಲ್ಲ?

**पूर्णसुखत्वादिति वाच्ये सम्प्रसादादिति यौगिकोक्तिरीशस्य सुखित्वे दुःखित्वं स्यादिति न शङ्क्यम् । पूर्णसुखकार्येण प्रसादेन दुःखाभावनिश्चयादिति सूचयितुम् ।**

ಸೂತ್ರದಲ್ಲಿ 'ಸಂಪ್ರಸಾದಾತ್' ಎಂದು ಹೇಳುವ ಬದಲು 'ಪೂರ್ಣಸುಖತ್ವಾತ್' ಎಂದೇ ಹೇಳಬಹುದಿತ್ತು. ಆದರೆ 'ಸಂಪ್ರಸಾದಾತ್' ಎಂಬ ಯೌಗಿಕಶಬ್ದಪ್ರಯೋಗದಿಂದ ಪೂರ್ಣಸುಖದ ಕಾರ್ಯವೆನಿಸಿದ ಪ್ರಸನ್ನತೆಯನ್ನು ಇದರಿಂದ ತಿಳಿಸಿದ್ದಾರೆ. ಸುಖವುಳ್ಳವನಾದರೆ ದುಃಖವೂ ಸಹ ಬರಬೇಕಲ್ಲವೇ? ಎಂಬ ಶಂಕೆಯನ್ನು ಇದರಿಂದ ಪರಿಹರಿಸಿದಂತಾಯಿತು. ಪೂರ್ಣಸುಖದ ಕಾರ್ಯವೆನಿಸಿದ ಪ್ರಸಾದದಿಂದ ವಿಷ್ಣುವಿಗೆ ದುಃಖವೇ ಇರುವುದಿಲ್ಲವೆಂದು ನಿಶ್ಚಯವಾಗಿದೆ.

ಭೂಮಾಧಿಕರಣದ ಎರಡನೆಯ ಸೂತ್ರ

इतश्चैवमित्याह -

।। धर्मोपपत्तेश्च ।।

ಮತ್ತೊಂದು ಕಾರಣದಿಂದಲೂ ಭೂಮನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. ಧರ್ಮೋಪಪತ್ತೇಶ್ಚ.

'ಧರ್ಮೋಪಪತ್ತೇಶ್ಚ' ಎಂಬ ಸೂತ್ರದ ಪ್ರತಿಪದಾರ್ಥ

''स एवाधस्तत् स उपरिष्टात्'' इत्युक्तसर्वगतत्वादिधर्माणामुपपत्तेश्च भूमा ब्रह्मैवेत्यर्थः ।

ಸೂತ್ರಾರ್ಥ ಹೀಗಿದೆ - 'ಸ ಏವಾಧಸ್ತಾತ್ ಸ ಏವ ಉಪರಿಷ್ಟಾತ್' ಎಂಬ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಸರ್ವಗತತ್ವವೇ ಮೊದಲಾದ ಧರ್ಮಗಳು, ಉಪಪತ್ತೇಶ್ಚ = ಉಪಪನ್ನ-ವಾಗುವುದರಿಂದಲೂ ಭೂಮಾ = ಬ್ರಹ್ಮನೇ ಭೂಮನಾಗಿದ್ದಾನೆ.

ಸೂತ್ರದಲ್ಲೇಕೆ ಭೂಮಾ ಶಬ್ದವನ್ನು ಪ್ರಯೋಗಿಸಿದ್ದಾರೆ ?

श्रुतौ सत्यस्यादित्वेऽपि सत्यादेः प्रणाड्या भूमा यत्तत्वोक्तेः सर्वस्य ब्रह्मताप्तये भूम्न उक्तिरित्येके । सम्प्रसादादिहेतुयुतत्वाच्च । सैव हीत्यतो गतत्वं चान्यतोऽवसेयम् ।। २ ।।

ಶ್ರುತಿಯಲ್ಲಿ ಸತ್ಯನನ್ನೇ ಮೊದಲು ಹೇಳಿರುವುದರಿಂದ ಅವನಿಗೆ ಬ್ರಹ್ಮತ್ವವನ್ನು ಸಾಧಿಸಬೇಕಿತ್ತು. ಆದರೂ ಸಹ ಸತ್ಯ ಮೊದಲಾದವುಗಳಿಗೆ ಕ್ರಮವಾಗಿ ಭೂಮಾಧೀನತ್ವವು ಹೇಳಲ್ಪಟ್ಟಿದೆ. ಆದ್ದರಿಂದ ಸತ್ಯ ಮೊದಲಾದ ಎಲ್ಲ ಪದಾರ್ಥಗಳೂ ಬ್ರಹ್ಮವೇ ಆಗಿದೆ ಎಂದು ಸಾಧಿಸುವುದಕ್ಕಾಗಿ ಭೂಮಶಬ್ದವನ್ನೇ ಸೂತ್ರದಲ್ಲಿ ಗ್ರಹಣ ಮಾಡಿದ್ದಾರೆ. ಇದು ಕೆಲವರ ಉತ್ತರ. 'ಸಂಪ್ರಸಾದ' ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದಲೂ ಬ್ರಹ್ಮನೇ ಭೂಮನಾಗಿದ್ದಾನೆ. 'ಸೈವ ಹಿ ಸತ್ಯಾದಯಃ' ಎಂಬ ಸೂತ್ರದಿಂದ ಈ ಅಧಿಕರಣಕ್ಕೆ ಗತಾರ್ಥತ್ವದೋಷವು ಬರುವುದಿಲ್ಲವೆಂದು ಬೇರೆ ಗ್ರಂಥದಿಂದ ತಿಳಿಯಬೇಕು.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಭೂಮಾಧಿಕರಣ
## ಮತ್ತು
## ವಿಮರ್ಶೆ

ಶಾಂಕರ ಭಾಷ್ಯದಲ್ಲಿ ಸೂತ್ರವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ - ಜಡರೂಪವಾದ ಪ್ರಾಣಾಪಾನಾದಿ ಪಂಚವೃತ್ತಿಯನ್ನೂ ತಾಳಿದ ವಾಯುವೇ ಭೂಮವೆನಿಸಿದೆ ಎಂದು ಪೂರ್ವಪಕ್ಷ. ನಿರ್ವಿಶೇಷಬ್ರಹ್ಮನೇ ಭೂಮನಾಗಿದ್ದಾನೆಂದು ಸಿದ್ಧಾಂತ.

ಇದು ತಪ್ಪು. ಜಡವಾದ ವಾಯು ಭೂಮವೆನಿಸಿದರೆ 'ತರತಿ ಶೋಕಮಾತ್ಮವಿತ್', ಹಾಗೂ ಆತ್ಮಶಬ್ದ ಎಂದು ಉಪಕ್ರಮದಲ್ಲಿ ಶ್ರುತವಾದ 'ಭೂಮೈವ ಸುಖಮ್' ಎಂಬಲ್ಲಿ ಶ್ರುತವಾದ ಸುಖತ್ವವು ಜಡವಾದ್ದರಲ್ಲಿ ಕೂಡುವುದಿಲ್ಲವಾದ್ದರಿಂದ ತಪ್ಪಾಗುತ್ತದೆ. ಆದ್ದರಿಂದ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲ.

ಮತ್ತು ಪ್ರಾಣಶಬ್ದವು 'ತೇ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇ । ಅಹಂ ಶ್ರೇಯಾನಸ್ಮ್ಯಂ ಶ್ರೇಯಾನಾಸ್ಮೀತಿ । ತಾನ್ವರಿಷ್ಠಃ ಪ್ರಾಣ ಉವಾಚ' ಇತ್ಯಾದಿ ಪ್ರಕರಣದಲ್ಲಿ ಪ್ರಸಕ್ತವಾದ ಪ್ರಾಣಶಬ್ದವು ಅಭಿಮಾನಿದೇವತೆಯಲ್ಲಿಯೇ ಪ್ರಸಿದ್ಧವಾಗಿದೆ.

ಸಿದ್ಧಾಂತವೂ ಸಹ ತಪ್ಪು. ಹಿಂದೆ ಹೇಳಿದ ಪ್ರಕಾರ ಉಪಕ್ರಮಕ್ಕೆ ಅನುಗುಣವಾಗಿರುವ ಗುಣಜ್ಯೇಷ್ಠತ್ವರೂಪವಾದ ಉತ್ತಮತ್ವವನ್ನು ಭೂಮಶಬ್ದವು ಪ್ರತಿಪಾದಿಸುತ್ತಿದೆ. ಇದು ನಿರ್ಗುಣನಲ್ಲಿ ಯುಕ್ತವಾಗುವುದಿಲ್ಲ.

ಕಲ್ಪಿತವಾದ ಉತ್ತಮತ್ವವನ್ನು ನಿರ್ಗುಣಬ್ರಹ್ಮನಲ್ಲಿ ಹೇಳಬೇಕು. ಆದರೆ 'ಭೂಮಾ ತ್ವೇವ ವಿಜಿಜ್ಞಾಸಿತವ್ಯಃ' । 'ಭೂಮಾನಂ ಭಗವೋ ವಿಜಿಜ್ಞಾಸೇ' 'ಭೂಮಾ ಎಂದೇ ಜಿಜ್ಞಾಸೆ ಮಾಡಬೇಕು', 'ಭೂಮನೇ ಭಗವಂತನಾಗಿದ್ದಾನೆಂದು ಜಿಜ್ಞಾಸೆ ಮಾಡಬೇಕು' ಎಂಬಲ್ಲಿ ಕೊನೆಯ ಸ್ಥಾನದಲ್ಲಿ ಭೂಮನು ಮುಮುಕ್ಷುಗಳಿಂದ ಜಿಜ್ಞಾಸ್ಯನಾಗಿದ್ದಾನೆ. ಕಲ್ಪಿತವಾದ ಉತ್ತಮತ್ವವುಳ್ಳವನಿಗೆ ಮುಮುಕ್ಷುಜಿಜ್ಞಾಸ್ಯತ್ವವು ಕೂಡುವುದಿಲ್ಲವಾದ್ದರಿಂದ ಇದೂ ತಪ್ಪಾಗಬೇಕಾಗುತ್ತದೆ.

ಮತ್ತು 'ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬಲ್ಲಿ ಕಾಮಚಾರ ಮೊದಲಾದವು ಭೂಮಜ್ಞಾನದ ಫಲವೆಂದು ಶ್ರುತವಾಗಿದೆ. ಇದೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಸಕಲ ಲೋಕಗಳ ಕಾಮನೆಯ ನಿವೃತ್ತಿಯೇ ಫಲವಾಗಿರುವಾಗ, ಕಾಮಚಾರವು ಫಲವಾಗಲು ಸಾಧ್ಯವಿಲ್ಲ.

ಸೂತ್ರಾರ್ಥವನ್ನು ಅದ್ವೈತಿಗಳು ಹೀಗೆ ಹೇಳುತ್ತಾರೆ - 'ಸಮ್ಯಕ್‌ಪ್ರಸೀದತಿ ಅಸ್ಮಿನ್' ಎಂಬ ವ್ಯುತ್ಪತ್ತಿಯಿಂದ ಸಂಪೂರ್ಣವಾಗಿ ಪ್ರಸನ್ನವಾಗಿರುವ ಅವಸ್ಥೆಯೆಂದರೆ 'ಸುಷುಪ್ತಿ'. ಆದ್ದರಿಂದ 'ಸಂಪ್ರಸಾದ ಶಬ್ದಕ್ಕೆ 'ಸುಷುಪ್ತಿ' ಎಂದು ಅರ್ಥವಿದ್ದರೂ ಲಕ್ಷಣಯಾ 'ಸುಷುಪ್ತಿ' ಅವಸ್ಥೆಯಲ್ಲಿ ಜಾಗ್ರತವಾಗಿರುವ ಪ್ರಾಣವಾಯುವನ್ನು ವಿವಕ್ಷಿಸಬೇಕು. ಇಂತಹ ಸಂಪ್ರಸಾದ ಎನಿಸಿದ ಜಾಗ್ರತ್ಪ್ರಾಣಗಳಿಗಿಂತ ಅಧಿ = ಉತ್ತಮವೆಂದು, ಉಪದೇಶಾತ್ = ಉಪದೇಶಿಸಿರುವುದರಿಂದ ಭೂಮನಾದವನು ಬ್ರಹ್ಮನೇ ಆಗುತ್ತಾನೆ.

ಅದು ಸರಿಯಲ್ಲ. ನಾವು ಹೇಳುವಂತೆ 'ಸಂಪ್ರಸಾದ' ಶಬ್ದಕ್ಕೆ 'ಸುಖ' ಎಂಬರ್ಥದಲ್ಲಿ ಯೋಗಾರ್ಥವನ್ನು ಮಾಡಲು ಬರುವಾಗ ಪ್ರಾಣವಾಯುವಿನಲ್ಲಿ ಯೋಗಾರ್ಥದ ಮೂಲಕ ಲಕ್ಷಣಾ ಮಾಡುವುದು ತಪ್ಪಾಗುತ್ತದೆ.

ಮತ್ತು 'ಸಂಪ್ರಸಾದಾತ್' ಎಂಬಲ್ಲಿ ಮುಂದಿನ 'ಧರ್ಮೋಪಪತ್ತೇಶ್ಚ' ಎಂಬ ಸೂತ್ರದಲ್ಲಿರುವ 'ಚ' ಶಬ್ದವನ್ನು ಅನುಷಂಗ ಮಾಡಿಕೊಂಡಾಗ ಪೂರ್ಣಸುಖತ್ವವೆಂಬ ಮತ್ತೊಂದು ಹೇತುವೂ ಇದೆ ಎಂದು ವ್ಯಾಖ್ಯಾನಿಸಲು ಬರುತ್ತದೆ. ಅಂದರೆ 'ಸಂಪ್ರಸಾದಾತ್' ಪೂರ್ಣಸುಖ-ಸ್ವರೂಪನಾದ್ದರಿಂದ, 'ಅಧ್ಯುಪದೇಶಾತ್' ನಿರವಧಿಕವಾಗಿ ಉತ್ತಮನಾದ್ದರಿಂದ ಹೀಗೆ ಎರಡು ಹೇತುಗಳನ್ನು ಸೂತ್ರಕಾರರು ಹೇಳಿದ್ದಾರೆಂದು ನಾವು ವ್ಯಾಖ್ಯಾನಿಸುವಂತೆ ಸೂತ್ರಕ್ಕೆ ಅರ್ಥೈಸಬೇಕು. ಇದೇ ಸಮಂಜಸ. ಇದನ್ನು ಬಿಟ್ಟು 'ಅಧ್ಯುಪದೇಶಾತ್' ಎಂಬುದು ನಿರವಧಿಕವಾದ ಉತ್ತಮತ್ವವನ್ನು ಹೇಳುತ್ತಿದೆ. ಅದಕ್ಕೆ ಅವಧಿ ಯಾವುದು ? ಎಂಬ ಪ್ರಶ್ನೆಗೆ 'ಸಂಪ್ರಸಾದಾತ್' ಎಂಬುದು ಪ್ರಾಣವಾಯುವೆಂಬ ಅವಧಿಯನ್ನು ಹೇಳುತ್ತಿದೆಯೆಂಬುದಾಗಿ ನಿರವಧಿಕ ಉತ್ತಮತ್ವಕ್ಕೆ ಸಂಕೋಚಕವಾಗಿ 'ಸಂಪ್ರಸಾದಾತ್' ಎಂಬುದನ್ನು ವ್ಯಾಖ್ಯಾನಿಸುವುದು ತಪ್ಪಾಗುತ್ತದೆ.

ಪ್ರಥಮ ಸೂತ್ರದಲ್ಲಿ ನೀವು ಅನುಮಾನ ಸ್ವರೂಪವನ್ನು ಹೇಗೆ ತೋರಿಸುತ್ತೀರಿ? 'ಅಯಂ ಭೂಮಾ', 'ಪ್ರಾಣಃ ಭವಿತುಂ ನಾರ್ಹತಿ' 'ಪ್ರಾಣಾದೂರ್ಧ್ವಂ ಉಪದೇಶಾತ್' ಎಂದೋ, ಅಥವಾ 'ಅಯಂ ಭೂಮಾ ಬ್ರಹ್ಮೈವ ಪ್ರಾಣಾದೂರ್ಧ್ವಂ ಉಪದೇಶಾತ್' ಎಂದೋ? ಇಲ್ಲಿ ಉಪದೇಶವು ಭೂಮನು ಪ್ರಾಣನಲ್ಲ ಎಂದು ಹೇಳಿ, ಇದು ಪರಪಕ್ಷನಿರಾಸಕವಾದ ಹೇತುವೆನ್ನುವುದು ತಪ್ಪಾಗುತ್ತದೆ. ಏಕೆಂದರೆ ಸೂತ್ರಗಳೆಲ್ಲವೂ ತತ್ತ್ವಜ್ಞಾನಕ್ಕೋಸ್ಕರ ವಾದಪ್ರಕ್ರಿಯೆಯಿಂದ ಪ್ರವೃತ್ತವಾಗಿವೆ. ಆದ್ದರಿಂದ ಸೂತ್ರದಲ್ಲಿ ಪ್ರಥಮಾಕಾಂಕ್ಷಿತವಾದದ್ದು ಯಾವುದು ಎಂದರೆ ಸ್ವಪಕ್ಷಸಾಧಕವಾದ ಹೇತುತ್ವ. ಅಂದರೆ 'ಸಂಪ್ರಸಾದಾತ್' ಎಂಬುದನ್ನು ಸ್ವಪಕ್ಷಸಾಧಕಹೇತುವೆಂದು ಹೇಳಿದಾಗ ಅಧ್ಯಾಹಾರವನ್ನು ಮಾಡಬೇಕಾಗಿಲ್ಲ. ಇದಕ್ಕೆ ವಿಪರೀತವಾಗಿ ಮಾಡಬಾರದು ಹಾಗೂ ಭೂಮನು ಪ್ರಾಣನಲ್ಲ ಎಂಬುದಾಗಿ ಪರಪಕ್ಷ ನಿರಾಸಮಾಡುವುದಕ್ಕಾಗಿ ಹೇತುವೆಂದು ಹೇಳಿದರೆ ಅಧ್ಯಾಹಾರ ಮಾಡಬೇಕಾದಂತೆ ಈಗ ಮಾಡಬೇಕಾಗಿಲ್ಲ.

ಸ್ವಪಕ್ಷಸಾಧನೆ ಮಾಡುವುದಾದಲ್ಲಿ ಅಧ್ಯಾಹಾರವನ್ನು ಏಕೆ ಮಾಡಬೇಕಾಗಿಲ್ಲ ಎಂದರೆ, ಸಮನ್ವಯ ಸೂತ್ರದಲ್ಲಿರುವ 'ತತ್' ಎಂಬ ಪದವು ಅಧ್ಯಾಯ ಮುಗಿಯುವ ತನಕ ಪ್ರತಿಯೊಂದು ಸೂತ್ರಗಳಲ್ಲಿಯೂ ಅನುಷಂಗವಾಗುತ್ತದೆ. ಆದ್ದರಿಂದ ಭೂಮಾ ತತ್ = ಬ್ರಹ್ಮ ಎಂದು ಅನ್ವಯವಾಗುತ್ತದೆ. ಆದ್ದರಿಂದಲೇ 'ಆನಂದಮಯ' ಮೊದಲಾದ ಸ್ವಪಕ್ಷಸಾಧಕ-ಸೂತ್ರಗಳಲ್ಲಿ ಸೂತ್ರಕಾರರು ಪಕ್ಷ ಹಾಗೂ ಹೇತುಗಳೆರಡನ್ನೇ ಹೇಳಿರುತ್ತಾರೆ. 'ನೇತರೋಽನುಪಪತ್ತೇಃ' ಇತ್ಯಾದಿಯಾದ ಕೆಲವು ಪರಪಕ್ಷನಿರಾಸಕ ಸೂತ್ರಗಳಲ್ಲಿ ಸಾಧ್ಯವನ್ನೂ ಹೇಳಿರುತ್ತಾರೆ. ಪ್ರಕೃತ ಪರಪಕ್ಷ ನಿರಾಸಕ್ಕೋಸ್ಕರ ಈ ಸೂತ್ರವೆನ್ನುವುದಾದರೆ 'ನ ಪ್ರಾಣಃ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ.

'ಸಂಪ್ರಸಾದಾತ್' ಎಂಬುದನ್ನು ಭೂಮನನ್ನು ಬ್ರಹ್ಮನೆನ್ನಲು ಹೇತು ಮಾಡಿದರೆ ವ್ಯಭಿಚಾರ ಬರುತ್ತದೆ. ಏಕೆಂದರೆ ಆನಂದಮಯ ಪ್ರಕರಣದಲ್ಲಿ ಮನೋಮಯಾದಿಗಳು ಪ್ರಾಣನಿಗಿಂತ ಉತ್ತಮವಾಗಿವೆಯೆಂದು ಹೇಳಲ್ಪಟ್ಟಿದೆ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವು ಮನೋಮಯಾದಿಗಳಲ್ಲಿ ಕೇಳಿಸುತ್ತಿದ್ದರೂ ಅವುಗಳನ್ನು ಬ್ರಹ್ಮವೆಂದು ಅದ್ವೈತಿಗಳು ಒಪ್ಪಿಲ್ಲ. ಮತ್ತು ಭೂಮಪ್ರಕರಣದಲ್ಲಿಯೂ ಪ್ರಾಣನಿಗಿಂತ 'ಸತ್ಯಂ ವಿಜಿಜ್ಞಾಸಿತವ್ಯಮ್' ಎಂಬಲ್ಲಿರುವ 'ಸತ್ಯ' ಶಬ್ದದ ಅರ್ಥನಾದ ಬ್ರಹ್ಮನನ್ನು ಉತ್ತಮನೆಂದು ಹೇಳಿದಂತೆ 'ವಿಜ್ಞಾನಂ ತ್ವೇವ

ವಿಜಿಜ್ಞಾಸಿತವ್ಯಂ, ಮತಿಸ್ತ್ವೇವ ವಿಜಿಜ್ಞಾಸಿತವ್ಯಾ, ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯಾ' ಇತ್ಯಾದಿಯಾಗಿ ಹೇಳಿರುವುದರಿಂದ ವಿಜ್ಞಾನ, ಮತಿ, ಶ್ರದ್ಧಾ, ಕೃತಿ, ನಿಷ್ಠಾ ಇವುಗಳನ್ನೂ ಸಹ ಪ್ರಾಣನಿಗಿಂತ ಉತ್ತಮವೆಂದು ಹೇಳಲಾಗಿದೆ. ಈ ವಿಜ್ಞಾನಾದಿಗಳನ್ನು ಅದ್ವೈತಿಗಳು ಬ್ರಹ್ಮನೆಂದು ಒಪ್ಪಿರುವುದಿಲ್ಲ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವು ಇದ್ದರೂ ಸಹ ಬ್ರಹ್ಮತ್ವವಿಲ್ಲದ ಕಾರಣ ಹೇತವು ವ್ಯಭಿಚರಿತವಾಗಿದೆ.

'ಧರ್ಮೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ - 'ಯತ್ರ ನಾನ್ಯತ್ಪಶ್ಯತಿ' ಇತ್ಯಾದಿ ಶ್ರುತಿಯಲ್ಲಿ ಚಾಕ್ಷುಷವ್ಯವಹಾರಾದಿಗಳನ್ನು ನಿಷೇಧ ಮಾಡಿದ್ದರಿಂದ ವ್ಯವಹಾರಾಭಾವವೆಂಬ ನಿರ್ವಿಶೇಷ ಬ್ರಹ್ಮನ ಧರ್ಮವು ಶ್ರುತವಾಗಿದೆ. ಆದ್ದರಿಂದ ನಿರ್ವಿಶೇಷ ಬ್ರಹ್ಮನೇ ಭೂಮನಾಗುತ್ತಾನೆಂದು ಎರಡನೆಯ ಸೂತ್ರಾರ್ಥ.

ಇದೂ ತಪ್ಪು. ವ್ಯವಹಾರವನ್ನು ಶ್ರುತಿಯು ನಿಷೇಧಿಸಿದೆ ಎಂಬುದೇ ಸರಿಯಲ್ಲ. 'ಏವಂ ಪಶ್ಯನ್ನೇವಂ ವಿಜಾನನ್ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬ ವಾಕ್ಯದಲ್ಲಿ ದರ್ಶನಾದಿ ವ್ಯವಹಾರಗಳನ್ನೂ ಶ್ರುತಿಯು ವಿಧಿಸುತ್ತಿದೆ.

'ನಾನ್ಯತ್ಪಶ್ಯತಿ' ಎಂಬಲ್ಲಿ ಭೂಮವಿಷಯಕವಾದ ದರ್ಶನವು ಬೇರೆಯವರಿಗಿಲ್ಲವೆಂದು ಹೇಳಲಾಗಿದೆ ಹೊರತು, ಭೂಮನಿಗೆ ದ್ರಷ್ಟೃತ್ವವನ್ನು ನಿಷೇಧಿಸಿಲ್ಲ. ಅವನಿಗೆ ದ್ರಷ್ಟೃತ್ವವು ಶ್ರುತಿಗೆ ಸಮ್ಮತವೇ ಆಗಿದೆ. ಅಥವಾ ಶ್ರುತಿಯು ಅನ್ಯದರ್ಶನವನ್ನು ನಿಷೇಧ ಮಾಡುತ್ತಿದೆ ಹೊರತು, ಅನ್ಯವನ್ನೇ ನಿಷೇಧಿಸುತ್ತಿಲ್ಲ. ಅನ್ಯಪದಾರ್ಥವನ್ನು ನಿಷೇಧ ಮಾಡಿದ್ದಲ್ಲಿ ಅದ್ವಿತೀಯತ್ವವು ನಿರ್ವಿಶೇಷನ ಬ್ರಹ್ಮನ ಧರ್ಮವಾಗುವ ಕಾರಣ ಅವನ ಲಕ್ಷಣವೆಂದು ಹೇಳಬಹುದಿತ್ತು. ಆದರೆ ಅನ್ಯಪದಾರ್ಥವನ್ನು ಶ್ರುತಿಯು ಅನುಮೋದಿಸುತ್ತಿದೆ.

ಪ್ರತಿಯೊಂದು ಅಧಿಕರಣಗಳಂತೆ ಇಲ್ಲಿಯೂ 'ಧರ್ಮೋಪಪತ್ತೇಃ' ಎಂದು ಹೇಳಿರುವುದರಿಂದ ಅದ್ವೈತಿಗಳ ನಿರ್ಧರ್ಮಕತ್ವ ಪ್ರತಿಪಾದನೆಗೆ ಸೂತ್ರವು ಪ್ರತಿಕೂಲವೇ ಆಗಿದೆ ಹೊರತು, ಅನುಕೂಲವಾಗಿಲ್ಲವೆಂಬ ವಿಚಾರವು ಅತ್ಯಂತ ಸ್ಪಷ್ಟ.

ರಾಮಾನುಜ ಭಾಷ್ಯದ ಅಧಿಕರಣ ವಿಮರ್ಶೆ - ರಾಮಾನುಜರು ಭೂಮಾಧಿಕರಣದ ಪೂರ್ವಪಕ್ಷವನ್ನು ಹೀಗೆ ಮಾಡಿರುತ್ತಾರೆ - ಭೂಮನು ಪ್ರಾಣನೇ ಆಗಿದ್ದಾನೆ. ಆದರೆ ಪ್ರಾಣ ಶಬ್ದವು ಪ್ರಾಣಶಬ್ದದಿಂದ ಸಹಚಾರಿತನಾದ ಜೀವನಲ್ಲಿ ಲಾಕ್ಷಣಿಕ ವಾಗಿದೆ. ಏಕೆಂದರೆ

'ಪ್ರಾಣೋಹ ಪಿತಾ' ಇತ್ಯಾದಿ ವಾಕ್ಯದಲ್ಲಿ ಪ್ರಾಣನನ್ನು ತಂದೆಯೆಂದು ಕರೆಯಲಾಗಿದೆ. ಆದ್ದರಿಂದ ಜಡವಾದ ಪ್ರಾಣವು ಪ್ರಾಣಶಬ್ದದಿಂದ ವಾಚ್ಯವಾಗುವುದಿಲ್ಲ.

'ಪಿತೃಹಾ ವೈ ತ್ವಮಸಿ' ಇತ್ಯಾದಿ ವಾಕ್ಯದಲ್ಲಿ ಪ್ರಾಣಸಹಿತವಾದ ಶರೀರವನ್ನು ಹಿಂಸೆಗೆ ಯೋಗ್ಯವಾಗಿದೆಯೆನ್ನಲಾಗಿದೆ. ಕೇವಲ ಜಡವಾದ ಪ್ರಾಣಕ್ಕೆ ಪಿತೃತ್ವವಾಗಲೀ ಅಥವಾ ಹಿಂಸ್ಯತ್ವವಾಗಲೀ ಯುಕ್ತವಾಗುವುದಿಲ್ಲ. ಆದ್ದರಿಂದ ಜೀವನೇ ಪ್ರಾಣಶಬ್ದವಾಚ್ಯನಾಗಿದ್ದಾನೆಂದು ಪೂರ್ವಪಕ್ಷ.

ರಾಮಾನುಜರ ಈ ಅಧಿಕರಣದ ಪೂರ್ವಪಕ್ಷವೇ ಸರಿಯಿಲ್ಲ. ಏಕೆಂದರೆ ಶ್ರುತಿಪ್ರಸಿದ್ಧಿಗೆ ಅನುಸಾರಿಯಾಗಿ ಪ್ರಾಣಶಬ್ದವು ಅಭಿಮಾನಿದೇವತೆಯನ್ನೇ ಪ್ರತಿಪಾದಿಸುತ್ತದೆ. ಹೀಗೆ ಹೇಳಿದಾಗಲೂ 'ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಪಿತೃತ್ವಾದಿಗಳೂ ಸಹ ಯುಕ್ತವಾಗುತ್ತದೆ. ಆದ್ದರಿಂದ ಜೀವನಲ್ಲಿ ಲಕ್ಷಣವನ್ನೇಕೆ ಮಾಡಬೇಕು.

'ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್' ಇತ್ಯಾದಿ ವಾಕ್ಯದಲ್ಲಿ ಆಚಾರ್ಯರೇ ಮೊದಲಾದ ಜೀವರುಗಳು ಪ್ರಕೃತರಾಗಿದ್ದಾರೆ. ಅಂತಹ ಜೀವರ ಪ್ರಾಣವು ಉತ್ಕ್ರಾಂತವಾಗುತ್ತದೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಪ್ರಾಣನು ಜೀವನಾಗಲು ಸಾಧ್ಯವಿಲ್ಲ. ಏಕೆಂದರೆ ಜೀವನನ್ನೇ ಪ್ರಾಣನೆಂದರೆ 'ಪ್ರಾಣನು ಪ್ರಾಣನಿಂದ ಉತ್ಕ್ರಾಂತನಾದನು' ಎಂದು ಹೇಳಿದಂತಾಗುತ್ತದೆ. ಆದರೆ ತಾನು ತನ್ನಿಂದ ಉತ್ಕ್ರಾಂತನಾಗಲು ಎಂದೂ ಸಹ ಸಾಧ್ಯವಿಲ್ಲ.

ಆದ್ದರಿಂದಲೇ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ'' ಎಂಬ ಶ್ರುತಿಯಲ್ಲಿರುವ 'ಸಂಪ್ರಸಾದ' ಶಬ್ದವು ಜೀವನನ್ನು ಪ್ರತಿಪಾದಿಸುತ್ತದೆ. ಅಂತಹ ಜೀವನ ದೆಸೆಯಿಂದ 'ಅಧ್ಯುಪದೇಶಾತ್' ಅಧಿಕನೆಂಬ ಉಪದೇಶವಿರುವ ಪ್ರಯುಕ್ತ ಬ್ರಹ್ಮನೇ ಭೂಮನಾಗುತ್ತಾನೆಂಬ ರಾಮಾನುಜರ ಸೂತ್ರವ್ಯಾಖ್ಯಾನವೂ ಸಹ ನಿರಾಸಿತವಾಯಿತು.

ಒಂದು ವೇಳೆ 'ಸಂಪ್ರಸಾದ' ಶಬ್ದಕ್ಕೆ ಜೀವನೆಂದು ಅರ್ಥೈಸುವುದಾದರೆ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಜೀವನಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಮತ್ತು ಸಾಮಾನ್ಯನಾದ ಜೀವನಿಗಿಂತ ಉತ್ತಮತ್ವವನ್ನು ಹೇಳಿದ ಮಾತ್ರಕ್ಕೆ ಭೂಮನು ಬ್ರಹ್ಮನೇ ಆಗುತ್ತಾನೆಂದು ಸಿದ್ಧವಾಗುವುದಿಲ್ಲ. ಅಷ್ಟೇ ಅಲ್ಲದೇ, ನಿಮ್ಮ ಪ್ರಕಾರವೇ ಜೀವನಿಗಿಂತ ಉತ್ತಮತ್ವವೂ ಶ್ರದ್ಧಾ ಮೊದಲಾದವುಗಳಲ್ಲಿಯೂ ಹೇಳಲ್ಪಟ್ಟಿದೆ, ಆದರೆ ಅವುಗಳಲ್ಲಿ ಬ್ರಹ್ಮತ್ವವಿಲ್ಲದ ಕಾರಣ ವ್ಯಭಿಚಾರವು ಬರುತ್ತದೆ.

'ಸಂಪ್ರಸಾದೋಽಸ್ಮಾತ್' ಎಂಬ ಶ್ರುತಿಯಲ್ಲಿ ಶರೀರದಿಂದ ಹೊರಡುವಿಕೆಯೆಂಬ ಲಿಂಗದಿಂದ 'ಸಂಪ್ರಸಾದ' ಶಬ್ದಕ್ಕೆ ಅಲ್ಪಸುಖವುಳ್ಳ ಜೀವನಲ್ಲಿ ಯಾವುದೋ ಒಂದು ರೀತಿ ಯೌಗಿಕಾರ್ಥವನ್ನು ಮಾಡಿದರೂ ಸೂತ್ರದಲ್ಲಿರುವ 'ಸಂಪ್ರಸಾದ' ಶಬ್ದಕ್ಕೆ ಸ್ವಲ್ಪಸುಖವುಳ್ಳ ಜೀವನೆಂಬರ್ಥವನ್ನು ಹೇಳಲು ಯಾವುದೇ ಕಾರಣವಿಲ್ಲ.

ಮತ್ತು 'ನಾಮಾಭಿಮಾನಿನೀ ಚೋಷಾ ತಸ್ಯಾ ಬ್ರಹ್ಮ ಪರಂ ಸ್ಮರ' ಇತ್ಯಾದಿ ಸ್ಮೃತಿಯಿಂದ ನಾಮಾದಿಗಳೂ ಸಹ ಜೀವನಿಗಿಂತ ಉತ್ತಮವೆಂದು ಹೇಳಲ್ಪಟ್ಟಿವೆ. ಆದ್ದರಿಂದ ಜೀವಾಧಿಕ್ಯೇನ ಉಪದೇಶವು ನಾಮಾದಿಗಳಲ್ಲಿದ್ದರೂ ಬ್ರಹ್ಮತ್ವವು ಇಲ್ಲದ ಕಾರಣ ವ್ಯಭಿಚಾರ ಬರುತ್ತದೆ.

ಇಲ್ಲಿಗೆ ಭೂಮಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಕ್ಷರಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅಕ್ಷರಾಧಿಕರಣ

## ಬ್ರಹ್ಮಸೂತ್ರ

### ।। अथ अक्षराधिकरणम् ।।

'ಅಕ್ಷರಮಂಬರಾಂತಧೃತೇಃ' ಎಂಬ ಸೂತ್ರವ್ಯಾಖ್ಯಾನ

**ब्रह्मसूत्रम् — ।। अक्षरमम्बरान्तधृतेः ।। १० ।।**

ಸೂತ್ರಾರ್ಥ - 'ಏತದ್ವಾ ಅಕ್ಷರಸ್ಯ' ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ ಕೇಳಿಸುತ್ತಿರುವ ಅಕ್ಷರನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ' ಎಂಬ ಬೃಹದಾರಣ್ಯಕ ವಾಕ್ಯದಂತೆ ಪೃಥಿವಿಯಿಂದಾರಂಭಿಸಿ 'ಆಕಾಶ' ಪದವಾಚ್ಯಳಾದ ಲಕ್ಷ್ಮೀದೇವಿಯವರೆಗೆ ಸಕಲ ವಸ್ತುಗಳನ್ನು ಧಾರಣೆ ಮಾಡಿದ್ದರಿಂದ.

ಅರ್ಥ -- ಅಕ್ಷರಂ = 'ತದ್ವಾ ಏತತ್' ಎಂಬಲ್ಲಿ ಕೇಳಿಸುತ್ತಿರುವ 'ಅಕ್ಷರ' ಶಬ್ದವಾಚ್ಯನಾದವನು ಬ್ರಹ್ಮನೇ; ಹೊರತು ಚಿತ್ಪ್ರಕೃತಿಯಲ್ಲ. ಏಕೆಂದರೆ ಅಂಬರಾಂತಧೃತೇಃ = ಇಂತಹ ಅಕ್ಷರನಲ್ಲಿ 'ಏತಸ್ಮಿನ್ ಖಲ್ವಕ್ಷರೇ' ಎಂಬ ಬೃಹದಾರಣ್ಯಕದಲ್ಲಿ ಆಕಾಶದವರೆಗೆ (ಆಕಾಶಪದವಾಚ್ಯಳಾದ ಲಕ್ಷ್ಮೀದೇವಿಯವರೆಗೆ) ಸಕಲ ಪದಾರ್ಥಗಳನ್ನು ಧಾರಣೆ ಮಾಡಿದ್ದಾನೆಂದು ಹೇಳಿದ್ದರಿಂದ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಮಹಾಲಕ್ಷ್ಮೀ ಅಕ್ಷರಳೆಂದು ಪೂರ್ವಪಕ್ಷ

**ब्रह्मसूत्रभाष्यम् – अदृश्यत्वादिगुणा (विष्णोरुक्ताः) । 'अदृष्टं द्रष्टृश्रुतं श्रोतृ' (बृ.५-८-११) इत्यादिना । 'अहं सोममाहनसं बिभर्मि' (ऋ.१०-१२५-२.) इत्यादेश्च तस्यापि सम्भवान्मध्यमाक्षरस्योक्ता इति ।**

ಅನುವಾದ - ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವವೇ ಮೊದಲಾದ ಗುಣಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಅದೇ ಗುಣಗಳು ಅಕ್ಷರತತ್ವದಲ್ಲಿದೆ ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿರುವ 'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯಗಳು ಹೇಳುತ್ತವೆ. 'ಅಹಂ ಸೋಮಮಾಹನಸಂ ಬಿಭರ್ಮಿ' ಇತ್ಯಾದಿಶ್ರುತಿಯಲ್ಲಿ ಲಕ್ಷ್ಮೀದೇವಿಗೂ ಸಹ ಅದೇ ಗುಣಗಳನ್ನು ಹೇಳಲಾಗಿದೆ. ಆದ್ದರಿಂದ ಅದೃಶ್ಯತ್ವಾದಿ ಗುಣಗಳುಳ್ಳವಳು ಅಕ್ಷರಳೆನಿಸಿರುವ ಲಕ್ಷ್ಮೀದೇವಿಯೇ ಆಗಿರಬಹುದಲ್ಲವೆ?

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಸಾಧಿಸುತ್ತಿದ್ದಾರೆ. ಶ್ರುತ್ಯಾದಿ ಸಂಗತಿಯನ್ನು ಹಾಗೂ ವಿಷಯವಾಕ್ಯವನ್ನೂ ಸಹ ಉದಾಹರಿಸುತ್ತಾ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಅದೃಶ್ಯತ್ವಾದಿ' ಇವೇ ಮೊದಲಾದ ಭಾಷ್ಯದ ವಾಕ್ಯಗಳಿಂದ ತೋರಿಸುತ್ತಿದ್ದಾರೆ

ಅದೃಶ್ಯತ್ವಾದಿಗುಣಾಃ - ಅದೃಶ್ಯತ್ವವೇ ಮೊದಲಾದ ಗುಣಗಳು (ವಿಷ್ಣೋಃ ಉಕ್ತಾಃ = ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಮರ್ಥಿಸಲಾಯಿತು.) ಆದರೆ ಅದೇ ಅದೃಶ್ಯತ್ವಾದಿಗುಣಗಳು ಅಕ್ಷರನಲ್ಲಿ ಕೇಳಿಸುತ್ತಿವೆ. ಅಂತಹ ಅಕ್ಷರನು ಯಾರು ಎಂದರೆ ಅದೃಷ್ಟಂ = ಯಾರಿಂದಲೂ

ನೋಡಲು ಸಾಧ್ಯವಾಗದ, ದ್ರಷ್ಟ್ರ = ಸ್ವಯಂ ಎಲ್ಲವನ್ನೂ ನೋಡುವ, ಅಶ್ರುತಂ = ಯಾರಿಂದಲೂ ಕೇಳಿ ತಿಳಿಯಲು ಸಾಧ್ಯವಾಗದ ಶ್ರೋತೃ = ಎಲ್ಲವನ್ನೂ ಕೇಳುವ ವಸ್ತು ಯಾವುದಿದೆಯೋ ಅದೇ ಅಕ್ಷರವು, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ ಅಕ್ಷರತತ್ವವನ್ನು ವರ್ಣಿಸಲಾಗಿದೆ. ಋಗ್ವೇದದಲ್ಲಿ ಅಹಂ = ನಾನೇ, ಆಹನಸಂ = ಚಂದ್ರನೇ ಅಭಿಮಾನಿಯಾಗಿರುವ ಲತೆಯ ಮೂಲಕ ಚೆನ್ನಾಗಿ ಹಿಂಡಲ್ಪಟ್ಟ, ಸೋಮಂ = ಸೋಮಲತೆಯ ಅಭಿಮಾನಿಯಾದ ಚಂದ್ರನನ್ನು, ಬಿಭರ್ಮಿ= ಧರಿಸಿದವಳಾಗಿದ್ದೇನೆ, ಇತ್ಯಾದೇಶ್ಚ = ಇದೇ ರೀತಿಯ ಪ್ರಮಾಣಗಳಿಂದಲೂ, ತಸ್ಯಾಪಿ = ಸೃಷ್ಟ್ಯಾದಿಕ್ರಿಯಾಗಳುಳ್ಳ ಲಕ್ಷ್ಮೀದೇವಿಗೂ ಸಹ, ಸಂಭವಾತ್ = ಅಕ್ಷರಶಬ್ದವಾಚ್ಯತ್ವವು ಉಕ್ತವಾಗುತ್ತದೆ. ಆದ್ದರಿಂದ ಮಧ್ಯಮಾಕ್ಷರಸ್ಯ = ಮಧ್ಯಮಾಕ್ಷರಳೆಂದು ಕರೆಸಿಕೊಳ್ಳುವ ಲಕ್ಷ್ಮೀದೇವಿಗೆ, ಉಕ್ತಾಃ = ಈ ಗುಣಗಳು ಹೇಳಲ್ಪಡುತ್ತವೆ.

## ಅಕ್ಷರ ಎಂದರೆ ಮಹಾವಿಷ್ಣುವೇ ?

**ब्रह्मसूत्रभाष्यम् — अतो ब्रूते**

**।। अक्षरमम्बरान्तधृतेः ।।**

**'एतस्मिन्नु खल्वक्षरे गार्ग्याकाश ओतश्च प्रोतश्च' (बृ. ५-८-११) इत्यम्बरान्तस्य सर्वस्य धृतेर्ब्रह्मैवाक्षरम् ।**

ಅನುವಾದ - ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು 'ಅಕ್ಷರಮಂಬರಾಂತಧೃತೇಃ' ಎಂದು ಹೇಳಿರುತ್ತಾರೆ ಮತ್ತು 'ಏತಸ್ಮಿನ್‌ನು ಖಲ್ವಕ್ಷರೇ' ಇತ್ಯಾದಿ ವಾಕ್ಯದಿಂದ ಸಕಲಪದಾರ್ಥಗಳನ್ನೂ ಧರಿಸಿರುವಿಕೆ ಎಂಬ ಸಾಮರ್ಥ್ಯವನ್ನು ಹೇಳಿರುವುದರಿಂದ ಭಗವಂತನೇ ಅಕ್ಷರನೆನಿಸುತ್ತಾನೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇ ಗಾರ್ಗಿ! = ಎಲೈ ಗಾರ್ಗಿಯೇ! ಏತಸ್ಮಿನ್ನು ಖಲ್ವಕ್ಷರೇ = ಈ ಅಕ್ಷರನಲ್ಲಿಯೇ, ಆಕಾಶಃ = ಆಕಾಶಾಂತವಾದ ಸಕಲಪದಾರ್ಥವು, ಓತಶ್ಚ ಪ್ರೋತಶ್ಚ = ಒಳಗೂ ಹೊರಗೂ ಆಶ್ರಯಿಸಿಕೊಂಡಿದೆ, ಇತಿ = ಹೀಗೆ, ಅಂಬರಾಂತಸ್ಯ = ಆಕಾಶದ ತನಕ ಇರುವ, ಸರ್ವಸ್ಯ = ಸಕಲ ಪದಾರ್ಥಗಳ, ಧೃತೇಃ = ಧರಿಸಿರುವಿಕೆ ಎಂಬ ಗುಣವನ್ನು ಹೇಳಿರುವುದರಿಂದ, ಅಕ್ಷರಮ್ = ಅಕ್ಷರ ಶಬ್ದವಾಚ್ಯನಾದವನು, ಬ್ರಹ್ಮೈವ = ಪರಬ್ರಹ್ಮನಾದ ವಿಷ್ಣುವೇ ಆಗುತ್ತಾನೆ.

### ಸರ್ವಾಧಾರನೇ ಅಕ್ಷರ

**ब्रह्मसूत्रभाष्यम् – 'य उ त्रिधातु पृथिवीमुत द्यामेको दाधार भुवनानि विश्वा ।'**

**(ऋ. १-१५४-५)**

ಅನುವಾದ - ಯಾವ ವ್ಯಕ್ತಿಯು ಪ್ರಕೃತಿ, ಪುರುಷ, ಕಾಲ ಇವುಗಳನ್ನು ಹಾಗೂ ಶ್ರೀ, ಭೂ, ದುರ್ಗಾರೂಪಗಳನ್ನು ಧರಿಸಿದ್ದಾನೋ, ಅವನೇ ಭೂಮಿಯನ್ನೂ, ಅಂತರಿಕ್ಷವನ್ನೂ, ಸಕಲಲೋಕಗಳನ್ನೂ ಸಹ ಧರಿಸಿದ್ದಾನೆ. ಅಂತಹವನು ವಿಷ್ಣುವೇ ಆಗಿದ್ದಾನೆ ಎಂದು ತಿಳಿಯಬೇಕು.

ಪ್ರತಿಪದಾರ್ಥ -- ಸರ್ವಾಧಾರತ್ವವು ಹೇಗೆ ವಿಷ್ಣುವಿಗೆ ನಿರ್ಣಾಯಕ-ವಾಗುತ್ತದೆ ? ಎಂಬ ಪ್ರಶ್ನೆಗೆ ಸರ್ವಾಧಾರತ್ವವು ವಿಷ್ಣುಲಿಂಗವೆಂದು ಶ್ರುತಿಸಿದ್ಧವಾಗಿದೆ ಎಂಬ ವಿಚಾರವನ್ನು ತೋರಿಸುತ್ತಿದ್ದಾರೆ.

ಯ ಉ = ಯಾವ ವ್ಯಕ್ತಿಯು, ತ್ರಿಧಾತು = ಶ್ರೀ, ಭೂ, ದುರ್ಗಾರೂಪಗಳಿಗೆ, ಪ್ರಕೃತಿ, ಪುರುಷ, ಕಾಲ ಎಂಬ ಮೂರು ಧಾತುಗಳಿಗೆ ಆಧಾರನೋ, ಏಕಃ = ಅವನೊಬ್ಬನೇ, ಪೃಥಿವೀಮ್ = ಭೂಮಿಯನ್ನು, ಉತ = ಮತ್ತು, ದ್ಯಾಂ = ಅಂತರಿಕ್ಷವನ್ನು, ವಿಶ್ವಾ = ಎಲ್ಲ, ಭುವನಾನಿ = ಲೋಕಗಳನ್ನು ದಧಾರ = ಧರಿಸಿದ್ದಾನೋ ಅವನು ವಿಷ್ಣುವೇ ಆಗಿದ್ದಾನೆ.

## ಸರ್ವಾಧಾರನಾದವನು ಮಹಾವಿಷ್ಣು

**ब्रह्मसूत्रभाष्यम् – 'भर्ता सन् भ्रियमाणो बिभर्ति एको देवो बहुधा निविष्टः । (यदा भारं तन्द्रयते स भर्तुम् । परास्य भारं पुनरस्तमेति ।।') (तै.आ. ३-१-४.)**

ಅನುವಾದ - ಒಬ್ಬನೇ ವಿಷ್ಣು ಎಲ್ಲರ ಹೃದಯದಲ್ಲಿ ಧರಿಸಲ್ಪಟ್ಟವನಾಗಿದ್ದರೂ ತನ್ನನ್ನು ಹೊತ್ತುಕೊಂಡು ಎಲ್ಲವನ್ನೂ ಹೊತ್ತುನಿಂತಿದ್ದಾನೆ. ಇದು ವಿರುದ್ಧವಲ್ಲ. ಅನೇಕ ರೂಪವಿರುವುದರಿಂದ ಒಬ್ಬನಲ್ಲಿಯೇ ಈ ಧರ್ಮಗಳು ಉಪಪನ್ನವಾಗಬಹುದು. ಯಾವಾಗ ಈ ಭಾರವನ್ನು ಕೆಳಗಡೆ ಇಟ್ಟು ಪುನಃ ಹೊತ್ತುಕೊಳ್ಳಲು ಬಯಸುವುದಿಲ್ಲವೋ ಆವಾಗ ಈ ಜಗತ್ತು ನಾಶವನ್ನು ಹೊಂದುತ್ತದೆ.

ಪ್ರತಿಪದಾರ್ಥ -- ಜಗತ್ತಿಗೂ ಈಶನಿಗೂ ಏನು ವ್ಯತ್ಯಾಸ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ದೇವಃ = ಕ್ರೀಡಾದಿಗುಣವಿಶಿಷ್ಟನಾದ ಭಗವಂತನು, ಏಕಃ = ಒಬ್ಬನೇ, ಭರ್ತಾ = ಸಕಲಜಗತ್ತನ್ನು ಧರಿಸಿದವನಾಗಿ, ಬಹುಧಾ = ಅನೇಕರೂಪಗಳಿಂದ, ನಿವಿಷ್ಟಃ = ವ್ಯಾಪ್ತನಾಗಿದ್ದಾನೆ, ಭ್ರಿಯಮಾಣಃ = ಸಕಲಜೀವರಿಂದ ಧರಿಸಲ್ಪಟ್ಟವನಾಗಿ, ಬಿಭರ್ತಿ = ಜಗತ್ತಿನ ಧಾರಣೆಯನ್ನು ಮಾಡಿರುತ್ತಾನೆ, ಸಃ = ಆ ಪರಮಾತ್ಮನು, (ಯದಾ = ಯಾವಾಗ, ಭಾರಂ = ಅತ್ಯಂತ ಭಾರವಾದ ಪ್ರಪಂಚವನ್ನು, ಪರಾಸ್ಯ = ಕೆಳಗಿಟ್ಟು, ಪುನಃ = ಮತ್ತೆ, ತಂ ಭಾರಂ = ಆ ಪ್ರಪಂಚದ ಭಾರವನ್ನು, ಭರ್ತುಂ = ಧರಿಸಲು, ತಂದ್ರಯತೇ = ಇಚ್ಛಿಸುವುದಿಲ್ಲವೋ, ತದಾ = ಆವಾಗ, ಅಸೌ = ಈ ಪ್ರಪಂಚದ ಭಾರವು, ಅಸ್ತಮೇತಿ = ನಾಶವನ್ನು ಹೊಂದುತ್ತದೆ.)

## ಮಹಾವಿಷ್ಣುವೇ ಅಕ್ಷರನೆನ್ನಲು ಅನೇಕ ಶ್ರುತಿಗಳು

**ब्रह्मसूत्रभाष्यम् – 'यस्मिन्निदं सं च वि चैधि सर्वं यस्मिन् देवा अधि विश्वे निषेदुः ।' (महाना. १३.) इत्यादिश्रुतेः।**

ಅನುವಾದ - ಯಾವ ವಿಷ್ಣುವಿನಿಂದ ಈ ಜಗತ್ತು ಅನೇಕ ವಿಧದಲ್ಲಿ ಬೆಳೆಯುತ್ತದೋ, ಯಾವ ವಿಷ್ಣುವಿನಲ್ಲಿ ಸಕಲ ದೇವತೆಗಳು ಆಶ್ರಯವನ್ನು ಪಡೆದಿದ್ದಾರೋ ಅವನೇ ಈ ಜಗತ್ತಿಗೆ ಸಂಹಾರಕನು.

ಪ್ರತಿಪದಾರ್ಥ -- ಯಸ್ಮಿನ್ = ಯಾವ ಪರಮಾತ್ಮನಲ್ಲಿ, ಇದಂ ಸರ್ವಂ= ಈ ಸಮಸ್ತ ಪ್ರಪಂಚವು, ಸಂ = ಚನ್ನಾಗಿ, ಚ = ಮತ್ತು, ವಿ = ನಾನಾಪ್ರಕಾರಗಳಿಂದ, ಏಧಿ = ಬೆಳೆಯುತ್ತಲೇ ಇದೆಯೋ, ಯಸ್ಮಿಂಶ್ಚ = ಯಾವ ಪರಮಾತ್ಮನಲ್ಲಿಯಾದರೂ, ವಿಶ್ವೇ ದೇವಾಃ = ಬ್ರಹ್ಮಾದಿಸಕಲ ದೇವತೆಗಳು, ಅಧಿನಿಷೇದುಃ = ಆಶ್ರಯವನ್ನು ಪಡೆದಿದ್ದಾರೆಯೋ, ಇತ್ಯಾದಿ = ಇವೇ ಮೊದಲಾದ, ಶ್ರುತೇಃ = ವೇದಗಳಿರುವುದರಿಂದ ವಿಷ್ಣುವೇ ಅಕ್ಷರನು.

ಸರ್ವಾಧಾರತ್ವ ಇತರರಲ್ಲಿ ಸರ್ವಥಾ ಇರುವುದಿಲ್ಲ

**ब्रह्मसूत्रभाष्यम् — 'पृथिव्यादि प्रकृत्यन्तं भूतं भव्यं भवच्च यत् ।**

**विष्णुरेको बिभर्तीदं नान्यस्तस्मात् क्षमो धृतौ ।।' - इति च स्कान्दे।**

ಅನುವಾದ- ವಿಷ್ಣುವಿನಲ್ಲಿ ಈ ಜಗತ್ತು ಆಶ್ರಯವನ್ನು ಪಡೆದಿದೆ ಎಂದು ಸ್ಕಾಂದಪುರಾಣದಲ್ಲಿಯೂ ಹೇಳಲಾಗಿದೆ. ಭೂಮಿಯಿಂದ ಪ್ರಕೃತಿಯವರೆಗೆ ಹಿಂದಿನ, ಈಗಿನ ಮುಂದಿನ ಎಲ್ಲ ವಸ್ತುಗಳನ್ನು ವಿಷ್ಣುವೇ ಧಾರಣೆ ಮಾಡಿದ್ದಾನೆ. ಬೇರೆ ಯಾರೂ ಸಹ ಅದನ್ನು ಧಾರಣೆ ಮಾಡಲು ಸಮರ್ಥರಲ್ಲ.

ಪ್ರತಿಪದಾರ್ಥ -- ವಿಷ್ಣುವಿನಲ್ಲಿ ಸರ್ವಾಧಾರತ್ವವಿದ್ದಂತೆ ಬೇರೆಯವರಲ್ಲಿಯೂ ಸಹ ಸರ್ವಾಧಾರತ್ವ ಇರಬಹುದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ = ಯಾವ, ಭೂತಂ = ಹಿಂದಿನ, ಭವ್ಯಂ = ಮುಂದಿನ, ಭವಚ್ಚ = ಈಗಿನ, ಪೃಥಿವ್ಯಾದಿ = ಪೃಥಿವಿಯಿಂದ ಆರಂಭಿಸಿ, ಪ್ರಕೃತ್ಯಂತಂ = ಮೂಲಪ್ರಕೃತಿಯ ಪರ್ಯಂತ ಇರುವ, ಇದಂ = ಈ ಜಗತ್ತನ್ನು, ವಿಷ್ಣುರೇವ = ವಿಷ್ಣು ಒಬ್ಬನೇ, ಬಿಭರ್ತಿ = ಧಾರಣೆ ಮಾಡಿದ್ದಾನೆ, ತಸ್ಮಾತ್ = ಆ ವಿಷ್ಣುವಿನ ದೆಸೆಯಿಂದ, ಅನ್ಯಃ = ಬೇರೆಯವನು, ಧೃತೌ = ಧಾರಣೆ ಮಾಡಲು, ನ ಕ್ಷಮಃ = ಸಮರ್ಥನಲ್ಲ, ಇತಿ = ಹೀಗೆ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಿದೆ.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ
## ಸತ್ತರ್ಕದೀಪಾವಳಿ

### ಲಕ್ಷ್ಮೀ ಅಕ್ಷರಳೆನ್ನಲು ಆಧಾರ

**सत्तर्कदीपावळिः – ।। अक्षरमम्बरान्तधृतेः ।। १-३-१० ।।**

**तद्वा 'एतदक्षरं गार्गि अदृष्टं द्रष्टृश्रुतं श्रोत्रमतं मन्तृ' इत्यादि श्रूयते । अत्र परमेश्वरधर्मादृष्टत्वादिगुणत्वेनोच्यमानमक्षरं लक्ष्मीतत्त्वं भवेत् । 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादिना चन्द्राद्याधारत्वेन विष्णोरुक्तत्वात् चन्द्राद्याधारत्वस्य गुणत्वेन लक्ष्म्या उक्तत्वात् 'अहं सोममाहनसं बिभर्म्यहं त्वष्टारमुत पूषणं भगम्' इति ।**

ಪೂರ್ವಪಕ್ಷ - 'ತದ್ವಾ ಏತದ್ವೈತದಕ್ಷರಂ ಗಾರ್ಗಿ' ಅದೃಷ್ಟಂ ದ್ರಷ್ಟೃಶ್ರುತಂ ಶೋತ್ರಮತಂ ಮಂತೃ' ಇತ್ಯಾದಿಯಾಗಿ ಅಕ್ಷರನಲ್ಲಿ ಅನೇಕಗುಣಗಳು ಕೇಳಿಸುತ್ತಿವೆ, ಈ ಎಲ್ಲ ಗುಣಗಳು ಪರಮಾತ್ಮನಲ್ಲಿ ಒಪ್ಪಲು ಸಾಧ್ಯವಾಗದ ಕಾರಣ ಲಕ್ಷ್ಮೀದೇವಿಯೇ ಅಕ್ಷರ ಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಚಂದ್ರಾದ್ಯಾಧಾರತ್ವ ಎಂಬ ಗುಣವು ಲಕ್ಷ್ಮಿಯಲ್ಲಿಯೇ ಯುಕ್ತವಾಗುತ್ತದೆ. ಏಕೆಂದರೆ 'ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬುದಾಗಿ ಅಂಭ್ರಿಣೀ ಸೂಕ್ತದಲ್ಲಿ ಚಂದ್ರಾದ್ಯಾಧಾರತ್ವವು ಲಕ್ಷ್ಮಿಯ ಗುಣವೆಂದು ಹೇಳಲಾಗಿದೆ.

### ಅಂಭ್ರಿಣೀಸೂಕ್ತದಲ್ಲಿ ರುದ್ರಾದ್ಯಾಧಾರತ್ವ

**सत्तर्कदीपावळिः – अत्राहनसशब्देन आसमन्ताद् हन्तृत्वाद् रुद्र उच्यते । सोमशब्दस्तूमया सहितः सोम इति रुद्रविशेषणमपि भवति । 'अक्षरमदृष्टं द्रष्टृ'**

**इत्यादिना यदक्षरं तदन्यैरदृष्टत्वादिकं चोच्यते तल्लक्ष्मीतत्वस्यापि सम्भवतीत्येवं पूर्वपक्षयति अदृश्यत्वेत्यादिना ।।**

ಇಲ್ಲಿರುವ 'ಆಹನಸಂ' ಎಂಬ ಶಬ್ದದಿಂದ 'ಆಸಮಂತಾತ್ ಹಂತೃತ್ವಾತ್' ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿದಾಗ ಸಂಹಾರಕಾರಕನಾದ ರುದ್ರ ಎಂಬ ಅರ್ಥ ಬರುತ್ತದೆ. 'ಸೋಮಂ' ಎಂದರೆ ಉಮಾದೇವಿಯಿಂದ ಸಹಿತನಾದ ರುದ್ರನನ್ನು ಎಂದರ್ಥ. ಇನ್ನು 'ಅಕ್ಷರಂ ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಅಕ್ಷರತತ್ವಕ್ಕೆ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳೂ ಸಹ ಲಕ್ಷ್ಮೀದೇವಿಯಲ್ಲಿಯೇ ಯುಕ್ತವಾಗುತ್ತವೆ. ಆದ್ದರಿಂದ ಅಕ್ಷರಶಬ್ದದಿಂದ ವಾಚ್ಯಳಾದವಳು ಲಕ್ಷ್ಮೀದೇವಿ ಎಂದು ಪೂರ್ವಪಕ್ಷ. ಇದನ್ನು 'ಅದೃಶ್ಯತ್ವಾದಿಗುಣಾಃ' ಇತ್ಯಾದಿ ವಾಕ್ಯಗಳಿಂದ ತೋರಿಸಿರುತ್ತಾರೆ.

### ಸಿದ್ಧಾಂತ ಮಂಡನೆ

**सत्तर्कदीपावळिः – सिद्धान्तयति अक्षरमित्यादिना ।। अत्राक्षरशब्देन विष्णुरुच्यते न लक्ष्मीः । 'यद् भूतं च भवच्च भविष्यच्चेत्याचक्षते । आकाश एव तदोतं च प्रोतं च । एतस्मिन् खल्वक्षरे गार्ग्याकाश ओतश्च प्रोतश्च' इति सर्वाधारतयोक्ताकाशशब्दगृहीतलक्ष्म्याधाराक्षराज्ञानिमित्तजगद्धारण-निमित्तश्रवणादप्यत्राक्षरशब्देन विष्णुरुच्यते । विष्णवाज्ञया जगद्धारणस्य सप्तेत्यादिवचनसिद्धत्वात् ।**

ಸಿದ್ಧಾಂತ - ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಅಕ್ಷರಂ ಅಂಬರಾಂತಧೃತೇಃ' ಎಂಬ ಸೂತ್ರವನ್ನು ರಚಿಸುತ್ತಿದ್ದಾರೆ ಅಕ್ಷರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು, ಮಹಾಲಕ್ಷ್ಮಿಯಲ್ಲ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಲ್ಲಿ ಆಕಾಶಶಬ್ದದಿಂದ ಲಕ್ಷ್ಮೀದೇವಿಯನ್ನು ವಿವಕ್ಷಿಸಿ ಲಕ್ಷ್ಮೀದೇವಿಯ ತನಕ ಸಮಸ್ತ ಚರಾಚರಾತ್ಮಕ ಪ್ರಪಂಚವನ್ನು ಧಾರಣೆ ಮಾಡಿರುವಿಕೆ ಎಂಬ ಗುಣವನ್ನು ಹೇಳಲಾಗಿದೆ. ಇಂತಹ ಸಮಸ್ತ ಜಗತ್ತನ್ನು ಗ್ರಹಿಸಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುವುದರಿಂದ ವಿಷ್ಣುವೇ ಅಕ್ಷರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಸಮಸ್ತ ಜಗತ್ತಿನಲ್ಲಿರುವ

ಸಕಲಪದಾರ್ಥಗಳೂ ವಿಷ್ಣುವಿನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿವೆ ಎಂಬುದಾಗಿ 'ಸಪ್ತಾರ್ಧಗರ್ಭಾ' ಇತ್ಯಾದಿ ಶ್ರುತಿಯು ಹೇಳುತ್ತಿದೆ.

'ಸಪ್ತಾರ್ಧಗರ್ಭಾ' ಎಂಬ ಶ್ರುತಿಯಲ್ಲಿರುವ ಕಠಿಣಪದಾರ್ಥ

**सत्तर्कदीपावलिः – सप्त महदहङ्कारपञ्चभूताख्याः पदार्थाः आ समन्ताद् ऋद्धो गर्भो ब्रह्माण्डाख्यो येषां ते ऋद्धगर्भाः । वननीयो भजनीयश्चेति भुवनस्य विष्णोः रेतःस्थानीयाः ते तस्य प्रदिशा आदेशेन आज्ञया विधर्मणि विधारणे तिष्ठन्ति आज्ञयैव धृता इत्यर्थः ।।**

'ತತ್ವ' ಎಂಬ ಪದಕ್ಕೆ ಮಹತ್ತತ್ವ, ಅಂಹಕಾರತತ್ವ, ಪಂಚಭೂತಗಳೆಂಬ ಏಳು ಪದಾರ್ಥಗಳು ಎಂದರ್ಥ. ಇವುಗಳೇ ಆವರಣವಾಗಿವುಳ್ಳ ಬ್ರಹ್ಮಾಂಡವು ಮತ್ತು ಅವುಗಳ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಎಂಬ ಅರ್ಥವನ್ನು 'ಸಪ್ತಾರ್ಧಗರ್ಭಾ' ಎಂಬ ಮಾತಿಗೆ ತಿಳಿಯಬೇಕು. 'ಭುವನಸ್ಯ' ಎಂಬ ಪದಕ್ಕೆ 'ವನನೀಯಃ ಭಜನೀಯಃ' ಎಂಬ ವ್ಯುತ್ಪತ್ತಿಯಿಂದ ವಿಷ್ಣು ಎಂದರ್ಥ. ಇಂತಹ ವಿಷ್ಣುವಿನ ರೇತಸ್ಸಿನ ಸ್ಥಾನದಲ್ಲಿರುವ ಬ್ರಹ್ಮಾದಿದೇವತೆಗಳು ಅವನ ಆಜ್ಞೆಯಿಂದಲೇ ತಮ್ಮ ವಿವಿಧವಾದ ಧಾರಣಾದಿ ಕಾರ್ಯಗಳಲ್ಲಿ ತೊಡಗಿದ್ದಾರೆ ಎಂದರ್ಥ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

ಮಹಾಲಕ್ಷ್ಮಿಯು ಅಕ್ಷರಳೆಂದು ಪೂರ್ವಪಕ್ಷ

**तत्वप्रदीपः – अदृश्यत्वादिगुणाः "तद्वा एतदक्षरं गार्ग्यदृष्टं द्रष्टृश्रुतं श्रोतृ" इत्यादिनाऽक्षरस्यैवोच्यन्ते । तच्च "एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः" इत्यादिना सूर्यादिविधारणान्मध्यमाक्षरं**

**इत्यादिना यदक्षरं तदन्यैरदृष्टत्वादिकं चोच्यते तल्लक्ष्मीतत्त्वस्यापि सम्भवतीत्येवं पूर्वपक्षयति अदृश्यत्वेत्यादिना ।।**

ಇಲ್ಲಿರುವ 'ಆಹನಸಂ' ಎಂಬ ಶಬ್ದದಿಂದ 'ಆಸಮಂತಾತ್ ಹಂತೃತ್ವಾತ್' ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿದಾಗ ಸಂಹಾರಕಾರಕನಾದ ರುದ್ರ ಎಂಬ ಅರ್ಥ ಬರುತ್ತದೆ. 'ಸೋಮಂ' ಎಂದರೆ ಉಮಾದೇವಿಯಿಂದ ಸಹಿತನಾದ ರುದ್ರನನ್ನು ಎಂದರ್ಥ. ಇನ್ನು 'ಅಕ್ಷರಂ ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಅಕ್ಷರತತ್ವಕ್ಕೆ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳೂ ಸಹ ಲಕ್ಷ್ಮೀದೇವಿಯಲ್ಲಿಯೇ ಯುಕ್ತವಾಗುತ್ತವೆ. ಆದ್ದರಿಂದ ಅಕ್ಷರಶಬ್ದದಿಂದ ವಾಚ್ಯಳಾದವಳು ಲಕ್ಷ್ಮೀದೇವಿ ಎಂದು ಪೂರ್ವಪಕ್ಷ. ಇದನ್ನು 'ಅದೃಶ್ಯತ್ವಾದಿಗುಣಾಃ' ಇತ್ಯಾದಿ ವಾಕ್ಯಗಳಿಂದ ತೋರಿಸಿರುತ್ತಾರೆ.

### ಸಿದ್ಧಾಂತ ಮಂಡನೆ

**सत्तर्कदीपावळिः – सिद्धान्तयति अक्षरमित्यादिना ।। अत्राक्षरशब्देन विष्णुरुच्यते न लक्ष्मीः । 'यद् भूतं च भवच्च भविष्यच्चेत्याचक्षते । आकाश एव तदोतं च प्रोतं च । एतस्मिन् खल्वक्षरे गार्ग्याकाश ओतश्च प्रोतश्च' इति सर्वाधारतयोक्ताकाशशब्दगृहीतलक्ष्म्याधाराक्षराज्ञानिमित्तजगद्धारण-निमित्तश्रवणादप्यत्राक्षरशब्देन विष्णुरुच्यते । विष्ण्वाज्ञया जगद्धारणस्य समेत्यादिवचनसिद्धत्वात् ।**

ಸಿದ್ಧಾಂತ - ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಅಕ್ಷರಂ ಅಂಬರಾಂತಧೃತೇಃ' ಎಂಬ ಸೂತ್ರವನ್ನು ರಚಿಸುತ್ತಿದ್ದಾರೆ ಅಕ್ಷರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು, ಮಹಾಲಕ್ಷ್ಮಿಯಲ್ಲ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಲ್ಲಿ ಆಕಾಶಶಬ್ದದಿಂದ ಲಕ್ಷ್ಮೀದೇವಿಯನ್ನು ವಿವಕ್ಷಿಸಿ ಲಕ್ಷ್ಮೀದೇವಿಯ ತನಕ ಸಮಸ್ತ ಚರಾಚರಾತ್ಮಕ ಪ್ರಪಂಚವನ್ನು ಧಾರಣೆ ಮಾಡಿರುವಿಕೆ ಎಂಬ ಗುಣವನ್ನು ಹೇಳಲಾಗಿದೆ. ಇಂತಹ ಸಮಸ್ತ ಜಗತ್ತನ್ನು ಗ್ರಹಿಸಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುವುದರಿಂದ ವಿಷ್ಣುವೇ ಅಕ್ಷರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಸಮಸ್ತ ಜಗತ್ತಿನಲ್ಲಿರುವ

ಸಕಲಪದಾರ್ಥಗಳೂ ವಿಷ್ಣುವಿನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿವೆ ಎಂಬುದಾಗಿ 'ಸಪ್ತಾರ್ಧಗರ್ಭಾ' ಇತ್ಯಾದಿ ಶ್ರುತಿಯು ಹೇಳುತ್ತಿದೆ.

'ಸಪ್ತಾರ್ಧಗರ್ಭಾ' ಎಂಬ ಶ್ರುತಿಯಲ್ಲಿರುವ ಕಠಿಣಪದಾರ್ಥ

**सत्तर्कदीपावलिः – सप्त महदहङ्कारपञ्चभूताख्याः पदार्थाः आ समन्ताद् ऋद्धो गर्भो ब्रह्माण्डाख्यो येषां ते ऋद्धगर्भाः । वननीयो भजनीयश्चेति भुवनस्य विष्णोः रेतःस्थानीयाः ते तस्य प्रदिशा आदेशेन आज्ञया विधर्मणि विधारणे तिष्ठन्ति आज्ञयैव धृता इत्यर्थः ॥**

'ತತ್ವ' ಎಂಬ ಪದಕ್ಕೆ ಮಹತ್ತತ್ವ, ಅಂಹಕಾರತತ್ವ, ಪಂಚಭೂತಗಳೆಂಬ ಏಳು ಪದಾರ್ಥಗಳು ಎಂದರ್ಥ. ಇವುಗಳೇ ಆವರಣವಾಗಿವುಳ್ಳ ಬ್ರಹ್ಮಾಂಡವು ಮತ್ತು ಅವುಗಳ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಎಂಬ ಅರ್ಥವನ್ನು 'ಸಪ್ತಾರ್ಧಗರ್ಭಾ' ಎಂಬ ಮಾತಿಗೆ ತಿಳಿಯಬೇಕು. 'ಭುವನಸ್ಯ' ಎಂಬ ಪದಕ್ಕೆ 'ವನನೀಯಃ ಭಜನೀಯಃ' ಎಂಬ ವ್ಯುತ್ಪತ್ತಿಯಿಂದ ವಿಷ್ಣು ಎಂದರ್ಥ. ಇಂತಹ ವಿಷ್ಣುವಿನ ರೇತಸ್ಸಿನ ಸ್ಥಾನದಲ್ಲಿರುವ ಬ್ರಹ್ಮಾದಿದೇವತೆಗಳು ಅವನ ಆಜ್ಞೆಯಿಂದಲೇ ತಮ್ಮ ವಿವಿಧವಾದ ಧಾರಣಾದಿ ಕಾರ್ಯಗಳಲ್ಲಿ ತೊಡಗಿದ್ದಾರೆ ಎಂದರ್ಥ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ಮಹಾಲಕ್ಷ್ಮಿಯು ಅಕ್ಷರಳೆಂದು ಪೂರ್ವಪಕ್ಷ

**तत्वप्रदीपः – अदृश्यत्वादिगुणाः ''तद्वा एतदक्षरं गार्ग्यदृष्टं द्रष्टृश्रुतं श्रोतृ'' इत्यादिनाऽक्षरस्यैवोच्यन्ते । तत्र ''एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः'' इत्यादिना सूर्यादिविधारणान्मध्यमाक्षरं**

**भवितुमर्हति । ''अहं सोममाहनसं बिभर्म्यहं त्वष्टारमुत पूषणं भगम्'' इति मध्यमाक्षरस्य सूर्यादिविधारकत्वश्रुतेः । आहनसम् आ समन्तात् हन्तारं संहर्तारमित्यर्थः । यद्यप्यदृश्यत्वादयो विष्णोस्सम्भवन्ति तथाऽप्यक्षरशब्दस्यान्यत्रापि प्रसिद्धेरुक्तयुक्तेश्च मध्यमाक्षरस्यापि सम्भवादत्र तस्योक्ता इत्यत आह – 'अक्षरमम्बरान्तधृतेः' ।।**

ಅದೃಶ್ಯತ್ವಾದಿಗುಣಗಳು ಮಧ್ಯಮಾಕ್ಷರದಲ್ಲಿಯೂ ಕೂಡ ಶ್ರುತವಾಗಿವೆ. ಛಾಂದೋಗ್ಯೋಪನಿಷತ್ತಿನ ಅಕ್ಷರಬ್ರಾಹ್ಮಣದ ಕೊನೆಯ ಬ್ರಾಹ್ಮಣದಲ್ಲಿರುವ ಉಪನಿಷತ್ತಿನ ವಾಕ್ಯ ಹೀಗಿದೆ - ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ದೃಷ್ಟ್ರ ಅಶ್ರುತಂ ಶ್ರೋತೃ' ಎಲೈ ಗಾರ್ಗಿಯೇ ಈ ಅಕ್ಷರಶಬ್ದವಾಚ್ಯವಾದದ್ದು ಬೇರೆಯವರಿಂದ ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ತಾನು ಮಾತ್ರ ಎಲ್ಲವನ್ನು ನೋಡುವ ಸಾಮರ್ಥ್ಯವನ್ನು ಹೊಂದಿದೆ. ಬೇರೆಯವರಿಗೆ ಸಂಪೂರ್ಣವಾಗಿ ಹೇಳಿ ತಿಳಿಸಲು ಸಾಧ್ಯವಿಲ್ಲ. ಇತ್ಯಾದಿಯಾಗಿ ಅಕ್ಷರ ಶಬ್ದವಾಚ್ಯವಾದ ವಸ್ತುವಿನಲ್ಲಿಯೇ ಅದೃಶ್ಯತ್ವವು ಶ್ರುತವಾಗಿದೆ. ಈ ಅಕ್ಷರಶಬ್ದವಾಚ್ಯವಾದ ವಸ್ತು ಯಾವುದು ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ ಇದೇ ವಿಷಯವಾಕ್ಯದ ಹಿಂದೆ ಪ್ರಸಕ್ತವಾಗಿರುವ ವಾಕ್ಯಸಂದರ್ಭ ಹೀಗಿದೆ - 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಅಕ್ಷರನಿಂದಲೇ ಸೂರ್ಯ, ಚಂದ್ರ ಮೊದಲಾದವರು ತಮ್ಮ ತಮ್ಮ ಸ್ಥಾನದಲ್ಲಿ ಪ್ರಸ್ತವಾಗಿದ್ದಾರೆ. ಇತ್ಯಾದಿಯಾಗಿ ಸೂರ್ಯಚಂದ್ರಾದ್ಯಾಧಾರತತ್ವವನ್ನು ಹೇಳಲಾಗಿದೆ. ಆದ್ದರಿಂದ ಮಧ್ಯಮಾಕ್ಷರವೆನಿಸಿದ ಮಹಾಲಕ್ಷ್ಮೀಯೇ ಅಕ್ಷರಳೆನಿಸುತ್ತಾಳೆ ಹೊರತು, ಉತ್ತಮಾಕ್ಷರವೆನಿಸಿದ ಭಗವಂತನು ಅಕ್ಷರ ಆಗಲು ಸಾಧ್ಯವಿಲ್ಲ.

ಮತ್ತು 'ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬ ಅಂಭ್ರಿಣೀಸೂಕ್ತದಲ್ಲಿ ನಾನು ಸಂಹಾರಕನಾದ ಚಂದ್ರನನ್ನು ಧರಿಸಿದ್ದೇನೆ. ತ್ವಷ್ಟ್ರ, ಪೂಷ, ಸೂರ್ಯ ಮೊದಲಾದವರನ್ನೂ ಕೂಡ ಧರಿಸಿದ್ದೇನೆ ಎಂದು ಅಕ್ಷರಶಬ್ದವಾಚ್ಯಳಾದ ಲಕ್ಷ್ಮೀದೇವಿಯು ಹೇಳಿದ್ದಾಳೆ. ಆದ್ದರಿಂದ ಅಂಭ್ರಿಣೀಸೂಕ್ತದಲ್ಲಿ ಯಾವ ಸೂರ್ಯಚಂದ್ರಾದ್ಯಾ-ಧಾರಕತ್ವವು ಶ್ರುತವಾಗಿಯೋ, ಅದೇ ಧರ್ಮವು ಪ್ರಕೃತ ಬೃಹದಾರಣ್ಯಕದ ಅಕ್ಷರಬ್ರಾಹ್ಮಣ-

ದಲ್ಲಿಯೂ ಕೂಡ ಪ್ರಸಕ್ತವಾಗಿದೆ. ಹೀಗೆ ಶ್ರುತಿಸಂವಾದವಿರುವುದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮಿಯೇ ಅಕ್ಷರ ಎಂದು ಕರೆಸಿಕೊಳ್ಳಲು ಅರ್ಹಳಾಗಿದ್ದಾಳೆ.

'ಅಹಂ ಸೋಮಮಾಹನಸಮ್' ಎಂಬಲ್ಲಿರುವ 'ಆಹನಸಮ್' ಎಂಬ ಪದಕ್ಕೆ 'ಆಹಂತೀತಿ ಆಹನಸಮ್' ಎಂಬ ನಿಷ್ಪತ್ತಿಯಂತೆ ಎಲ್ಲವನ್ನೂ ಸಂಹಾರ ಮಾಡುವ ಎಂದರ್ಥ.

ವಾಸ್ತವಿಕವಾಗಿ ಅದೃಶ್ಯತ್ವಾದಿಗುಣಗಳನ್ನು ವಿಷ್ಣುವಿನಲ್ಲಿ ಈಗಾಗಲೇ ಸಮನ್ವಯ ಮಾಡಿದ್ದಾಗಿದೆ. ಆದರೂ ಕೂಡ ಅದೃಶ್ಯತ್ವಾದಿಗುಣಗಳನ್ನು ಅಕ್ಷರಶಬ್ದವಾಚ್ಯನಲ್ಲಿ ಹೇಳಿರುವುದರಿಂದ ಈಗಾಗಲೇ ಶ್ರುತಿಸಂವಾದಾದಿ ಆಧಾರಗಳನ್ನು ನೀಡಿರುವುದರಿಂದ ಮಧ್ಯಮಾಕ್ಷರದಲ್ಲಿಯೂ ಕೂಡ ಅದೃಶ್ಯತ್ವಾದಿಗುಣಗಳನ್ನು ಕೂಡಿಸಬಹುದು. ಆದ್ದರಿಂದ ಅಕ್ಷರಾಧಿಕರಣದಿಂದ ಅದೃಶ್ಯತ್ವಾದಿಗುಣಗಳನ್ನು ಮಹಾಲಕ್ಷ್ಮಿಯಲ್ಲಿಯೇ ವಿವಕ್ಷಿಸಲಾಗಿದೆ. ಹಾಗಾಗಿ ಅಕ್ಷರಶಬ್ದದಿಂದ ಮಹಾವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ. ಮಹಾಲಕ್ಷ್ಮಿಯೇ ಪ್ರತಿಪಾದ್ಯಳಾಗುತ್ತಾಳೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿಯೇ 'ಅಕ್ಷರಮಂಬರಾಂತಧೃತೇಃ' ಎಂಬ ಸೂತ್ರವು ಹೊರಟಿದೆ.

## ಬೃಹದಾರಣ್ಯಕೋಪನಿಷತ್ತಿನ ಅಕ್ಷರಬ್ರಾಹ್ಮಣದಲ್ಲಿ ಯಾರು ಪ್ರತಿಪಾದ್ಯರು ?

ವಿಶೇಷವಿಚಾರ - ಬೃಹದಾರಣ್ಯಕೋಪನಿಷತ್ತಿನ ಅಕ್ಷರಬ್ರಾಹ್ಮಣದ ಸಂಪೂರ್ಣ ಪ್ರಕರಣವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗುತ್ತಿದೆ. ತನ್ಮೂಲಕವಾಗಿ ಅಕ್ಷರಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೊಬ್ಬನೇ ಆಗಿದ್ದಾನೆಂಬ ಪ್ರಮೇಯವು ಸಿದ್ಧವಾಗುತ್ತದೆ. ಈ ಅಧಿಕರಣವನ್ನು ಅಧ್ಯಯನ ಮಾಡಲು ಬೃಹದಾರಣ್ಯಕೋಪನಿಷತ್ತಿನ ಅಕ್ಷರಬ್ರಾಹ್ಮಣವನ್ನು ಆಮೂಲಾಗ್ರವಾಗಿ ತಿಳಿಯಬೇಕು. ಅಕ್ಷರಬ್ರಾಹ್ಮಣದ ಸಂಪೂರ್ಣ ಪ್ರಕರಣ ಹೀಗಿದೆ -

> ಅಥ ಹ ವಾಚಕ್ನವ್ಯುವಾಚ । ಬ್ರಾಹ್ಮಣಾ ಭಗವಂತೋ ಹಂತಾಹಮಿಮಂ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ । ತೌ ಚೇನ್ಮೇ ವಕ್ಷ್ಯತಿ, ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ ಬ್ರಹ್ಮೋದ್ಯಂ ಜೇತೇತಿ । ಪೃಚ್ಛ ಗಾರ್ಗೀತಿ।

ಅನಂತರ ವಾಚಕ್ನುವಿನ ಮಗಳಾದ ಗಾರ್ಗಿಯು ಹೇಳಿದಳು. ಪೂಜ್ಯ ಬ್ರಾಹ್ಮಣರೇ, ನೀವು ಅನುಮತಿ ಕೊಟ್ಟರೆ ನಾನು ಈ ಯಾಜ್ಞವಲ್ಕ್ಯರನ್ನು ಕುರಿತು ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ಅವರು ನನಗೆ ಈ ಪ್ರಶ್ನೆಗಳಿಗೆ ಉತ್ತರ ಹೇಳಿದರೆ ನಿಮ್ಮಲ್ಲಿ ಯಾರೂ ಕೂಡ ಈ ಬ್ರಹ್ಮವಾದಿಯನ್ನು ಗೆಲ್ಲಲಾರಿರಿ ಬ್ರಾಹ್ಮಣರು ಗಾರ್ಗಿಯೇ, ಕೇಳು ಎಂದರು.

ಸಾ ಹೋವಾಚ । ಅಹಂ ವೈ ತ್ವಾ ಯಾಜ್ಞವಲ್ಕ್ಯ ಯಥಾಕಾಶ್ಯೋ ತಾ ವೈದೇಹೋ ವೋಗ್ರಪುತ್ರ ಉಜ್ಜ್ಯಂ ಧನುರಧಿಜ್ಯಂ ಕೃತ್ವಾದ್ವೌಬಾಣವಂತೌ ಸಪತ್ನಾತಿವ್ಯಾಧಿನೌ ಹಸ್ತೇ ಕೃತ್ವೋಪೋತ್ತಿಷ್ಠೇದ್ ಏವಮೇವಾಹಂ ದ್ವಾಭ್ಯಾಂ ಪ್ರಶ್ನಾಭ್ಯಾಮುಪೋದಸ್ಥಾಮ್ । ತೌ ಮೇ ಬ್ರೂಹೀತಿ । ಪೃಚ್ಛ ಗಾರ್ಗೀತಿ ।

ಗಾರ್ಗಿ ಹೇಳಿದಳು ಯಾಜ್ಞವಲ್ಕ್ಯರೇ, ನಾನು ನಿಮ್ಮಲ್ಲಿ ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ಕಾಶಿಯ ಅಥವಾ ವಿದೇಹದ ಪ್ರತಾಪಶಾಲಿ ರಾಜಕುಮಾರನು ಹೆದೆಯೇರಿಸದಿದ್ದ ಬಿಲ್ಲಿಗೆ ಹೆದೆಯೇರಿಸಿ, ಶತ್ರುಗಳಿಗೆ ಭಯಂಕರ ನೋವನ್ನುಂಟುಮಾಡುವ ಕಬ್ಬಿಣದ ಮೊನೆಯುಳ್ಳ ಎರಡು ಬಾಣಗಳನ್ನು ಕೈಯಲ್ಲಿ ಹಿಡಿದು ಹೇಗೆ ಶತ್ರುಗಳ ಮುಂದೆ ನಿಲ್ಲುವನೋ ಹಾಗೆಯೇ ನಾನು ಕೂಡ ಎರಡು ಪ್ರಶ್ನೆ ಸಿದ್ಧಪಡಿಸಿಕೊಂಡು ನಿಮ್ಮ ಬಳಿ ಬಂದಿರುವೆನು ನೀವು ನನ್ನ ಆ ಪ್ರಶ್ನೆಗೆ ಉತ್ತರ ಹೇಳಿರಿ. ಯಾಜ್ಞವಲ್ಕ್ಯರು ಹೇಳಿದರು. ಗಾರ್ಗಿ ಕೇಳು ಆ ಪ್ರಶ್ನೆಗಳನ್ನು.

ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।

ಗಾರ್ಗಿ ಕೇಳಿದಳು. ಸ್ವರ್ಗದಿಂದ ಮೇಲಿನ ಮಹರಾದಿ ಲೋಕಗಳು, ವೈಕುಂಠದಿಂದ ಮೇಲಿನ ಬ್ರಹ್ಮಾಂಡ ನವಾವರಣಗಳೂ, ಪೃಥಿವಿಯ ಕೆಳಗಿನ ಪಾತಾಳ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳು, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಬಲ್ಲವರು ಹೇಳುವವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ ?

ಸ ಹೋವಾಚ । ಯದೂರ್ಧ್ವಂ ಗಾರ್ಗಿ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತೇ ಆಕಾಶೇ ತದೋತಂ ಚ ಪ್ರೋತಂ ಚೇತಿ ।

ಯಾಜ್ಞವಲ್ಕ್ಯರು ಹೇಳಿದರು. ಗಾರ್ಗಿ, ಸ್ವರ್ಗಕ್ಕಿಂತ ಮೇಲಿನ ಮಹರಾದಿ ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳಲೋಕಗಳಲ್ಲೂ, ಅವುಗಳಿಗಿಂತಲೂ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಆಕಾಶನಾಮಕಳಾದ ಲಕ್ಷ್ಮೀದೇವಿಯಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ.

**ಸಾ ಹೋವಾಚ । ನಮಸ್ತೇऽಸ್ತು ಯಾಜ್ಞವಲ್ಕ್ಯ ಯೋ ಮ ಏತಂ ವ್ಯವೋಚಃ ।**
**ಅಥಾಪರಸ್ಮೈ ಧಾರಯಸ್ವೇತಿ । ಪೃಚ್ಛ ಗಾರ್ಗೀತಿ ।**

ಗಾರ್ಗಿ ಹೇಳಿದಳು ಯಾಜ್ಞವಲ್ಕ್ಯರೇ, ನನ್ನ ಈ ಪ್ರಶ್ನೆಗೆ ಸರಿಯಾಗಿ ಉತ್ತರ ಹೇಳಿದಿರಿ. ನಿಮಗೆ ನಮಸ್ಕಾರ. ಇನ್ನೊಂದು ಪ್ರಶ್ನೆಗೆ ಸಿದ್ಧರಾಗಿರಿ. ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ' ಕೇಳು.

**ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।**

ಗಾರ್ಗಿ ಕೇಳಿದಳು. ಯಾಜ್ಞವಲ್ಕ್ಯರೇ, ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ?

**ಸ ಹೋವಾಚ । ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತ ಆಕಾಶ ಏವ ತದೋತಂ ಚ ಪ್ರೋತಂ ಚೇತಿ । ಕಸ್ಮಿನ್ ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ।**

ಯಾಜ್ಞವಲ್ಕ್ಯರು ಹೇಳಿದರು ಗಾರ್ಗಿ, ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳು, ವೈಕುಂಠಕ್ಕಿಂತ ಮೇಲಿರುವ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ

ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಯಾವುದನ್ನು ಬಲ್ಲವರು ಹೇಳುವರೋ ಅವೆಲ್ಲವೂ, ಆಕಾಶನಾಮಕಳಾದ ಲಕ್ಷ್ಮೀದೇವಿಯಲ್ಲಿಯೇ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ. ಗಾರ್ಗಿ ಕೇಳಿದಳು ಲಕ್ಷ್ಮೀದೇವಿ ಯಾರನ್ನು ಓತಪ್ರೋತವಾಗಿ ಆಶ್ರಯಿಸಿಕೊಂಡಿರುವಳು ?

ಸ ಹೋವಾಚ । ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಂ ಅನಣು ಅಹ್ರಸ್ವಂ ಅದೀರ್ಘಂ ಅಲೋಹಿತಂ ಅಸ್ನೇಹಂ ಅಚ್ಛಾಯಂ ಅತಮಃ ಅವಾಯು ಅನಾಕಾಶಂ ಅಸಂಗಂ ಅರಸಂ ಅಗಂಧಂ ಅಚಕ್ಷುಷ್ಕಂ ಅಶ್ರೋತ್ರಂ ಅವಾಕ್ ಅಮನಃ ಅತೇಜಸ್ಕಂ ಅಪ್ರಾಣಂ ಅಮುಖ್ಯಂ ಅಮಾತ್ರಂ ಅನಂತರಂ ಅಬಾಹ್ಯಂ। ನ ತದಶ್ನಾತಿ ಕಿಂಚನ। ನ ತದಶ್ನಾತಿ ಕಶ್ಚನ।

ಯಾಜ್ಞವಲ್ಕ್ಯರು ಹೇಳಿದರು - ಗಾರ್ಗಿ, ಲಕ್ಷ್ಮೀಗೆ ಅಕ್ಷರನಾಮಕ ನಾರಾಯಣನು ಆಧಾರ. ಆ ಅಕ್ಷರನ ಲಕ್ಷಣಗಳನ್ನು ಬ್ರಹ್ಮಜ್ಞಾನಿಗಳೂ ಹೀಗೆ ಹೇಳುತ್ತಾರೆ - ಅವನು ಸ್ಥೂಲ ಸೂಕ್ಷ್ಮ ಹ್ರಸ್ವ ಅಥವಾ ದೀರ್ಘವಾದ ಎಲ್ಲ ಪ್ರಾಕೃತ ವಸ್ತುಗಳಿಂದ ಭಿನ್ನ. ಪ್ರಾಕೃತರಕ್ತಾದಿ ರೂಪವಿಲ್ಲದವನು. ಪ್ರಾಕೃತಜಿಗುಟುತನವಿಲ್ಲದವನು. ಅಜ್ಞಾನ ರಹಿತ. ಆವರಣ ರಹಿತ. ಶ್ವಾಸೋಚ್ಛ್ವಾಸ ರಹಿತ. ಆಕಾಶ ಮೊದಲಾದ ಪಂಚಭೂತಮಯ ಶರೀರ ರಹಿತ. ಎಲ್ಲ ಕಡೆ ಇದ್ದರೂ ತತ್ತದ್ಯುಕ್ತ ದೋಷಲೇಪವಿಲ್ಲದವನು. ಪ್ರಾಕೃತ ಜ್ಞಾನೇಂದ್ರಿಯ ಕರ್ಮೇಂದ್ರಿಯರಹಿತ, ಪ್ರಾಕೃತಶರೀರರಹಿತ, ಪರಿಮಿತಿರಹಿತ, ಎಲ್ಲಕ್ಕೂ ಒಳಗಿರುವವ, ಎಲ್ಲಕ್ಕೂ ಹೊರಗೂ ಇರುವವ. ಆ ಅಕ್ಷರನು ತನ್ನ ಉಳಿವಿಗಾಗಿ ಯಾರನ್ನೂ ಆಶ್ರಯಿಸಿಲ್ಲ. ಅವನನ್ನು ಯಾರೂ ಆಳಿಸಲೂ ಶಕ್ತರಲ್ಲ.

ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣಿ ಅರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತಿ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇ ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನು। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ, ಯಜಮಾನಂ ದೇವಾಃ, ದರ್ವೀಂ ಪಿತರೋಽನ್ವಾಯತ್ತಾಃ।

ಈ ಅಕ್ಷರನಾಮಕ ಹರಿಯ ಇಚ್ಛಾಮಾತ್ರದಿಂದಲೇ ಬ್ರಹ್ಮ-ರುದ್ರರು ಸುಸ್ಥಿತಿಯಲ್ಲಿದ್ದಾರೆ. ಈ ಅಕ್ಷರನ ಇಚ್ಛೆಯಿಂದಲೇ ಶ್ರೀ ಭೂ ದೇವಿಯರು ಸುಸ್ಥಿತಿಯಲ್ಲಿದ್ದಾರೆ. ಗಾರ್ಗಿ, ಈ ಅಕ್ಷರದ ಇಚ್ಛೆಯಿಂದಲೇ ನಿಮಿಷಗಳು, ಮುಹೂರ್ತಗಳು, ಹಗಲು-ರಾತ್ರಿಗಳು, ಪಕ್ಷಗಳು, ತಿಂಗಳುಗಳು, ಋತುಗಳು, ವರ್ಷಗಳು ಇವುಗಳ ಅಭಿಮಾನಿದೇವತೆಗಳು ಸುಸ್ಥಿತಿಯಲ್ಲಿರುತ್ತರೆ. ಗಾರ್ಗಿ, ಆ ಅಕ್ಷರನ ಇಚ್ಛೆಯಿಂದಲೇ ಪೂರ್ವದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಪಶ್ಚಿಮದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಶ್ವೇತಪರ್ವತಗಳಿಂದ ಯಾವ ಯಾವ ದಿಕ್ಕುಗಳಿಗೆ ಹರಿಯಬೇಕೋ ಆ ದಿಕ್ಕುಗಳಿಗೇ ಹರಿಯುತ್ತವೆ. ಗಾರ್ಗಿ, ಈ ಅಕ್ಷರನ ಇಚ್ಛೆಯಿಂದಲೇ ದಾನ ಮಾಡುವವರನ್ನು ಮನುಷ್ಯರೂ, ಯಾಗ ಮಾಡುವವರನ್ನು ದೇವತೆಗಳೂ ಹೊಗಳುತ್ತಾರೆ. ಪಿತೃಗಳು ದರ್ವಿಹೋಮವನ್ನು ಆಶ್ರಯಿಸುತ್ತಾರೆ.

ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾಽಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣಿ, ಅಂತವದೇವಾಸ್ಯ ತದ್ ಭವತಿ । ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾಽಸ್ಮಾಲ್ಲೋಕಾತ್ ಪ್ರೈತಿ, ಸ ಕೃಪಣಃ. ಅಥ ಯ ಏತದಕ್ಷರಂ ಗಾರ್ಗಿ ವಿದಿತ್ವಾಽಸ್ಮಾಲ್ಲೋಕಾತ್ ಪ್ರೈತಿ, ಸ ಬ್ರಾಹ್ಮಣಃ ।

ಗಾರ್ಗಿ, ಈ ಲೋಕದಲ್ಲಿ ಯಾರು ಈ ಅಕ್ಷರನನ್ನು ತಿಳಿಯದೆ ಹೋಮ ಮಾಡುತ್ತಾನೋ, ದಾನ ಮಾಡುತ್ತಾನೋ, ಬಹುಸಾವಿರ ವರ್ಷ ತಪಸ್ಸನ್ನು ಮಾಡುತ್ತಾನೋ ಅವನು ಸ್ವರ್ಗಾದಿ ಲೋಕಗಳಲ್ಲಿ ಬಹು ಸಾವಿರ ವರ್ಷ ವಾಸ ಮಾಡಬಹುದು. ಆದರೂ ಆ ಫಲವು ನಶ್ವರವೇ ಆಗಿರುತ್ತದೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿಯದೆ ಮರಣ ಹೊಂದುತ್ತಾನೋ ಅವನು ಶೋಚನೀಯನಾಗಿರುತ್ತಾನೆ. ಸಂಸಾರ ಬಂಧನದಲ್ಲಿಯೇ ಇರುತ್ತಾನೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿದು ಮರಣ ಹೊಂದುತ್ತಾನೋ ಅವನು ಮುಕ್ತನಾಗುತ್ತಾನೆ.

ತದ್ ವಾ ಏತದಕ್ಷರಂ ಗಾರ್ಗಿ, ಅದೃಷ್ಟಂ ದ್ರಷ್ಟೃ । ಅಶ್ರುತಂ ಶ್ರೋತೃ । ಅಮತಂ ಮಂತೃ । ಅವಿಜ್ಞಾತಂ ವಿಜ್ಞಾತೃ । ನಾನ್ಯದತೋಽಸ್ತಿ ದ್ರಷ್ಟೃ । ನಾನ್ಯದತೋಽಸ್ತಿ ಶ್ರೋತೃ । ನಾನ್ಯದತೋಽಸ್ತಿಮಂತೃ । ನಾನ್ಯದತೋಽಸ್ತಿವಿಜ್ಞಾತೃ । ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚೇತಿ ।

ಗಾರ್ಗಿ, ಈ ಅಕ್ಷರನು ಅನ್ಯರಿಗೆ ಸಂಪೂರ್ಣವಾಗಿ ನೋಡಲಾಗದವನು. ತಾನು ಎಲ್ಲವನ್ನೂ ನೋಡುವವನು. ಅನ್ಯರಿಗೆ ಸಂಪೂರ್ಣವಾಗಿ ಹೇಳಿ ತಿಳಿಯಲಾಗದವನು. ತಾನು ಎಲ್ಲವನ್ನೂ ಕೇಳುವವನು. ಅನ್ಯರಿಗೆ ಸಂಪೂರ್ಣವಾಗಿ ಮನಸ್ಸಿನಿಂದ ಗ್ರಹಿಸಲಾಗದವನು.

ತಾನು ಎಲ್ಲವನ್ನೂ ಮನಸಾ ಗ್ರಹಿಸುವವನು. ಅನ್ಯರಿಗೆ ಸಂಪೂರ್ಣವಾಗಿ ತಿಳಿಯಲಾಗದವನು. ತಾನು ಎಲ್ಲವನ್ನೂ ತಿಳಿಯುವವನು. ಅಕ್ಷರನಿಂದ ಅನ್ಯರು ಯಾರೂ ಸ್ವತಂತ್ರವಾಗಿ ನೋಡುವವರಲ್ಲ. ಅವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಕೇಳುವವರಲ್ಲ. ಅವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಮನಸಾ ತಿಳಿಯುವವರಲ್ಲ. ಇವನಿಗಿಂತ ಬೇರೆ ಯಾರೂ ಸ್ವತಂತ್ರವಾಗಿ ತಿಳಿಯುವವನಿಲ್ಲ. ಗಾರ್ಗಿ ಇಂಥ ಅಕ್ಷರನಲ್ಲಿಯೇ ಲಕ್ಷ್ಮಿಯೂ ಓತಪ್ರೋತವಾಗಿ ಆಶ್ರಯ ಪಡೆದಿದ್ದಾಳೆ.

ಸಾ ಹೋವಾಚ । ಬ್ರಾಹ್ಮಣಾ ಭಗವಂತಃ ತದೇವ ಬಹು ಮನ್ಯಧ್ವಂ ಯದ್ ಅಸ್ಮಾದ್ ನಮಸ್ಕಾರೇಣ ಮುಚ್ಯಧ್ವಮ್ । ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ ಬ್ರಹ್ಮೋದ್ಯಂ ಜೇತಾ ಇತಿ । ತತೋ ಹ ವಾಚಕ್ನವೀ ಉಪರರಾಮ ।

॥ ಇತಿ ಅಕ್ಷರ ಬ್ರಾಹ್ಮಣಂ ॥

ಗಾರ್ಗಿ ಹೇಳಿದಳು, ಪೂಜ್ಯ ಬ್ರಾಹ್ಮಣರೇ ನಾನು ಹೇಳುವುದನ್ನು ಆದರದಿಂದ ಕೇಳಿರಿ. ನೀವು ಯಾಜ್ಞವಲ್ಕ್ಯರಿಗೆ ನಮಸ್ಕರಿಸಿ ಅವರಿಂದ ಬಿಡುಗಡೆಯನ್ನು ಪಡೆಯಿರಿ. ಏಕೆಂದರೆ ನಿಮ್ಮಲ್ಲಿ ಯಾರೂ ಈ ಬ್ರಹ್ಮವಾದಿಯನ್ನು ಗೆಲ್ಲಲಾರಿರಿ. ಹೀಗೆ ಹೇಳಿ ಗಾರ್ಗಿ ವಿರಮಿಸಿದಳು.

॥ ಇಲ್ಲಿಗೆ ಅಕ್ಷರ ಬ್ರಾಹ್ಮಣ ಮುಗಿಯಿತು ॥

### ಎಲ್ಲವನ್ನೂ ಧರಿಸಿದ ಮಹಾವಿಷ್ಣುವೇ ಅಕ್ಷರನಾಗುತ್ತಾನೆ

**तत्वप्रदीपः – ''यद्भूतं च भवच्च भविष्यच्चेत्याचक्षते, आकाश एव तदोतं च प्रोतं च'' इत्युक्त्वा 'एतस्मिन्नु खल्वक्षरे गार्ग्याकाश ओतश्च प्रोतश्च' इति वचनेन अम्बरान्तस्य सर्वस्य धृतेरुक्तत्वाद् ब्रह्मैवाक्षरम् । भर्ता सन् विष्णुर्जीवैर्हृदि ध्रियमाणश्च बिभर्ति च ।**

'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ, ಆಕಾಶ ಏವ ತದೋತಂ ಚ ಪ್ರೋತಂ ಚ' ಭೂತ, ವರ್ತಮಾನ, ಭವಿಷ್ಯದ್ ವಸ್ತುಗಳೆಲ್ಲವೂ ಆಕಾಶದಲ್ಲಿಯೇ ಆಶ್ರಯವನ್ನು ಪಡೆದಿವೆ ಎಂಬುದಾಗಿ ಹೇಳಿ, 'ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಲೈ ಗಾರ್ಗಿಯೇ ಅಕ್ಷರತತ್ವದಲ್ಲಿಯೇ ಈ ಆಕಾಶವು ಆಶ್ರಯವನ್ನು ಪಡೆದಿದೆ ಎಂದು ಹೇಳಲಾಗಿದೆ. ಈ ಮಾತಿನಿಂದ ಅಕ್ಷರತತ್ವವು ಆಕಾಶದ ತನಕ ಎಲ್ಲವನ್ನೂ ಧರಿಸಿದೆ ಎಂದು ಹೇಳಿದಂತಾಯಿತು.

ಆದ್ದರಿಂದ ಅಕ್ಷರನಾಮಕನಾದ ಬ್ರಹ್ಮನು ಸಕಲಕ್ಕೂ ಆಶ್ರಯ ಎಂದು ತಿಳಿಯಬೇಕು. ಮಹಾವಿಷ್ಣುವನ್ನು ಸಕಲಜೀವರು ಹೃದಯದಲ್ಲಿ ಧರಿಸಿದ್ದಾರೆ. ಮಹಾವಿಷ್ಣು ಆ ಸಕಲರನ್ನೂ ಕೂಡ ತಾನೇ ಧರಿಸಿದ್ದಾನೆ.

### ಸಕಲಧಾರಕತ್ವ ಇತರರಲ್ಲಿ ಇಲ್ಲ

ವಿಶೇಷವಿಚಾರ - ಪೃಥ್ವೀಲೋಕದಿಂದ ಆಕಾಶದ ತನಕ ಸಕಲವನ್ನೂ ಕೂಡ ಅಕ್ಷರತತ್ವವು ಧರಿಸಿದೆ ಎಂದು ಉಪನಿತಷತ್ತು ಹೇಳುತ್ತಿದೆ. ಇಂಥ ಅಕ್ಷರನು ಮಹಾವಿಷ್ಣುವೇ ಆಗಬೇಕು. ಏಕೆಂದರೆ ಸಕಲ ಶ್ರುತಿ-ಸ್ಮೃತಿಗಳು ಸಕಲಧಾರಕತ್ವವು ವಿಷ್ಣುವಿನ ಅಸಾಧಾರಣಸಾಮರ್ಥ್ಯವೆಂದು ಬಣ್ಣಿಸಿವೆ. ಇತರರಲ್ಲಿ ಈ ಸಾಮರ್ಥ್ಯವು ಸರ್ವಥಾ ಇರುವುದಿಲ್ಲ. ಆದ್ದರಿಂದ ಮಹಾವಿಷ್ಣುವೇ ಅಕ್ಷರಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

### 'ಏತಸ್ಮಿನ್ನು' ಎನ್ನಲು ಕಾರಣವೇನು ?

ಭಾಷ್ಯದಲ್ಲಿ 'ಏತಿಸ್ಮಿನ್ನು ಖಲ್ವಕ್ಷರೇ ಎಂಬ ಪಾಠವನ್ನು ಉಲ್ಲೇಖಿಸಿದ್ದಾರೆ. ಆದರೆ ಉಪನಿಷತ್ತಿನಲ್ಲಿ 'ಏತಸ್ಮಿನ್ ಖಲ್ವಕ್ಷರೇ' ಎಂಬ ಪಾಠವಿದೆ. ಉಪನಿಷತ್ತಿನ ಪಾಠವನ್ನು ವ್ಯತ್ಯಾಸ ಮಾಡಿ, ಭಾಷ್ಯಕಾರರು 'ಏತಸ್ಮಿನ್ನು' ಎಂದು ಉಲ್ಲೇಖಿಸಲು ಬಹಳ ಔಚಿತ್ಯವಿದೆ. ವೇದದ ಬೇರೆ ಶಾಖೆಯಲ್ಲೂ ಸಹ ಇದೇ ಅಕ್ಷರನಲ್ಲಿ ಸಕಲವೂ ನೆಲೆಗೊಂಡಿದೆ ಎಂದು ಹೇಳುತ್ತಿದೆ. ಆದ್ದರಿಂದ ಬೃಹದಾರಣ್ಯಕದ ಮಾತಿಗೆ ಇತರ ಶಾಖೆಯಲ್ಲಿರುವ ಶ್ರುತಿವಾಕ್ಯದ ಸಂವಾದವನ್ನು ಇದರಿಂದ ತಿಳಿಸಿದ್ದಾರೆ ಎಂದು ತಿಳಿಯಬೇಕು.

### ನಿಜವಾದ ಆಧಾರ ಮಹಾವಿಷ್ಣುವೇ

**तत्वप्रदीपः – एतदुक्तं भवति । यद्यपि हरिर्जगता भ्रियत इत्युच्यते जगति व्याप्तत्वात् । जगद्बिभर्ति च । नैतावता तयोराधाराधेयभावस्तुल्य इति मन्तव्यम् । किन्तु मूलभर्ता सन् भ्रियमाणश्च बिभर्ति च । युज्यते च तस्यैकस्यैव बहुरूपतया निविष्टत्वादिति । यस्मिन्निदं सम्यक्च विविधं चैधि ॥**

ಒಟ್ಟು ಅಭಿಪ್ರಾಯ - ಶ್ರೀಹರಿಯು ಜಗತ್ತಿನಲ್ಲಿ ವ್ಯಾಪ್ತನಾಗಿರುವ ಕಾರಣ ಸಮಸ್ತ ಜಗತ್ತು ಇವನನ್ನು ಧರಿಸಿದೆ ಎಂದು ಉಪನಿಷತ್ತು ಹೇಳಿದೆ. ಇಂಥ ಜಗತ್ತನ್ನು ತಾನೂ ಕೂಡ ಧರಿಸಿದ್ದಾನೆ. ಹೀಗೆ ಹೇಳಿದ್ದರಿಂದ ವಿಷ್ಣು ಹಾಗೂ ಜಗತ್ತು ಎರಡರಲ್ಲಿಯೂ ಆಧಾರಾಧೇಯಭಾವವು ಸಮಾನವಾಯಿತೆಂದು ತಿಳಿಯಬಾರದು. ಏಕೆಂದರೆ ಮೂಲಭರ್ತೃವೆನಿಸಿದ ಮಹಾವಿಷ್ಣು ತನ್ನನ್ನು ಧರಿಸಿದ ಜಗತ್ತನ್ನೂ ಕೂಡ ತಾನೇ ಧರಿಸಿದ್ದಾನೆ. ಆದನ್ನು ಒಬ್ಬನೇ ಆಗಿದ್ದರೂ ಬಹುರೂಪಗಳನ್ನು ಹೊಂದಿ ಪ್ರವೇಶಿಸಿರುವುದರಿಂದ ಇದು ಅಯುಕ್ತವಲ್ಲ.

'ಯಸ್ಮಿನ್ನಿದಂ ಸಂಚ ವಿಚೈಧಿ ಸರ್ವಂ' ಎಂಬ ಶ್ರುತಿಯಲ್ಲಿ ಸಂಚ, ವಿ, ಚ, ಏಧಿ ಎಂಬುದಾಗಿ ಪದಚ್ಛೇದವನ್ನು ತಿಳಿಯಬೇಕು. ಸಂ - ಚೆನ್ನಾಗಿ, ವಿ - ಅನೇಕ ರೂಪದಿಂದ, ಇದಂ - ಈ ಜಗತ್ತು, ಯಸ್ಮಿನ್ - ಯಾವ ವಿಷ್ಣುವಿನಲ್ಲಿ, ಏಧಿ = ಆಶ್ರಯವನ್ನು ಹೊಂದಿ ವೃದ್ಧಿ ಹೊಂದಿದೆಯೋ ಎಂಬುದಾಗಿ ಶ್ರುತ್ಯರ್ಥವನ್ನು ತಿಳಿಯಬೇಕು.

## ಪಾಠಾಂತರದ ಬಗ್ಗೆ

ವಿಶೇಷ ವಿಚಾರ - ಭಾಷ್ಯದಲ್ಲಿ ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ । ಏಕೋ ದೇವೋ ಬಹುಧಾ ನಿವಿಷ್ಟಃ' ಎಂದಷ್ಟೇ ಶ್ರುತಿಯ ಉಲ್ಲೇಖವಿದೆ. ತತ್ವಪ್ರದೀಪದಲ್ಲಿ ಇಷ್ಟೇ ಶ್ರುತಿವಾಕ್ಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೆ ಇತ್ತೀಚಿನ ಭಾಷ್ಯದ ಪುಸ್ತಕಗಳಲ್ಲಿ 'ಯದಾ ಭಾರಂ ತಂದ್ರಯತೇ ಸ ಭರ್ತುಮ್ । ಪರಾಸ್ಯ ಭಾರಂ ಪುನರಸ್ತಮೇತಿ' ಎಂಬ ಶ್ರುತಿಯ ಮುಂದಿನ ವಾಕ್ಯವನ್ನೂ ಕೂಡ ಉಲ್ಲೇಖಿಸಿದ್ದಾರೆ. ತತ್ವಪ್ರಕಾಶಿಕೆಯಲ್ಲಿ ಪೂರ್ಣ ಶ್ರುತಿಯ ಅರ್ಥವನ್ನು ಬರೆದಿದ್ದರಿಂದ ಭಾಷ್ಯದಲ್ಲಿಯೂ ಇದನ್ನು ಸೇರಿಸಿರಬಹುದು. ಆದರೆ ಪ್ರಾಚೀನ ಪುಸ್ತಕಗಳಲ್ಲಿ ಈ ಉತ್ತರಾರ್ಧವು ಕಾಣಿಸುವುದಿಲ್ಲ.

'ಯಸ್ಮಿನ್ನಿದಂ ಸಂ ಚ ವಿ ಚೈಧಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ' ಎಂಬ ಭಾಷ್ಯವಾಕ್ಯದಲ್ಲಿ 'ಸರ್ವಂ' ಎಂಬ ಪದಕ್ಕೆ ಯಾವುದೇ ಟೀಕಾರಾಯರು ವ್ಯಾಖ್ಯಾನವನ್ನು ಬರೆದಿರುವುದಿಲ್ಲ. ಮತ್ತು ಮಹಾನಾರಾಯಣೋಪನಿಷತ್ತಿನಲ್ಲಿ ಬರುವ ಈ ಶ್ರುತಿಯಲ್ಲಿ 'ಸರ್ವಂ' ಎಂಬ ಪದವು ಪ್ರಾಚೀನ ಕೋಶಗಳಲ್ಲಿ ಕಾಣಿಸುವುದಿಲ್ಲ. ಆದರೆ ಇತ್ತೀಚಿನ ಮುದ್ರಿತ ಪುಸ್ತಕಗಳಲ್ಲಿ ಉಪನಿಷತ್ತಿನಲ್ಲೂ ಕೂಡ 'ಸರ್ವಂ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ. ಹಾಗೂ ಭಾಷ್ಯದ ಆಚಾರ್ಯರ ವಾಕ್ಯದಲ್ಲಿಯೂ 'ಸರ್ವಂ' ಎಂಬ ಪದವನ್ನು ಮುದ್ರಿತ ಪುಸ್ತಕಗಳಲ್ಲಿ ಉಲ್ಲೇಖಿಸಲಾಗಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

### ಉಭಯತ್ರಪ್ರಸಿದ್ಧವಾದ ಅಕ್ಷರ ಎಂಬ ನಾಮಸಮನ್ವಯ

**तत्वप्रकाशिका – ।। अक्षरमम्बरान्तधृतेः ।।**

**अत्राविनाशित्वसाम्यात् चित्प्रकृतौ हरौ च साधारणस्याक्षरनाम्नो ब्रह्मणि समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿ ಹಾಗೂ ಶ್ರೀಹರಿಯಲ್ಲಿ ಸಾಧಾರಣವಾದ 'ಅವಿನಾಶಿತ್ವ' ಎಂಬ ಧರ್ಮವಿರುವ ಪ್ರಯುಕ್ತ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುತ್ತದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇವೆ ಎಂದು ತಿಳಿಯಬೇಕು.

### ಶ್ರುತ್ಯಾದಿಸಂಗತಿಗಳು

**तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं च दर्शयति – अदृश्यत्वादीति ।।**

ಶ್ರುತಿಸಂಗತಿ ಹಾಗೂ ಅಧಿಕರಣ ಸಂಗತಿಗಳನ್ನು, ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುವವರಾಗಿ ಯುಕ್ತಿಬದ್ಧವಾದ ಪೂರ್ವಪಕ್ಷವನ್ನೂ ಸಹ ತೋರಿಸುತ್ತಿದ್ದಾರೆ 'ಅದೃಶ್ಯತ್ವಾದಿ' ಇತ್ಯಾದಿ ಭಾಷ್ಯದಿಂದ.

### ಅದೃಶ್ಯತ್ವಾದಿಗುಣಗಳುಳ್ಳವನು ಅಕ್ಷರ

**तत्वप्रकाशिका – अदृश्यत्वादिगुणाः पूर्वं विष्णोरुक्तास्ते च वाचसनेयके अक्षरस्योक्ताः ।**

ಅದೃಶ್ಯತ್ವಾದಿಗುಣಗಳನ್ನು ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಅದೇ ಅದೃಶ್ಯತ್ವಾದಿಗುಣಗಳನ್ನು ಬೃಹದಾರಣ್ಯಕೋಪನಿಷತ್ತು ಅಕ್ಷರನಿಗೆ ಹೇಳುತ್ತಿದೆ. ಅದು ಹೀಗೆ -

ಬೃಹದಾರಣ್ಯಕದಲ್ಲಿ ಏನು ಹೇಳಿದೆ ?

**तत्वप्रकाशिका – 'तद्वा एतदक्षरं गार्गि अदृष्टं द्रष्टृश्रुतं श्रोत्रमतं मन्त्रविज्ञातं विज्ञातृ नान्यदतोऽस्ति द्रष्टृ नान्यदतोऽस्ति श्रोतृ नान्यदतोऽस्ति मन्तृ नान्यदतोऽस्ति विज्ञात्रेतस्मिन्खल्वक्षरे गार्ग्याकाश ओतश्च प्रोतश्च' इति ।**

'ಎಲೈ ! ಗಾರ್ಗಿಯೇ, ಅಕ್ಷರತತ್ವವು ಬೇರೆಯವರಿಂದ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ್ದು, ಕೇಳಲೂ ಸಹ ಸಾಧ್ಯವಿಲ್ಲ, ಮನನಕ್ಕೂ ಸಹ ವಿಷಯವಲ್ಲ, ಬೇರೆಯವರಿಂದ ನೋಡಲು ಸಾಧ್ಯವಿಲ್ಲದಿದ್ದರೂ, ಸ್ವತಃ ಎಲ್ಲವನ್ನೂ ಪೂರ್ಣವಾಗಿ ನೋಡುತ್ತದೆ, ಕೇಳುತ್ತದೆ, ಮನನ ಮಾಡುತ್ತದೆ, ತಿಳಿಯುತ್ತದೆ. ಅದನ್ನು ಬಿಟ್ಟು ಬೇರೆ ಯಾರೂ ಸಹ ನೋಡಿದವರೂ, ಕೇಳಿದವರೂ, ಮನನ ಮಾಡಿದವರೂ, ವಿಶೇಷವಾಗಿ ತಿಳಿದವರೂ ಇರುವುದಿಲ್ಲ. ಎಲೈ ! ಗಾರ್ಗಿಯೇ, ಇಂತಹ ಅಕ್ಷರತತ್ವದಲ್ಲಿ ಆಕಾಶವು ಸಂಪೂರ್ಣವಾಗಿ ಆಶ್ರಯ ಪಡೆದಿದೆ' ಎಂದು.

ಅಕ್ಷರ ಯಾರು ?

**तत्वप्रकाशिका – तस्याक्षरस्य विष्णोरन्यत्वेऽदृश्यत्वादिकं चान्यस्यैव प्रसज्येत इत्यवश्यं निर्णेयत्वम् ।**

ಈ ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದ್ಯವಾದ ಅಕ್ಷರವು ವಿಷ್ಣುವಿಗಿಂತ ಬೇರೆಯಾದರೆ ಅದೃಶ್ಯತ್ವಾದಿ ಗುಣಗಳೂ ಸಹ ಬೇರೆಯವರಲ್ಲಿಯೇ ಬರುತ್ತದೆ. ಆದ್ದರಿಂದ ಅಕ್ಷರಶಬ್ದದಿಂದ ಯಾರು ವಾಚ್ಯರಾಗಿದ್ದಾರೆಂಬುದನ್ನು ಅವಶ್ಯವಾಗಿ ನಿರ್ಣಯ ಮಾಡಬೇಕು.

### ಸಂಶಯ ಹಾಗೂ ಸಂಶಯಬೀಜ

**तत्वप्रकाशिका – तदक्षरं विषयः । किं विष्णुरुत चेतनप्रकृतिरिति सन्देहः । उक्तसाधारण्यं च सन्देहबीजम् ।**

ಈ ಅಧಿಕರಣದಲ್ಲಿ ಪೂರ್ವಪ್ರಕೃತವಾದ ಅಕ್ಷರವೇ ವಿಷಯವಾಗಿದೆ. ಇಂತಹ ಅಕ್ಷರವು ವಿಷ್ಣುವೋ ಅಥವಾ ಲಕ್ಷ್ಮೀದೇವಿಯೋ ? ಎಂದು ಸಂದೇಹ. ಎರಡೂ ಕಡೆ ಸಮಾನವಾಗಿರುವ ಅವಿನಾಶಿತ್ವವು ಸಂದೇಹಕ್ಕೆ ಕಾರಣ.

### ಮಧ್ಯಮಾಕ್ಷರಳೆಂದು ಪೂರ್ವಪಕ್ಷ

**तत्वप्रकाशिका – द्रष्टृत्वादिश्रवणात् जडप्रकृतेरोङ्कारस्य च न सन्देहनिविष्टत्वम् । उत्तराधिकरणे त्वीक्षणस्य प्रथमाप्रतीतेरस्त्यवकाशः । एतदक्षरं मध्यमं श्रीतत्वमेवेति पूर्वः पक्षः ।**

ಈ ಶ್ರುತಿಯಲ್ಲಿ ಅಕ್ಷರತತ್ವಕ್ಕೆ ದ್ರಷ್ಟೃತ್ವವೇ ಮೊದಲಾದ ಧರ್ಮಗಳು ಹೇಳಲ್ಪಟ್ಟಿವೆ. ಆದ್ದರಿಂದ ಜಡಪ್ರಕೃತಿಯನ್ನಾಗಲೀ, ಓಂಕಾರವನ್ನಾಗಲೀ, ಸಂಶಯ ಕೋಟಿಯಲ್ಲಿ ಸೇರಿಸಲು ಬರುವುದಿಲ್ಲ. ಮುಂದಿನ ಅಧಿಕರಣದ ವಿಷಯವಾಕ್ಯವೆನಿಸಿದ 'ಸದೇವ ಸೌಮ್ಯ ಇದಮಗ್ರ ಆಸೀತ್'ಎಂಬ ವಾಕ್ಯದಲ್ಲಿ ಈಕ್ಷಣೀಯತ್ವಧರ್ಮವು ಮೊದಲು ಪ್ರತೀತವಾಗದ ಕಾರಣ ಅಲ್ಲಿ ಅಕ್ಷರಶಬ್ದದಿಂದ ಜಡಪ್ರಕೃತಿಯನ್ನೂ ಸಹ ತೆಗೆದುಕೊಳ್ಳಲು ಬರುತ್ತದೆ. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ಮೊದಲೇ ಈಕ್ಷಣಧರ್ಮವು ಕೇಳಿಸುತ್ತಿರುವುದರಿಂದ ಲಕ್ಷ್ಮೀದೇವಿಯನ್ನೇ ಸ್ವೀಕರಿಸಬೇಕು. ಆದ್ದರಿಂದ ಶ್ರೀತತ್ವವೆನಿಸಿದ ಲಕ್ಷ್ಮೀದೇವಿಯೇ ಮಧ್ಯಮಾಕ್ಷರಳೆನಿಸಿದ್ದಾಳೆಂದು ಪೂರ್ವಪಕ್ಷ.

### 'ಅಹಂ ಸೋಮಮಾಹನಸಂ ಬಿಭರ್ಮಿ'

**तत्वप्रकाशिका – तत्राक्षरशब्दस्य प्रसिद्धेः । 'एतस्य वाऽक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादिनाऽक्षरस्य चन्द्रसूर्याद्याधारत्व प्रतीतेश्च । चन्द्राद्याधारत्वस्य च 'अहं सोमम्' इत्यादेस्तद्धर्मत्वात् ।**

ಶ್ರೀಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದವು ಪ್ರಸಿದ್ಧವೇ ಆಗಿದೆ. ಏಕೆಂದರೆ 'ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ', 'ಅಕ್ಷರತತ್ವದ ಆಜ್ಞೆಯಿಂದ ಸೂರ್ಯ, ಚಂದ್ರ ಎಲ್ಲರೂ ಸಹ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿದ್ದಾರೆ'. ಇತ್ಯಾದಿ ವಾಕ್ಯದಿಂದ ಅಕ್ಷರ ತತ್ವವು ಸೂರ್ಯ, ಚಂದ್ರ ಮೊದಲಾದವರಿಗೆ ಆಧಾರವಾಗಿದೆ ಎಂದು ಹೇಳಲಾಗಿದೆ. ಇಂತಹ ಸೂರ್ಯ ಚಂದ್ರ ಮೊದಲಾದವರಿಗೆ ಆಧಾರವಾಗಿರುವಿಕೆಯು ಲಕ್ಷ್ಮೀದೇವಿಯ ಗುಣವಾಗಿದೆ ಎಂದು 'ಅಹಂ ಸೋಮಮ್' ಇತ್ಯಾದಿ ಅಂಭ್ರಿಣೀ ಸೂಕ್ತದ ವಾಕ್ಯದಿಂದ ಸಿದ್ಧವಾಗಿದೆ.

### ಅದೃಶ್ಯತ್ವಾದಿ ಧರ್ಮಗಳೂ ಸಹ ಮಧ್ಯಮಾಕ್ಷರದಲ್ಲಿಯೇ

**तत्वप्रकाशिका – नच वाच्यमदृश्यत्वादिविष्णुधर्मश्रवणात् तस्याक्षरत्वमिति। अदृश्यत्वादिगुणानां मध्यमाक्षरेऽपि सम्भवात् ।**

ಪ್ರಶ್ನೆ - ಅದೃಶ್ಯತ್ವಾದಿ ಧರ್ಮಗಳೂ ಸಹ ಅದೇ ವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ಅದೃಶ್ಯತ್ವಾಧಿಕರಣದ ನ್ಯಾಯದಂತೆ ವಿಷ್ಣುವಿನ ಅಸಾಧಾರಣ ಧರ್ಮವಾದ ಅದೃಶ್ಯತ್ವಗುಣದಿಂದ ವಿಷ್ಣುವೇ ಅಕ್ಷರಶಬ್ದ ವಾಚ್ಯನಾಗಬೇಕಲ್ಲವೆ?

ಉತ್ತರ - ಆಗಬೇಕಾಗಿಲ್ಲ. ಏಕೆಂದರೆ ಅದೃಶ್ಯತ್ವಾದಿ ಧರ್ಮವು ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲೂ ಉಪಪನ್ನವಾಗುತ್ತದೆ.

### ಲಕ್ಷ್ಮಿಯೇ ಅದೃಶ್ಯಳೆನ್ನಲು ಶ್ರುತಿಪ್ರಮಾಣ

**तत्वप्रकाशिका – तथा च स्मृतिः –**

**'ये त्वक्षरमनिर्देश्यमव्यक्तं पर्युपासते ।**
**सर्वत्रगमचिन्त्यं च कूटस्थमचलं ध्रुवम्' ।**
**'आसीदिदं तमोभूतमप्रज्ञातमलक्षणम् ।**
**अप्रतर्क्यमनिर्देश्यं प्रसुप्तमिव सर्वतः' इत्यादि ।**

ನ್ಯಾಯವಿವರಣದಲ್ಲಿಯೂ 'ಅಚೇತನಸ್ಯ ಈಕ್ಷಣಾದ್ಯಷ್ಟಿಃ' ಎಂದು ಹೇಳಿದ್ದಾರೆ. ಇದರಿಂದ 'ಈಕ್ಷಣವೆಂಬ ವ್ಯಾಪಾರ' ಎಂಬರ್ಥವನ್ನು ಹೇಳಿದ್ದು ಸಮಂಜಸವಾಗುತ್ತದೆ. ಕರ್ಮಪದಸಾರ್ಥಕ್ಯವು ಮತ್ತು ಪಕ್ಷವಿಶೇಷವನ್ನು ಸೂತ್ರದಲ್ಲಿ ಹೇಳದಿರುವಿಕೆಯು ಏಕೆಂದು ತಾತ್ಪರ್ಯಚಂದ್ರಿಕೆಯಲ್ಲಿ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಸದಧಿಕರಣದ ಕನ್ನಡ ಅನುವಾದವು ಮುಗಿಯಿತು ॥

ತಂತ್ರದೀಪಿಕೆಯಲ್ಲಿ ಸದಧಿಕರಣದ ಸೂತ್ರಗಳು

**।। श्रीजानकीवदनाम्भोजराजहंसाय रामचन्द्राय नमः ।।**

**।। श्री गुरुभ्यो नमः ।।**

**श्री राघवेन्द्रतीर्थविरचिता**

# तन्त्रदीपिका

**सदधिकरणम् (१।३।४)**

ಸೂತ್ರದಲ್ಲಿರುವ 'ಸಃ' ಎಂಬ ಪದಕ್ಕೆ ಅನ್ವಯಕ್ರಮ

**।। ईक्षतिकर्मव्यपदेशात्सः ।। १-३-१३ ।।**

अत्र ''सदेव सोम्य'' इत्यादिसृष्टिस्थानस्थसन्नाम समन्वीयते । योग्यतया सदित्यन्वेति । स इत्यनेन तत्त्विति तुरन्वेति ।

ಈ ಅಧಿಕರಣದಲ್ಲಿ ''ಸದೇವ ಸೋಮ್ಯ'' ಮೊದಲಾದ ಅನೇಕ ಪ್ರಕರಣರೂಪವಾದ ಸ್ಥಾನದಲ್ಲಿರುವ 'ಸತ್' ಎಂಬ ಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. 'ಸತ್' ಎಂಬ

ಪದವು ಯೋಗ್ಯತಾದಿಗಳಿರುವುದರಿಂದ ಅನ್ವಯವನ್ನು ಹೊಂದುತ್ತದೆ. ಸೂತ್ರದಲ್ಲಿರುವ 'ಸಃ' ಎಂಬುದರ ಜೊತೆಗೆ 'ತು' ಶಬ್ದಕ್ಕೆ ಅನ್ವಯ ಮಾಡಬೇಕು.

'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದ ಪ್ರತಿಪದಾರ್ಥ

''सदेव'' इत्यादौ श्रुतं सत् स एव विष्णुरेव । न प्रधानम् । ईक्षतिरूपं च तत्कर्म च तस्य व्यपदेशात् ''तदैक्षत'' इतीक्षणाख्यव्यापारोक्तेर्जडे तदयोगादित्यर्थः।

ಸೂತ್ರಾರ್ಥ - 'ಸದೇವ' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಸತ್ = 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು 'ಸಃ ತು' = ವಿಷ್ಣುವೇ ಆಗಿದ್ದಾನೆ ಹೊರತು, ಪ್ರಕೃತಿಯಲ್ಲ. ಏಕೆಂದರೆ ಈಕ್ಷತೀಕರ್ಮವ್ಯಪದೇಶಾತ್ = ಈಕ್ಷತಿರೂಪವಾದ ಕರ್ಮವನ್ನು ಹೇಳಿರುವುದರಿಂದ. 'ತದೈಕ್ಷತ' ಎಂಬ ಶ್ರುತಿಯಲ್ಲಿ 'ಈಕ್ಷಣ' ಎಂಬ ವ್ಯಾಪಾರವನ್ನು ಹೇಳಿದ್ದರಿಂದ ಜಡವಾದ ಪ್ರಕೃತಿಯಲ್ಲಿ ವ್ಯಾಪಾರವು ಕೂಡುವುದಿಲ್ಲವೆಂದು ಅರ್ಥ.

ಸೂತ್ರದಲ್ಲೇಕೆ ಕರ್ಮಪದವನ್ನು ವಿವಕ್ಷಿಸಿದರು

ईक्षतीत्येव वाच्ये कर्मेत्युक्तिः स्वरूपान्येक्षणाभावात् कथं तदैक्षतेति कर्तृत्वश्रुतिरिति न शङ्क्यम् । विशेषात् क्रियाकर्तृभाव इति सूचयितुम् ।

ಸೂತ್ರದಲ್ಲಿ 'ಈಕ್ಷತಿ' ಎಂದಷ್ಟೇ ಹೇಳಿದ್ದರೆ ಸಾಕಾಗಿತ್ತು. ಆದರೂ ಸಹ 'ಕರ್ಮ' ಎಂದು ಹೇಳಿದ್ದರಿಂದ ಈಕ್ಷಣವು ಬ್ರಹ್ಮನ ಸ್ವರೂಪವೇ ಆಗಿರುವಾಗ, ಈಕ್ಷಣಕ್ಕೆ ಬ್ರಹ್ಮನು ಆಶ್ರಯನೆಂದು ಹೇಳುವುದು ಕೂಡುವುದಿಲ್ಲ. ಆದರೆ ವಿಶೇಷದ ಬಲದಿಂದ ಅಭೇದವಿದ್ದರೂ ಈಕ್ಷಣಕ್ರಿಯೆಗೆ ಬ್ರಹ್ಮನು ಆಶ್ರಯನಾಗಿದ್ದಾನೆಂಬ ವ್ಯವಹಾರವನ್ನು ಮಾಡಿ ಕ್ರಿಯಾಕರ್ತೃಭಾವಸಂಬಂಧವನ್ನು ಹೇಳಬಹುದೆಂದು ಸೂಚನೆ ಮಾಡಿದ್ದಾರೆ.

ತತ್ವಪ್ರದೀಪ ಹಾಗೂ ತಾತ್ಪರ್ಯಚಂದ್ರಿಕೆಗಳಲ್ಲಿ ಕರ್ಮಪದದ ಸಾರ್ಥಕ್ಯ

तत्वप्रदीपचन्द्रिकयोस्तु कर्मेति ''न कर्तृत्वं न कर्माणि'' इत्यत्रेव सृष्टिरुच्यते । ईक्षतिश्च कर्म च तयोरीक्षणसृष्टिक्रिययोरुक्तेरित्यर्थः ।

**तत्त्वित्यनुवृत्तावपि स इत्युक्तिः ''एको नारायण आसीत्'', ''स मुनिर्भूत्वा समचिन्तयत्'' इत्यादिसमाख्यां सूचयितुमित्युक्तम् ।।४।।**

ತತ್ವಪ್ರದೀಪ ಹಾಗೂ ಚಂದ್ರಿಕಾಗ್ರಂಥಗಳಲ್ಲಿ ಕರ್ಮಪದದ ಸಾರ್ಥಕ್ಯವನ್ನು ಹೀಗೆ ಹೇಳಲಾಗಿದೆ. 'ನ ಕರ್ತೃತ್ವಂ ನ ಕರ್ಮಾಣಿ' ಎಂಬಲ್ಲಿ ಸೃಷ್ಟಿಯನ್ನು ಹೇಳಲಾಗಿದೆ. 'ಈಕ್ಷತಿಶ್ಚ ಕರ್ಮ ಚ ತಯೋಃ' ಎಂಬುದಾಗಿ ಈಕ್ಷಣ ಕ್ರಿಯೆ ಹಾಗೂ ಸೃಷ್ಟಿಕ್ರಿಯೆಗಳ ವಚನವು ಇರುವುದರಿಂದ ಎಂದರ್ಥ. 'ತತ್' 'ತು' ಎಂಬ ಪದಗಳು ಅನವೃತ್ತವಾಗುತ್ತವೆ. ಆದರೂ ಸಹ 'ಸಃ' ಎಂದು ಏಕೆ ಹೇಳಿದ್ದಾರೆ ಎಂದರೆ 'ಏಕೋ ನಾರಾಯಣ ಆಸೀತ್' 'ಸ ಮುನಿರ್ಭೂತ್ವಾ ಸಮಚಿಂತಯತ್' ಇತ್ಯಾದಿ ಶ್ರುತಿಗಳ ಸಮಾಖ್ಯಾನವನ್ನು ಸೂಚನೆ ಮಾಡುವುದಕ್ಕಾಗಿ ಎಂದು ವ್ಯಾಖ್ಯಾನ ಮಾಡಿದ್ದಾರೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಸದಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಸದಧಿಕರಣ
## ಮತ್ತು
## ವಿಮರ್ಶೆ

**ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ -**

ಪೂರ್ವಪಕ್ಷ - 'ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' ಎಂಬ ವಾಕ್ಯದಲ್ಲಿ ಧ್ಯಾನಕ್ಕೆ ವಿಷಯವಾದ ವಸ್ತು, ಹಿರಣ್ಯಗರ್ಭನೆಂಬ ಅಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್' ಎಂಬುದಾಗಿ ಯಾರು ಅಂತಹ ವ್ಯಕ್ತಿಯನ್ನು ತಿಳಿಯುತ್ತಾನೋ, ಅವನಿಗೆ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಪರಿಚ್ಛಿನ್ನವಾದ ದೇಶಪ್ರಾಪ್ತಿಯೆಂಬ ಫಲವನ್ನು ಹೇಳಲಾಗಿದೆ. ಪರಬ್ರಹ್ಮನನ್ನು ತಿಳಿಯುವಂತಹ ವ್ಯಕ್ತಿಗೆ ದೊರೆಯುವ ಫಲವು ದೇಶಪರಿಚ್ಛಿನ್ನವಾಗಲು ಸಾಧ್ಯವಿಲ್ಲ. ಆದ್ದರಿಂದ ಅಪರಬ್ರಹ್ಮನೇ ಪ್ರತಿಪಾದ್ಯನೆಂದು ಪೂರ್ವಪಕ್ಷ.

ಸಿದ್ಧಾಂತ - ಧ್ಯಾನಕ್ಕೆ ವಿಷಯವಾದ ಈ ವಸ್ತು ಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಇಂತಹ ಧ್ಯಾತನಾದ ವ್ಯಕ್ತಿಯೇ ಈಕ್ಷಣಕ್ಕೆ ಕರ್ಮನಾಗಿದ್ದಾನೆಂದು ಹೇಳಲಾಗಿದೆ. ಈಕ್ಷಣವಾದರೂ ಸಹ ಪಾರಮಾರ್ಥಿಕವಾದ ಸದ್ವಿಷಯಕವೇ ಆಗಿರುತ್ತದೆ.

ಬ್ರಹ್ಮನನ್ನು ಬಿಟ್ಟು ಇತರ ಯಾವುದೇ ಪದಾರ್ಥವೂ ಸಹ ಪಾರಮಾರ್ಥಿಕವಲ್ಲ. ಮತ್ತೆ, ಈಕ್ಷಣೀಯನಾದವನು ಪರಬ್ರಹ್ಮನೇ ಆಗಲಿ, ಆದರೆ ಅಭಿಧ್ಯಾನಕ್ಕೆ ವಿಷಯನಾದವನು ಮಾತ್ರ ಅಪರಬ್ರಹ್ಮನಾಗಲಿ ಎಂದೂ ಕೂಡ ಹೇಳಬಾರದು. ಏಕೆಂದರೆ ಜ್ಞಾನಕ್ಕೆ ವಿಷಯನಾದವನೇ ಧ್ಯಾನಕ್ಕೂ ಕೂಡ ವಿಷಯನಾಗುತ್ತಾನೆ.

ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದೆ -

ಈಕ್ಷಣಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ ।
ಅರ್ಥ ಔತ್ಸರ್ಗಿಕಂ ತತ್ತ್ವವಿಷಯತ್ವಂ ತಥೇಕ್ಷತೇಃ ॥

ಧ್ಯಾನವು ಜ್ಞಾನಕ್ಕೆ ಕಾರಣವಾದ್ದರಿಂದ ಧ್ಯಾನವು ಕಾರಣವಾದರೆ, ಈಕ್ಷಣವು ಕಾರ್ಯವಾಗಿದೆ. ಹೀಗೆ ಕಾರ್ಯಕಾರಣಗಳಾದ ಈಕ್ಷಣ ಹಾಗೂ ಧ್ಯಾನಗಳಿಗೆ ಒಂದೇ ವಿಷಯವಿರಬೇಕು. ಸಾಮಾನ್ಯವಾಗಿ ಈಕ್ಷಣಕ್ಕೆ ವಿಷಯವಾದದ್ದು ತಾತ್ವಿಕವೇ ಆಗಿರುತ್ತದೆಂಬುದು ಔತ್ಸರ್ಗಿಕನಿಯಮ.

ನಿರುಪಾಧಿಕವಾದ ಬ್ರಹ್ಮಜ್ಞಾನವೇ ಅಪರಿಚ್ಛಿನ್ನಫಲವುಳ್ಳದ್ದಾಗಿರುತ್ತದೆ. ಆದರೆ ಪ್ರಕೃತ ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸುವಂತಹ ಓಂಕಾರವೆಂಬ ಉಪಾಧಿಯು ಇರುವುದರಿಂದ. ಇದರ ಫಲವು ಪರಿಚ್ಛಿನ್ನವಾಗಿದೆಯೆಂಬುದು ಯುಕ್ತವಾಗುತ್ತದೆಂಬುದು ಸಿದ್ಧಾಂತ. ಹೀಗೆ ಅದ್ವೈತಿಗಳು ಈ ಅಧಿಕರಣವನ್ನು ರಚಿಸಿದ್ದಾರೆ.

ಅದ್ವೈತಿಗಳ ಈ ಅಧಿಕರಣ ಶರೀರ ಅಸಾಧುವಾಗಿದೆ. ಏಕೆಂದರೆ ಅದ್ವೈತಿಗಳ ಪ್ರಕಾರ ಕರ್ಮಶಬ್ದಕ್ಕೆ ಭಾವಪ್ರಧಾನ ನಿರ್ದೇಶ ಮಾಡಬೇಕು. ಹೀಗೆ ಮಾಡಿದರೆ ಕಲ್ಪನಾಗೌರವ-ರೂಪದೋಷವು ಬರುತ್ತದೆ.

ಮತ್ತು ನಿರವಕಾಶವಾದ ಪ್ರಥಮಶ್ರುತವಾದ ಪರಾತ್ಪರತ್ವವೆಂಬ ಬ್ರಹ್ಮನ ಲಿಂಗವು ಇರುವಾಗ ಇದನ್ನು ಬಿಟ್ಟು ಚರಮಶ್ರುತವಾದ ಸಾವಕಾಶವಾದ ಈಕ್ಷತಿಕರ್ಮತ್ವವೆಂಬ ಲಿಂಗವನ್ನು ಸೂತ್ರದಲ್ಲಿ ಹೇಳುವುದು ಅಯುಕ್ತವಾಗುತ್ತದೆ.

ಮತ್ತು ಅದ್ವೈತಮತದಲ್ಲಿ ಜ್ಞಾನಕ್ಕೆ ವಿಷಯವಾದದ್ದು ಮಿಥ್ಯಾಭೂತವೇ ಆಗಿರುತ್ತದೆಂಬ ನಿಯಮವಿರುವುದರಿಂದ ಈಕ್ಷಣಕರ್ಮತ್ವವು ಪಾರಮಾರ್ಥಿಕಸತ್ತಾದ ಬ್ರಹ್ಮನೇ ಆಗಿದ್ದಾನೆನ್ನಲು ಹೇತುವಾಗುವುದಿಲ್ಲ.

ಮತ್ತು ಧ್ಯಾನವು ಪರಮಾರ್ಥಸದ್ವಿಷಯಕವಾದ ಈಕ್ಷಣದ ಜೊತೆಗೆ ಏಕವಿಷಯತ್ವವನ್ನು ಹೊಂದಿದೆಯೆಂದು ಹೇಳುವುದಕ್ಕೋಸ್ಕರ ಅದು ನಿರುಪಾಧಿಕಬ್ರಹ್ಮವಿಷಯಕವಾಗಿದೆಯೆಂದು ಹೇಳಿದಿರಿ. ಇದು ವ್ಯಾಹತವಾಗಿದೆ. ಮತ್ತು ಪರಿಚ್ಛಿನ್ನಫಲಕ್ಕೋಸ್ಕರ ಧ್ಯಾನಕ್ಕೆ ಓಂಕಾರೌಪಾಧಿಕ-ವಿಷಯತ್ವವನ್ನು ಹೇಳಿದಿರಿ. ಇದೂ ಕೂಡ ವ್ಯಾಹತವಾಗಿದೆ. ಅಂದರೆ ಮೊದಲು ನಿರುಪಾಧಿಕ-ಬ್ರಹ್ಮವಿಷಯವೆಂದು ಒಪ್ಪಿ, ಅನಂತರ ಪರಿಚ್ಛಿನ್ನಫಲಕ್ಕೋಸ್ಕರ ಸೋಪಾಧಿಕಬ್ರಹ್ಮವಿಷಯತ್ವವನ್ನು ಒಪ್ಪುವುದು ವಿರುದ್ಧವಾಗಿದೆಯೆಂದು ಅಭಿಪ್ರಾಯ.

ಮತ್ತು ಓಂಕಾರೋಪಾಧಿಕವಾದ ಧ್ಯಾನಕ್ಕೆ ಪರಿಚ್ಛಿನ್ನಫಲವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ 'ಓಂಕಾರೇಣೈವಾಯನೇನಾನ್ವೇತಿ ವಿದ್ವಾನ್ ಯತ್ತಚ್ಛಾಂತಮಜರಮಮೃತಮಭಯಂ ಪರಂ ಚ' ಎಂಬ ವಾಕ್ಯಶೇಷದಲ್ಲಿ ಓಂಕಾರಧ್ಯಾನಕ್ಕೆ ಅಪರಿಚ್ಛಿನ್ನಫಲವನ್ನು ಹೇಳಲಾಗಿದೆ.

ಮತ್ತು

'ಈಕ್ಷಣಸ್ಯಾನುಸಾರೇಣ ಧ್ಯಾನಂ ಸದ್ವಿಷಯಂ ಯದಿ ।
ತರ್ಹಿ ಧ್ಯಾನಾನುಸಾರೇಣಾಸ್ತ್ವೀಕ್ಷಣಂ ಕಲ್ಪಿತಾರ್ಥಕಮ್ ॥೧॥'

ಈಕ್ಷಣಕ್ಕೆ ಅನುಸಾರಿಯಾಗಿ ಧ್ಯಾನವು ಸತ್ಪದಾರ್ಥವಿಷಯಕವೆಂದು ಹೇಳುತ್ತಿದ್ದೀರಿ. ಹಾಗಾದರೆ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವೇ ಕಲ್ಪಿತಾರ್ಥವಿಷಯಕವೆಂದು ಏಕೆ ಹೇಳಬಾರದು?

ನಿಮ್ಮ ಮತದಲ್ಲಿ 'ಯೋಷಿತಮಗ್ನಿಂ ಧ್ಯಾಯೀತ' ಇತ್ಯಾದಿ ಸ್ಥಳದಲ್ಲಿ ಧ್ಯಾನಕ್ಕೆ ಆರೋಪಿತ ವಿಷಯತ್ವವನ್ನೇ ಸ್ಪಷ್ಟವಾಗಿ ಸಮರ್ಥಿಸಲಾಗಿದೆ. ಹೀಗಿರುವಾಗ ಪ್ರಕೃತ ಸದ್ವಿಷಯಕತ್ವವನ್ನು ಒಪ್ಪುವುದು ತಪ್ಪಾಗುತ್ತದೆ. ಮತ್ತು 'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ' 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಇತ್ಯಾದಿ ಸ್ಥಳಗಳಲ್ಲಿ ಈಕ್ಷಣವೂ ಕೂಡ ಮಿಥ್ಯಾವಿಷಯಕವೇ ಆಗಿದೆಯೆಂದು ನೀವು ಒಪ್ಪಲೇ ಬೇಕು. ಆದ್ದರಿಂದ ಆರೋಪಿತ-ವಿಷಯಕವಾದ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವನ್ನು ಕಲ್ಪಿತಾರ್ಥವಿಷಯಕವೆಂದು ಹೇಳುವುದೇ ಸಮಂಜಸ.

'ಯ ಏಷೋಽಂತರಾದಿತ್ಯೇ' ಇತ್ಯಾದಿ ಸ್ಥಳಗಳಲ್ಲಿ ವ್ಯಾವಹಾರಿಕ ವಿಷಯತ್ವವನ್ನು ಒಪ್ಪುತ್ತೇವೆಂದು ಹೇಳಿದರೆ, ಹಿರಣ್ಯಗರ್ಭವಿಷಯಕವೆಂದೂ ಸಹ ಹೇಳಬಹುದು. ಆದ್ದರಿಂದ ಹಿರಣ್ಯಗರ್ಭನು 'ಪರಾತ್ಪರಮ್' ಎಂಬ ವಾಕ್ಯದಿಂದ ಪ್ರತಿಪಾದ್ಯನಲ್ಲ. ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿಮ್ಮಿಂದ ಸಮರ್ಥಿಸಲು ಸಾಧ್ಯವಿಲ್ಲ.

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಅದ್ವೈತಿಗಳು 'ಈಕ್ಷತಿಕರ್ಮ' ಎಂಬ ಸೂತ್ರದಿಂದ ಜೀವ ಹಾಗೂ ಬ್ರಹ್ಮರಿಗೆ ಕರ್ತೃ-ಕರ್ಮಭಾವವನ್ನು ಒಪ್ಪಿರುತ್ತಾರೆ. ಇದರಿಂದ ಜೀವಬ್ರಹ್ಮರಿಗೆ ಭೇದವನ್ನೇ ಒಪ್ಪಿದಂತಾಯಿತು. ಮತ್ತು ಬ್ರಹ್ಮನಿಗೆ ದೃಶ್ಯತ್ವವನ್ನು ಹೇಳಿದ್ದರಿಂದ ಅದ್ವೈತಿಗಳಿಗೆ ಈ ಅಧಿಕರಣವೂ ಕೂಡ ಮುಳ್ಳಾಗಿದೆ.

ರಾಮಾನುಜರ ಅಧಿಕರಣಶರೀರ ಹೀಗಿದೆ - 'ಈಕ್ಷತಿಕರ್ಮ' 'ಪರಾತ್ಪರಂ' 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಲ್ಲಿ ಜ್ಞಾನಕ್ಕೆ ವಿಷಯನಾದವನೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮತ್ವೇನ ವ್ಯಪದೇಶ ಮಾಡಿದ್ದರಿಂದ ಎಂದು ಸೂತ್ರಾರ್ಥ.

ಪ್ರಶ್ನೆ - ಈ ಅಧಿಕರಣದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಏಕೆಂದರೆ 'ಪುರುಷಮೀಕ್ಷತೇ' ಎಂಬ ವಾಕ್ಯದಲ್ಲಿ ಪರಾತ್ಪರತ್ವಾದಿಲಿಂಗಗಳು ಕೇಳಿಸುತ್ತಿವೆ. 'ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ' 'ಯಾವರೀತಿಯಾಗಿ ಸರ್ಪವು ತನ್ನ ಚರ್ಮವನ್ನು ಕಳಚಿಕೊಳ್ಳುತ್ತದೋ, ಅದರಂತೆ ಪರಾತ್ಪರನಾದವನನ್ನು ತಿಳಿದಂತಹ ಪುರುಷನು ಪಾಪಗಳನ್ನು ಕಳಚಿಕೊಳ್ಳುತ್ತಾನೆ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಪರಾತ್ಪರನನ್ನು ತಿಳಿದವನು ಪಾಪಲೇಪವಿಲ್ಲದವನಾಗುತ್ತಾನೆಂದು ಹೇಳಲಾಗಿದೆ. ಮುಂದಿನ ವಾಕ್ಯದಲ್ಲಿಯೂ ಸಹ ಅಮೃತತ್ವ-ಅಭಯತ್ವ ಮೊದಲಾದ ಬ್ರಹ್ಮನ ಧರ್ಮಗಳೇ ಸ್ಪಷ್ಟವಾಗಿ ಗೋಚರವಾಗುತ್ತಿವೆ. ಹೀಗೆ ಎಲ್ಲವೂ ಪರಬ್ರಹ್ಮವಿಷಯಕವೇ ಆಗಿರುವುದರಿಂದ ಪೂರ್ವಪಕ್ಷವು ಹುಟ್ಟಲು ಹೇಗೆ ಸಾಧ್ಯ ?

ಉತ್ತರ - ಚತುರ್ಮುಖನೇ ಈ ವಾಕ್ಯಕ್ಕೆ ವಿಷಯನಾಗಿದ್ದಾನೆಂದು ಪೂರ್ವಪಕ್ಷವು ಹುಟ್ಟುತ್ತದೆ. ಏಕೆಂದರೆ ಹಿಂದಿನ ವಾಕ್ಯದಲ್ಲಿ 'ಸೋಽಂತರಿಕ್ಷಂ ಯಜುರ್ಭಿಃ' ಇತ್ಯಾದಿಯಾಗಿ ಪ್ರಣವದ ಒಂದು ಅಕ್ಷರದ ಧ್ಯಾನದಿಂದ ಮನುಷ್ಯಲೋಕವು ಪ್ರಾಪ್ತವಾಗುತ್ತದೆ. ಎರಡು ಅಕ್ಷರಗಳ ಧ್ಯಾನದಿಂದ ಅಂತರಿಕ್ಷಲೋಕದ ಪ್ರಾಪ್ತಿಯಾಗುತ್ತದೆಂದು ಹೇಳಲಾಗಿದೆ. ಪ್ರಾಕೃತವಾದ

ಅಂತರಿಕ್ಷಲೋಕದ ಸನ್ನಿಧಾನದಿಂದ ಮುಂದಿರುವ 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್' ಮೂರು ಅಕ್ಷರಗಳ ಧ್ಯಾನದಿಂದ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಿದ್ದರಿಂದ ಬ್ರಹ್ಮಲೋಕವು ಪ್ರಾಕೃತವಾದ ಚತುರ್ಮುಖಬ್ರಹ್ಮಲೋಕವೇ ಆಗಬೇಕು. ಆದ್ದರಿಂದ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗಿ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷವು ಉದಯವಾಗುತ್ತದೆ. ಹೀಗೆ ರಾಮಾನುಜರು ಪೂರ್ವಪಕ್ಷದ ಉದಯವನ್ನು ಸಮರ್ಥಿಸುತ್ತಾರೆ.

ಈ ವ್ಯಾಖ್ಯಾನವು ಸರಿಯಲ್ಲ. ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ, 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರದಲ್ಲಿ ಕೇವಲ 'ವ್ಯಪದೇಶಾತ್' ಎಂದಷ್ಟೇ ಹೇಳದೇ, ಆ ವ್ಯಪದೇಶಕ್ಕೆ ವಿಷಯವಾದದ್ದು ಯಾವುದು ಎಂದು ಹೇಳಿದ್ದಾರೆ. ಅದರಂತೆ ಪ್ರಕೃತ ಈ ಸೂತ್ರದಲ್ಲಿಯೂ 'ಈಕ್ಷತಿಕರ್ಮವ್ಯಪದೇಶಾತ್' ಎಂಬುದಾಗಿ ವ್ಯಪದೇಶಕ್ಕೆ ವಿಷಯ-ವಾದದ್ದನ್ನೇ 'ಈಕ್ಷತಿಕರ್ಮ' ಎಂದು ಸ್ಪಷ್ಟಪಡಿಸಿದ್ದಾರೆ. ಹೀಗೆ ಸೂತ್ರವನ್ನು ವ್ಯಾಖ್ಯಾನಿಸಲು ಬರುವಾಗ 'ವ್ಯಪದೇಶಾತ್' ಎಂಬುದನ್ನು ಮಾತ್ರ ಹೇತುವೆಂದು ಪರಿಗಣಿಸುವುದು ಸರಿಯಲ್ಲ. ಅಂದರೆ ಅರ್ಥವಿಶೇಷಘಟಿತವಾದ ಹೇತುವೇ ಸಿದ್ಧಾಂತಸಾಧಕವಾಗುತ್ತದೆ. ಆದ್ದರಿಂದ ಅಂತಹ ಅರ್ಥವಿಶೇಷಘಟಿತವಾದ ವ್ಯಪದೇಶವನ್ನೇ ಹೇತುವನ್ನಾಗಿ ಹೇಳಬೇಕು. 'ತದ್ಧರ್ಮ' 'ಭೇದ' ಇತ್ಯಾದಿಯಾಗಿ ವ್ಯಪದೇಶದ ಜೊತೆಗೆ ಸಿದ್ಧಾಂತಸಾಧಕವಾದ ಅಥವಾ ವಿಶೇಷವಾಚಕ ಶಬ್ದಗಳು ಸೇರಿರುವಂತೆ ಇಲ್ಲಿಯೂ ಸಹ ಎಂದರ್ಥ.

ಮತ್ತು ಸನ್ನಿಧಾನದ ಬಲದಿಂದ ಲಿಂಗಾದಿಗಳಿಗೆ ಅರ್ಥಾಂತರವನ್ನು ಮಾಡುವ ಮೂಲಕ ಪೂರ್ವಪಕ್ಷವು ಹುಟ್ಟುತ್ತದೆಂದು ನೀವು ಸಮರ್ಥಿಸಿದ್ದೂ ಕೂಡ ಸರಿಯಲ್ಲ. ಏಕೆಂದರೆ ನಿಮ್ಮ ಪ್ರಕಾರ ಬ್ರಹ್ಮಮೀಮಾಂಸಶಾಸ್ತ್ರದ ಪೂರ್ವಭಾಗವೆಂದೇ ಪರಿಗಣಿತವಾದ ಪೂರ್ವಮೀಮಾಂಸಾ-ಗ್ರಂಥದಲ್ಲಿ 'ಆನಂತರ್ಯಮಚೋದನಾ' ಎಂಬ ಸೂತ್ರವಿದೆ. ಇದರಲ್ಲಿ ಲಿಂಗಾದಿಗಳಿಗಿಂತಲೂ ಕೂಡ ಸನ್ನಿಧಾನವೇ ದುರ್ಬಲವಾಗಿದೆಯೆಂದು ಸಮರ್ಥಿಸಿದ್ದಾರೆ. ಹೀಗಿರುವಾಗ ಅದಕ್ಕೆ ವಿಪರೀತವಾಗಿ ಸನ್ನಿಧಾನದಿಂದ ಲಿಂಗಾದಿಗಳಿಗೆ ನೀವು ಹೇಳುತ್ತಿರುವ ದೌರ್ಬಲ್ಯವು ತಪ್ಪಾಗುತ್ತದೆ. ಆದ್ದರಿಂದ ಸನ್ನಿಧಾನಕ್ಕೆ ಪ್ರಾಬಲ್ಯವನ್ನು ಒಪ್ಪಿ ಪೂರ್ವಪಕ್ಷವನ್ನು ಸಮರ್ಥಿಸಲು ನಿಮ್ಮಿಂದ ಸಾಧ್ಯವಾಗುವುದಿಲ್ಲ.

**ಇಲ್ಲಿಗೆ ಸದಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ದಹರಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥
॥ ಶ್ರೀವೇದವ್ಯಾಸಾಯ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥
॥ ಶ್ರೀಗುರುಭ್ಯೋ ನಮಃ ॥

# ದಹರಾಧಿಕರಣ

## ।। अथ दहराधिकरणम् ।।

## ಬ್ರಹ್ಮಸೂತ್ರ

### 'ದಹರ ಉತ್ತರೇಭ್ಯಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। दहर उत्तरेभ्यः ।। २४ ।।**

**ಸೂತ್ರಾರ್ಥ - ಸಣ್ಣದಾದ ಹೃದಯ ಪದ್ಮದಲ್ಲಿರುವ ಆಕಾಶದಲ್ಲಿ ನೆಲೆಸಿರುವವನು ವಿಷ್ಣುವೇ ಹೊರತು ಜೀವಾದಿಗಳಲ್ಲ. ಏಕೆಂದರೆ ಮುಂದಿನ ವಾಕ್ಯಗಳಲ್ಲಿ ಅಪಹತಪಾಪ್ಮತ್ವಾದಿ ಧರ್ಮಗಳನ್ನು ಹೇಳಿರುವುದರಿಂದ.**

ಅರ್ಥ -- ದಹರೇ = 'ದಹರಂ ಪುಂಡರೀಕಂ ವೇಶ್ಮ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ಸಣ್ಣದಾದ ಆಕಾಶದಲ್ಲಿ ನೆಲೆಸಿರುವವನು ವಿಷ್ಣುವೇ ಆಗಿದ್ದಾನೆ ಹೊರತು ಜೀವಾದಿಗಳಲ್ಲ. ಏಕೆಂದರೆ ಉತ್ತರೇಭ್ಯಃ = 'ಯ ಆತ್ಮಾ ಅಪಹತಪಾಪ್ಮಾ' ಮುಂತಾದ ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಕೂಡುವುದರಿಂದ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಸಕಲಕ್ಕೂ ಆಧಾರವಾದದ್ದು ಆಕಾಶವೆಂದು ಪೂರ್ವಪಕ್ಷ

**ब्रह्मसूत्रभाष्यम् – चन्द्रादित्याद्याधारत्वं विष्णोरुक्तम् । तत्र 'एतस्मिन् ब्रह्मपुरे दहरं पुण्डरीकं वेश्म दहरोऽस्मिन्नन्तर आकाशः किं तदत्र विद्यते' (छां. ८-१-२.) 'उभे अस्मिन् द्यावापृथिवी अन्तरेव समाहिते उभावग्निश्च वायुश्च सूर्याचन्द्रमसावुभौ । विद्युन्नक्षत्राणि' (छां ८-१-३) इत्यादिनाऽऽकाशस्य प्रतीयते ।**

ಅನುವಾದ - ಚಂದ್ರ, ಸೂರ್ಯ, ಸ್ವರ್ಗ, ಭೂಮಿ ಇವುಗಳಿಗೆ ಆಧಾರನಾದವನು ವಿಷ್ಣುವೆಂದು ಹಿಂದಿನ ಅಕ್ಷರಾಧಿಕರಣದಲ್ಲಿ ನಿರ್ಣಯಿಸಲಾಯಿತು. ಆದರೆ ಛಾಂದೋಗ್ಯ ಶ್ರುತಿಯಲ್ಲಿ ಆಕಾಶವೇ ಸೂರ್ಯ, ಚಂದ್ರಾದಿಗಳಿಗೆ ಆಧಾರವೆಂದು ಹೇಳಲಾಗಿದೆ -

'ಹೃದಯ ಗುಹೆಯಲ್ಲಿ ಸಣ್ಣದಾದ ಕಮಲದಲ್ಲಿ ಸೂಕ್ಷ್ಮಾಕಾಶವಿದೆ' ಎಂದು ಗುರುಗಳು ಉಪದೇಶಿಸಿದಾಗ ಶಿಷ್ಯನು ಪ್ರಶ್ನಿಸುತ್ತಾನೆ. 'ಆ ಸೂಕ್ಷ್ಮಾಕಾಶದಲ್ಲಿ ಏನಿದೆ?' ಗುರುಗಳು ಹೀಗೆ ಉತ್ತರಿಸುತ್ತಾರೆ - 'ಸೂಕ್ಷ್ಮಾಕಾಶದಲ್ಲಿ ಸ್ವರ್ಗ, ಭೂಮಿ ಎಲ್ಲವೂ ಸಹ ಒಳಗೆ ಆಶ್ರಿತವಾಗಿವೆ ಮತ್ತು ಮಿಂಚು ನಕ್ಷತ್ರ ಇವುಗಳೆಲ್ಲವೂ ಇಂತಹ ಹೃದಯಾಕಾಶದಲ್ಲೇ ಆಶ್ರಿತವಾಗಿವೆ' ಎಂದು.

ಈ ಛಾಂದೋಗ್ಯದ ಪ್ರಕರಣವನ್ನು ನೋಡಿದಾಗ ಸೂರ್ಯ, ಚಂದ್ರಾದಿಗಳಿಗೆಲ್ಲಾ ಆಧಾರವಾದದ್ದು ಆಕಾಶವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಜೀವ, ಆಕಾಶ ಇವುಗಳಲ್ಲಿ ಆಪಾತತಃ ತೋರುವ ಹೃದಯಾಕಾಶದಲ್ಲಿರುವಿಕೆ ಎಂಬ ಅರ್ಥದ 'ದಹರ' ಎಂಬ ಧರ್ಮದ ಸಮನ್ವಯವನ್ನು ಮಾಡುತ್ತಿದ್ದಾರೆ. ಇದರಿಂದ 'ಹೃತ್ಪದ್ಮಸ್ಥತ್ವ'ವೆಂಬ ಲಿಂಗದ ಸಮನ್ವಯವನ್ನು ನೇರವಾಗಿ ಅಥವಾ ಪರಂಪರೆಯಿಂದ ಸಾಧಿಸಿದಂತಾಗುತ್ತದೆ. ಈ ಲಿಂಗದ

ಸಮನ್ವಯದಿಂದ ವಿಷ್ಣುವಿನಲ್ಲಿ ಅಸಾಧಾರಣವಾದ ಅನೇಕ ಧರ್ಮಗಳ ಸಮನ್ವಯವನ್ನು ಮಾಡಿದಂತಾಗುತ್ತದೆ. ಮೊದಲು ವಿಷಯ ಮತ್ತು ಪೂರ್ವಪಕ್ಷಗಳನ್ನು ತೋರಿಸುತ್ತಿದ್ದಾರೆ -

ಚಂದ್ರಾದಿತ್ಯಾದ್ಯಾಧಾರತ್ವಂ = ಚಂದ್ರ, ಸೂರ್ಯ, ಸ್ವರ್ಗ ಮೊದಲಾದವು-ಗಳಿಗೆ ಆಧಾರವಾಗಿರುವಿಕೆಯು, ವಿಷ್ಣೋಃ = ವಿಷ್ಣುವಿನ, ಉಕ್ತಮ್ = ಧರ್ಮವೆಂದು ಹಿಂದಿನ ಅಕ್ಷರಾಧಿಕರಣದಲ್ಲಿ ಹೇಳಲಾಯಿತು, ತಚ್ಚ = ಅಂತಹ, ಸೂರ್ಯಚಂದ್ರಾದಿ ಆಧಾರತ್ವವು ಮತ್ತು ಹೃತ್ಪದ್ಮಸ್ಥತ್ವವು ಭೂತಾಕಾಶದಲ್ಲಿ ತೋರುತ್ತಿದೆ. ಈ ಶ್ರುತಿವಾಕ್ಯವು ಹೀಗಿದೆ -

ಏತಸ್ಮಿನ್ ಬ್ರಹ್ಮಪುರೇ = ಇಂತಹ ಹೃದಯವೆಂಬ ಗುಹೆಯಲ್ಲಿ, ದಹರಂ = ಸಣ್ಣದಾದ, ಪುಂಡರೀಕಂ ವೇಶ್ಮ = ಕಮಲವೆಂಬ ಮನೆಯು ಇದೆಯೋ, ತಸ್ಮಿನ್ = ಅದರಲ್ಲಿ, ದಹರಃ ಆಕಾಶಃ = ಅತ್ಯಂತ ಸೂಕ್ಷ್ಮವಾದ ಆಕಾಶವು ಇರುತ್ತದೆ, ಹೀಗೆ ಗುರುಗಳು ಶಿಷ್ಯನಿಗೆ ಉಪದೇಶಿಸಿದರು.

ಶಿಷ್ಯನು ಪ್ರಶ್ನಿಸುತ್ತಾನೆ. ತದತ್ರ = ಆ ಸೂಕ್ಷ್ಮಾಕಾಶದಲ್ಲಿ, ಕಿಂ ವಿದ್ಯತೇ = ಏನಿದೆ?

ಗುರುಗಳು ಉತ್ತರಿಸುತ್ತಾರೆ, ಅಸ್ಮಿನ್ = ಈ ಸೂಕ್ಷ್ಮಾಕಾಶದಲ್ಲಿ, ದ್ಯಾವಾಪೃಥಿವೀ = ಸ್ವರ್ಗ, ಭೂಮಿ ಮೊದಲಾದವು, ಅಂತರೇವ = ಒಳಗೇ, ಸಮಾಹಿತೇ = ಆಶ್ರಿತವಾಗಿವೆ, ಮತ್ತು ಉಭೇ = ಮುಕ್ತ ಮತ್ತು ಅಮುಕ್ತರಿಬ್ಬರೂ, ಅಗ್ನಿಶ್ಚ ವಾಯುಶ್ಚ ಉಭೌ = ಅಗ್ನಿ, ವಾಯುಗಳಿಬ್ಬರೂ, ಸೂರ್ಯಾಚಂದ್ರಮಸೌ ಉಭೌ = ಸೂರ್ಯ ಚಂದ್ರರಿಬ್ಬರೂ, ವಿದ್ಯುನ್ನಕ್ಷತ್ರಾಣಿ = ಮಿಂಚು ಹಾಗೂ ನಕ್ಷತ್ರಗಳು, (ನೆಲೆಸಿವೆ), ಇತ್ಯಾದಿನಾ = ಇವೇ ಮೊದಲಾದ, ಶ್ರುತಿ ವಾಕ್ಯದಿಂದ, ಆಕಾಶಸ್ಯ = ಆಕಾಶಕ್ಕೆ, ಪ್ರತೀಯತೇ = ಸೂರ್ಯಚಂದ್ರಾದಿ ಆಧಾರತ್ವವು ಮತ್ತು ಹೃತ್ಪದ್ಮಸ್ಥತ್ವವು ತೋರುತ್ತದೆ.

## ಆಕಾಶವೆಂದರೆ ವಿಷ್ಣುವಲ್ಲ

**ब्रह्मसूत्रभाष्यम् –** स चाऽकाशो न विष्णुः । 'तस्यान्ते सुषिरꣳ सूक्ष्मं (तस्मिन् सर्वं प्रतिष्ठितम्') (महाना.१-१.) इति श्रुतेरिति । अत आह –

ಅನುವಾದ - ಈ ಆಕಾಶವಾದರೂ, ವಿಷ್ಣುವಾಗಲು ಸಾಧ್ಯವಿಲ್ಲ, ಏಕೆಂದರೆ ಮಹಾನಾರಾಯಣೋಪನಿಷತ್ತಿನಲ್ಲಿ, 'ತಸ್ಯಾಂತೇ ಸುಷಿರಂ' ಇತ್ಯಾದಿಯಾಗಿ, ಹೃದಯದಲ್ಲಿರುವ ಪ್ರಸಿದ್ಧವಾದ ಜಡಾಕಾಶವನ್ನೇ ಸರ್ವಾಧಾರವೆಂದು ಹೇಳಲಾಗಿದೆ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು, ಸೂತ್ರವನ್ನು ರಚಿಸುತ್ತಿದ್ದಾರೆ. 'ದಹರ ಉತ್ತರೇಭ್ಯಃ' ಎಂದು.

ಪ್ರತಿಪದಾರ್ಥ -- ಆಕಾಶವು ಸಕಲಕ್ಕೂ ಆಧಾರವಾಗಿದೆ. ಮತ್ತು ಹೃದಯಪದ್ಮದಲ್ಲಿದೆ ಎಂದು ಹೇಳೋಣ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಂತೆ, ಆಕಾಶಶಬ್ದವು ವಿಷ್ಣು ಪರವಾಗಿರುವುದರಿಂದ, ವಿಷ್ಣುವಿನಲ್ಲಿಯೇ ಹೃತ್ಪದ್ಮಸ್ಥತ್ವವು ಸಿದ್ಧವಾಗುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಸ ಚ = ಅಂತಹ, ಆಕಾಶಃ = ಆಕಾಶವು, ವಿಷ್ಣುಃ = ವಿಷ್ಣುವೆಂದು, ನ = ಹೇಳಲಾಗದು, ಏಕೆಂದರೆ ನಾರಾಯಣೋಪನಿಷತ್ತಿನಲ್ಲಿ, ತಸ್ಯಾಂತೇ = ಹೃದಯದ ಅಂತ್ಯದಲ್ಲಿ, ಸುಷಿರꣳ = ಛಿದ್ರ ಸ್ವರೂಪವಾದ, ಸೂಕ್ಷ್ಮಂ = ಸೂಕ್ಷ್ಮವಾದ ತತ್ವವಿದೆ, ತಸ್ಮಿನ್ = ಭೂತಾಕಾಶದಲ್ಲಿ, ಸರ್ವಂ = ಸಕಲ ಪದಾರ್ಥವೂ, ಪ್ರತಿಷ್ಠಿತಂ = ಆಶ್ರಿತವಾಗಿದೆ, ಇತಿ ಶ್ರುತೇಃ = ಹೀಗೆ ಶ್ರುತಿಗಳಿರುವುದರಿಂದ, ಭೂತಾಕಾಶವೇ ಸೂರ್ಯಚಂದ್ರಾದಿಗಳಿಗೆ ಆಧಾರವಾಗಿದೆ ಎಂದು ಪೂರ್ವಪಕ್ಷ.

## ಹೃತ್ಪದ್ಮದಲ್ಲಿರುವ ಸಣ್ಣ ಆಕಾಶದಲ್ಲಿರುವವನು ನಾರಾಯಣನೇ

**ब्रह्मसूत्रभाष्यम् – ।। दहर उत्तरेभ्यः ।।**

**'य आत्माऽपहतपाप्मा विजरो विमृत्युः, विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः' (छां.८-७-३) इत्यादिभ्य उत्तरेभ्यो गुणेभ्यो दहरे विष्णुरेव ।**

ಅನುವಾದ - ಯಾವಾತನು ಸರ್ವನಿಯಾಮಕನೂ, ಪಾಪಲೇಪರಹಿತನೂ, ವೃದ್ಧಾಪ್ಯ ಮೊದಲಾದ ದೋಷಗಳಿಲ್ಲದವನೂ, ಮೃತ್ಯುವನ್ನು ಗೆದ್ದವನೂ, ದುಃಖರಹಿತನೂ, ನ್ಯೂನತೆ ಇಲ್ಲದವನೂ, ಹಸಿವು, ನೀರಡಿಕೆ ಮೊದಲಾದ ದೋಷಗಳಿಲ್ಲದವನೂ, ಸತ್ಯವಾದ ಕಾಮನೆ ಉಳ್ಳವನೂ, ಸತ್ಯಸಂಕಲ್ಪನೂ ಆಗಿದ್ದಾನೋ ಅಂತಹವನೇ ಹುಡುಕಲು (ಅನ್ವೇಷಣೆಗೆ) ಯೋಗ್ಯನಾಗಿದ್ದಾನೆ. ಅವನನ್ನೇ ವಿಚಾರ ಮಾಡಬೇಕು. ಇತ್ಯಾದಿಯಾಗಿ ಛಾಂದೋಗ್ಯವು ಹೃತ್ಪದ್ಮದಲ್ಲಿರುವ ವ್ಯಕ್ತಿಯನ್ನು ಹೊಗಳುತ್ತಿದೆ. ಈ ಎಲ್ಲ ಗುಣಗಳು ವಿಷ್ಣುವಿನಲ್ಲಿ ಅಸಾಧಾರಣವಾಗಿರುವುದರಿಂದ ವಿಷ್ಣುವೇ ಹೃತ್ಪದ್ಮದಲ್ಲಿದ್ದಾನೆಂದು, ಹಾಗೂ ಸರ್ವಾಧಾರನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಮಾಡುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಾ ವ್ಯಾಖ್ಯಾನಿಸುತ್ತಿದ್ದಾರೆ -

ದಹರಃ = ಹೃತ್ಪದಲ್ಲಿರುವ ಆಕಾಶವೆಂದರೆ ವಿಷ್ಣುವೇ ಆಗಿದ್ದಾನೆ, ಏಕೆಂದರೆ , ಉತ್ತರೇಭ್ಯಃ = ಮುಂದಿನ ವಾಕ್ಯದಲ್ಲಿ ಹೇಳಿರುವ ಗುಣಗಳು ವಿಷ್ಣುವಿನಲ್ಲೇ ಯುಕ್ತವಾಗುವುದರಿಂದ.

ಛಾಂದೋಗ್ಯದ ಮುಂದಿನ ವಾಕ್ಯಗಳು ಹೀಗಿವೆ - ಯಃ = ಯಾವಾತನು, ಆತ್ಮಾ = ಸಕಲನಿಯಾಮಕನೋ, ಅಪಹತಪಾಪ್ಮಾ = ಪಾಪಲೇಪಗಳಿಂದ ರಹಿತನೋ, ವಿಜರಃ = ವೃದ್ಧಾಪ್ಯವೇ ಮೊದಲಾದ ದೋಷಗಳಿಲ್ಲದವನೋ, ವಿಮೃತ್ಯುಃ = ಮೃತ್ಯುವನ್ನು ಗೆದ್ದವನೋ, ವಿಶೋಕಃ = ದುಃಖರಹಿತನೋ, ಅವಿಜಿಘತ್ಸಃ = ಹಸಿವು ಇಲ್ಲದವನೋ,

ಅಪಿಪಾಸಃ = ಬಾಯಾರಿಕೆ ಇಲ್ಲದವನೋ, ಸತ್ಯಕಾಮಃ = ಸತ್ಯವಾದ ಕಾಮನೆಯುಳ್ಳವನೋ, ಸತ್ಯಸಂಕಲ್ಪಃ = ಯಾವುದೇ ಕಾರಣದಿಂದಲೂ ವ್ಯರ್ಥವಾಗದಂತಹ ಸಂಕಲ್ಪ ಉಳ್ಳವನೋ, ಸಃ = ಅಂತಹ ವ್ಯಕ್ತಿಯೇ, ಅನ್ವೇಷ್ಟವ್ಯಃ = ಹುಡುಕಲು ಯೋಗ್ಯನಾಗಿದ್ದಾನೆ, ಸಃ = ಅವನೇ, ವಿಜಿಜ್ಞಾಸಿತವ್ಯಃ = ವಿಚಾರ ಮಾಡಲು ಯೋಗ್ಯನು, ಇತ್ಯಾದಿಭ್ಯಃ = ಇವೇ ಮೊದಲಾದ, ಉತ್ತರೇಭ್ಯಃ = ಮುಂದಿನ ವಾಕ್ಯಗಳಲ್ಲಿರುವ, ಗುಣೇಭ್ಯಃ = ಗುಣಗಳಿಂದ, ದಹರೇ = ಹೃದಯಾಕಾಶದಲ್ಲಿ ಇರುವವನು, ವಿಷ್ಣುರೇವ = ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಅಪಹತಪಾಪ್ಮತ್ವಾದಿಗುಣಗಳೆಲ್ಲವೂ ವಿಷ್ಣುವಿನದ್ದೇ ಆಗಿದೆ

**ब्रह्मसूत्रभाष्यम् – 'योऽशानायापिपासे शोकं मोहं जरां मृत्युमत्येति' (बृ.५-५) 'स एष सर्वेभ्यः पाप्मभ्य उदितः' (छां.१-६-७) इत्यादिना विष्णोरेव हि ते गुणाः ।**

ಅನುವಾದ - 'ಯಾವಾತನು ಹಸಿವು, ನೀರಡಿಕೆ, ದುಃಖ, ಭ್ರಾಂತಿ, ಮುಪ್ಪು, ಮರಣ ಇವುಗಳೆಲ್ಲವನ್ನೂ ದಾಟಿದ್ದಾನೋ, ಅಂತಹ ವ್ಯಕ್ತಿಯೇ, ಸಕಲ ಪಾಪಗಳಿಂದ ರಹಿತನಾಗಿರುತ್ತಾನೆ'. ಇವೇ ಮೊದಲಾದ ಪ್ರಮಾಣಗಳಿಂದ ಪಾಪರಾಹಿತ್ಯಾದಿ ಗುಣಗಳು, ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- 'ಯಃ = ಯಾವಾತನು, ಅಶನಾಯಾ = ಹಸಿವು, ಪಿಪಾಸೇ = ನೀರಡಿಕೆಗಳನ್ನು, ಶೋಕಂ = ದುಃಖವನ್ನು, ಮೋಹಂ = ಮೂರ್ಛೆಯನ್ನು, ಜರಾಂ = ಮುಪ್ಪನ್ನು, ಮೃತ್ಯುಂ = ಮರಣವನ್ನು, ಅತ್ಯೇತಿ = ದಾಟಿದ್ದಾನೋ, ಸ ಏಷಃ = ಅಂತಹ ಇವನೇ, ಸರ್ವೇಭ್ಯಃ ಪಾಪ್ಮಭ್ಯಃ = ಸಕಲ ಪಾಪಗಳಿಂದ, ಉದಿತಃ = ರಹಿತನಾಗಿ ಪ್ರಕಾಶಿಸುತ್ತಾನೆ', ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ತೇ ಗುಣಾಃ = ಹಿಂದಿನ ಅಪಹತಪಾಪ್ಮತ್ವಾದಿ ಸಮಸ್ತ ಗುಣಗಳು, ವಿಷ್ಣೋರೇವ ಹಿ = ಭಗವಂತನದ್ದೇ ಆಗಿವೆ.

### ಹಸಿವು ನೀರಡಿಕೆಗಳನ್ನು ಗೆದ್ದವನು ಶ್ರೀಹರಿ ಮಾತ್ರ

**ब्रह्मसूत्रभाष्यम् – 'नित्यतीर्णाशनायादिरेक एव हरिः स्वतः ।
अशनायादिकानन्ये तत्प्रसादात् तरन्ति हि ।।'**

**इति पाद्मे ।।**

ಅನುವಾದ - ನಿರಂತರವಾಗಿ ಹಸಿವು ನೀರಡಿಕೆಗಳನ್ನು ಗೆದ್ದವನು ಶ್ರೀಹರಿ ಮಾತ್ರ. ಅವನ ಅನುಗ್ರಹದಿಂದ ಬೇರೆಯವರೂ ಸಹ ಹಸಿವು, ನೀರಡಿಕೆಗಳನ್ನು ಗೆಲ್ಲಬಹುದು. ಹೀಗೆ ಪದ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಆದರೂ ಸಹ ಇವುಗಳು ವಿಷ್ಣುವಿನ ಗುಣಗಳಲ್ಲ. ಲಕ್ಷ್ಮೀದೇವಿ ಮೊದಲಾದವರಲ್ಲಿಯೂ ಸಹ ಇಂತಹ ಗುಣಗಳು ಇರಬಹುದಲ್ಲವೆ? ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಸ್ವತಃ = ಮತ್ತೊಬ್ಬರ ಅಪೇಕ್ಷೆ ಇಲ್ಲದೇ, ನಿತ್ಯತೀರ್ಣಾಶನಾಯಾದಿಃ = ಅನಾದ್ಯನಂತಕಾಲದಲ್ಲಿಯೂ, ಹಸಿವು ನೀರಡಿಕೆಗಳನ್ನು ದಾಟಿದವನು, ಏಕ ಏವ = ಒಬ್ಬನೇ ಆದ, ಹರಿಃ = ಶ್ರೀಹರಿಯು, ತತ್ಪ್ರಸಾದಾತ್ = ಇಂತಹ ಶ್ರೀಹರಿಯ ಅನುಗ್ರಹದಿಂದಲೇ, ಅನ್ಯೇ = ರಮಾಬ್ರಹ್ಮಾದಿಗಳೂ ಸಹ, ಅಶನಾಯಾದಿಕಾನ್ = ಹಸಿವು, ನೀರಡಿಕೆ ಮೊದಲಾದವುಗಳನ್ನು, ತರಂತಿ = ದಾಟುತ್ತಾರೆ, ಇತಿ = ಹೀಗೆ, ಪಾದ್ಮೇ = ಪದ್ಮ ಪುರಾಣದಲ್ಲಿ ಹೇಳಲಾಗಿದೆ.

### ಸಾಪೇಕ್ಷನಿರಪೇಕ್ಷಗಳಲ್ಲಿ ನಿರಪೇಕ್ಷವು ಸ್ವೀಕಾರಾರ್ಹ

**ब्रह्मसूत्रभाष्यम् – सापेक्षनिरपेक्षयोश्च निरपेक्षं स्वीकर्तव्यम् ।**

ಅನುವಾದ - ಶ್ರೀಹರಿಯಲ್ಲಿ ಮಾತ್ರ ಅಪಹತಪಾಪ್ಮತ್ವಾದಿಗುಣಗಳು ಸಹಜವಾಗಿ ಇವೆ. ಬೇರೆಯವರಲ್ಲಿ ಈ ಗುಣಗಳು ಶ್ರೀಹರಿಯ ಅಧೀನವಾಗಿವೆ. ಸಾಪೇಕ್ಷನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕು. ಆದ್ದರಿಂದ ಹಸಿವು ನೀರಡಿಕೆ ಮೊದಲಾದವುಗಳನ್ನು ಮೀರಿರುವಿಕೆ ಎಂಬಲ್ಲಿ ಗುಣವೆಂದರೆ, ನಿರಪೇಕ್ಷವಾದ ಗುಣಗಳನ್ನೇ ಸ್ವೀಕರಿಸಬೇಕು. ಆದ್ದರಿಂದ ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಲಕ್ಷ್ಮೀ ಮೊದಲಾದವರಲ್ಲಿ ಅಪಹತಪಾಪ್ಮತ್ವಾದಿಗಳು ಸ್ವತಂತ್ರವಾಗಿರದಿದ್ದರೂ, ಅಸ್ವತಂತ್ರವಾಗಿ ಇರುತ್ತವೆಂದು ಹೇಳಬಹುದಲ್ಲವೆ ? ಆದ್ದರಿಂದ 'ಅಪಹತಪಾಪ್ಮತ್ವ' ಎಂಬ ಗುಣದಿಂದ ವಿಷ್ಣುವೇ ದಹರಸ್ಥನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಸಾಪೇಕ್ಷ-ನಿರಪೇಕ್ಷಯೋಶ್ಚ = ಪಾರತಂತ್ರ್ಯ ಸ್ವಾತಂತ್ರ್ಯಗಳಲ್ಲಿ, ನಿರಪೇಕ್ಷಂ = ಸ್ವತಂತ್ರವಾದದ್ದೇ, ಸ್ವೀಕರ್ತವ್ಯಂ = ಸ್ವೀಕರಿಸಲ್ಪಡಬೇಕು.

### ಸತ್ಯಸಂಕಲ್ಪವೆಂದರೆ ಮಹಾವಿಷ್ಣು ಮಾತ್ರ

**ब्रह्मसूत्रभाष्यम् — 'सत्यकामोऽपरो नास्ति तमृते विष्णुमव्ययम् ।**
**सत्यकामत्वमन्येषां भवेत् तत्काम्यकामिता ।।'**
**इति च स्कान्दे ।।**

ಅನುವಾದ - ನಾಶರಹಿತನಾದ ವಿಷ್ಣುವನ್ನು ಬಿಟ್ಟು, ಲಕ್ಷ್ಮೀ ಮೊದಲಾದವರೂ ಸಹ ಸತ್ಯ ಸಂಕಲ್ಪರಲ್ಲ. ಲಕ್ಷ್ಮೀದೇವಿ ಮೊದಲಾದವರಲ್ಲಿರುವ ಸತ್ಯಸಂಕಲ್ಪಗಳು ವಿಷ್ಣುವಿನ ಅಧೀನವೇ ಆಗಿವೆ. ಆದ್ದರಿಂದ ದಹರಸ್ಥನಲ್ಲಿ ಹೇಳಲ್ಪಟ್ಟ ಸತ್ಯಸಂಕಲ್ಪತ್ವವು ವಿಷ್ಣುವಿನ ಅಸಾಧಾರಣಧರ್ಮವೆಂದು ನಿರ್ಣಯವಾಗುತ್ತದೆ. ಈ ಕಾರಣದಿಂದಲೂ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಾಪೇಕ್ಷತ್ವ, ನಿರಪೇಕ್ಷತ್ವಗಳಿಂದ ವಿಶಿಷ್ಟವಾದ ಅಪಹತಪಾಪ್ಮತ್ವಾದಿಗಳು ಅಭಾವರೂಪವಾದ ಕಾರಣ ಆಕಾಶಾದಿಗಳಲ್ಲಿ ನೇರವಾಗಿ ಅಥವಾ ಅಭಿಮಾನಿದೇವತೆಯ ಮೂಲಕವಾಗಿ ಕೂಡಬಹುದು. ಆದರೆ ಸತ್ಯಕಾಮತ್ವಾದಿಭಾವರೂಪವಾದ ಗುಣಗಳು ಬೇರೆಯವರಲ್ಲಿ ಯಾವುದೇ ಕಾರಣದಿಂದಲೂ ಸಹ ಯುಕ್ತ-ವಾಗುವುದಿಲ್ಲ. ಇಂತಹ ಸತ್ಯಕಾಮತ್ವಾದಿಗುಣಗಳ ಆಧಾರದಿಂದ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯಿಸಬಹುದು.

ಸತ್ಯಕಾಮಃ = ಅಪ್ರತಿಹತವಾದ ಸಂಕಲ್ಪವುಳ್ಳವನು, ತಂ ವಿಷ್ಣುಂ ಋತೇ = ಆ ವಿಷ್ಣುವನ್ನು ಬಿಟ್ಟು, ಅಪರಃ = ಮತ್ತೊಬ್ಬ ದೇವತೆಯು, ನಾಸ್ತಿ =

ಇರುವುದಿಲ್ಲ, ಅನ್ಯೇಷಾಂ = ಲಕ್ಷ್ಮೀ ಬ್ರಹ್ಮಾದಿಗಳಲ್ಲಿರುವ, ಸತ್ಯಕಾಮತ್ವಂ = ಸತ್ಯಸಂಕಲ್ಪಗುಣವು, ತತ್ ಕಾಮ್ಯಕಾಮಿತಾ = ಪರಮಾತ್ಮನ ಇಚ್ಛೆಗೆ ಅನುಗುಣವಾಗಿಯೇ ಕಾಮನಾ ಮಾಡತಕ್ಕದ್ದು, ಭವೇತ್ = ಆಗಿರುತ್ತದೆ, ಇತಿ ಚ = ಎಂಬುದಾಗಿಯೂ ಸ್ಕಾಂದಪುರಾಣದಲ್ಲಿ ಹೇಳಲಾಗಿದೆ. ಆದ್ದರಿಂದ ವಿಷ್ಣುವೇ ದಹರನೆಂದು, ಹೃತ್ಪದ್ಮಸ್ಥನೆಂದು ನಿರ್ಣಯವಾಯಿತು.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

### ಆಕಾಶಶಬ್ದದಿಂದ ವಾಚ್ಯವಾದ ಭೂತಾಕಾಶವು ವಿಷ್ಣುವಲ್ಲ

**सत्तर्कदीपावलिः – ।। दहर उत्तरेभ्यः ।। १४ ।।**

**चन्द्रेत्यादेरयमर्थः । अथ 'यदिदमस्मिन् ब्रह्मपुरे' इत्याम्नायते । तत्राकाशस्य चन्द्राद्याधारत्वमुच्यते । स चाकाशशब्दाभिधेयो भूताकाशो न विष्णुः ।**

ಭಾಷ್ಯದಲ್ಲಿ 'ಚಂದ್ರಾದಿತ್ಯದ್ಯಾಧಾರತ್ವಂ' ಎಂದು ಹೇಳಿದ್ದಾರೆ. ಇಲ್ಲಿರುವ 'ಆದಿ' ಪದಕ್ಕೆ ಹೀಗೆ ಅರ್ಥ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' ಎಂದು ಶ್ರುತವಾಗಿದೆ. ಇಲ್ಲಿ ಆಕಾಶಕ್ಕೆ ಚಂದ್ರಾದಿತ್ಯಾದ್ಯಾಧಾರತ್ವವನ್ನು ಹೇಳಲಾಗಿದೆ. 'ಆಕಾಶ' ಶಬ್ದಕ್ಕೆ ಭೂತಾಕಾಶವೆಂದೇ ಅರ್ಥ ಹೊರತು ವಿಷ್ಣುವೆಂದಲ್ಲ.

### ಆಕಾಶಶಬ್ದವು ಭೂತಾಕಾಶವೆನ್ನಲು ಸಂವಾದ ಪ್ರಮಾಣ

**सत्तर्कदीपावलिः – 'हृदयं तद्विजानीयात्' 'तस्यान्ते सुषिरं सूक्ष्मं तस्मिन् सर्वं प्रतिष्ठितम्' इति श्रुत्यन्तरसंवादात्**

'ಹೃದಯಂ ತದ್ವಿಜಾನೀಯಾತ್' 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬ ಸಮಾಖ್ಯಾಶ್ರುತ್ಯಂತರದ ಸಂವಾದ ಇರುವುದರಿಂದ.

ಪೂರ್ವಪಕ್ಷದ ಸಮಾಪ್ತಿ

**सत्तर्कदीपावळिः – 'एतस्य वा अक्षरस्य' इत्यादिना विष्णोरेवेति, तन्न । सिद्ध्यतीत्येवं प्राप्तेऽभिधीयते ।**

ಆದ್ದರಿಂದ ಚಂದ್ರಾದಿತ್ಯಾದ್ಯಾಧಾರತ್ವವನ್ನು, 'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ವಾಕ್ಯಗಳಿಂದ ವಿಷ್ಣುವಿನಲ್ಲಿ ಮಾತ್ರ ಏನು ಸಮರ್ಥಿಸಲಾಯಿತೋ ಅದು ಸಿದ್ಧವಾಗುವುದಿಲ್ಲವೆಂದು ಪೂರ್ವಪಕ್ಷ.

ಚಂದ್ರಾದಿತ್ಯಾದ್ಯಾಧಾರನಾದವನು ಮಹಾವಿಷ್ಣುವೆಂದು ಸಿದ್ಧಾಂತ

**सत्तर्कदीपावळिः – चन्द्राद्याधारो विष्णुरेवात्र निर्दिश्यते, नाकाशम् ।**

ಸಿದ್ಧಾಂತ - ಚಂದ್ರಾದಿತ್ಯಾದ್ಯಾಧಾರನಾದವನು ವಿಷ್ಣುವೇ ಆಗಿದ್ದಾನೆಂದು ಶ್ರುತಿಯು ಹೇಳುತ್ತದೆ ಹೊರತು ಆಕಾಶವಲ್ಲ.

ಸತ್ಯಸಂಕಲ್ಪತ್ವಾದಿಗಳು ವಿಷ್ಣುವಿನದ್ದೇ ಧರ್ಮ

**सत्तर्कदीपावळिः – 'य आत्माऽपहतपाप्मा विजरो विमृत्युर्विशोकोऽविजिघित्सोऽपिपासः सत्यकामः सत्यसङ्कल्पः' इत्युत्तरवाक्यविरोधात् ।**

'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋऽವಿಜಿಘಿತ್ಸೋऽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' ಎಂಬ ಮುಂದಿನ ವಾಕ್ಯದಲ್ಲಿ ವಿಷ್ಣುವಿನ ಸತ್ಯಸಂಕಲ್ಪತ್ವಾದಿ ಅಸಾಧಾರಣಗುಣಗಳೇ ಶ್ರುತವಾಗಿವೆ. ವಿಷ್ಣುವು ಆಕಾಶಶಬ್ದಪ್ರತಿಪಾದ್ಯನಲ್ಲವೆಂದರೆ, ಈ ಮುಂದಿನ ವಾಕ್ಯದ ವಿರೋಧ ಬರುತ್ತದೆ.

### ದಹರಾಕಾಶದಲ್ಲಿರುವವನು ಮಹಾವಿಷ್ಣುವೇ

**सत्तर्कदीपावळिः** – 'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराऽकाशस्तस्मिन् यदन्तस्तदन्वेष्टव्यम्, तद्वाव विजिज्ञासितव्यम्' इत्यन्वेष्टव्यतया यो निर्दिष्टो विष्णुः दहराकाशस्थः तद्धृदयाकाशसन्निहितं सर्वमुच्यते ।

'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋऽಸ್ಮಿನ್ನಂತರಾऽಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್, ತದ್ವಾವ ವಿಜಿಜ್ಞಾಸಿತವ್ಯಮ್' ಎಂಬುದಾಗಿ ಜಿಜ್ಞಾಸೆಗೆ ವಿಷಯನಾದ ಯಾವ ವಿಷ್ಣುವಿದ್ದಾನೋ ಇವನು ದಹರಾಕಾಶ-ದಲ್ಲಿರುತ್ತಾನೆ. ಅಂತಹ ವಿಷ್ಣುವಿನ ಹೃದಯಾಕಾಶದಲ್ಲಿ ಎಲ್ಲವೂ ಸನ್ನಿಹಿತವಾಗಿದೆಯೆಂದು ಹೇಳಲಾಗಿದೆ. ಇವನಲ್ಲಿ ಎಲ್ಲವೂ ಆಶ್ರಿತವಾಗಿದೆ.

### ಆದರೂ ಸರ್ವಗತನಾಗಿರುವನು

**सत्तर्कदीपावळिः** – 'यावान् वाऽयमाकाशस्तावानषोऽन्तर्हृदय आकाश उभे अस्मिन् द्यावापृथिवी' इत्यादिना ।

'ಯಾವಾನ್ ವಾऽಯಮಾಕಾಶಸ್ತಾವಾನೇಷೋऽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂಬ ಶ್ರುತಿಯು ವಿಷ್ಣುವಿನ ಹೃದಯದಲ್ಲಿರುವ ಆಕಾಶಕ್ಕೆ ವ್ಯಾಪ್ತತ್ವವನ್ನು ಹೇಳುತ್ತಿದೆ. ಇದರಿಂದ ಸಕಲಕ್ಕೂ ಆಧಾರನಾದವನು ವಿಷ್ಣುವೇ ಆಗಿದ್ದಾನೆ ಮತ್ತು ಸರ್ವಗತನಾಗಿದ್ದಾನೆಂದು ಹೇಳಿದಂತಾಯಿತು.

### ವ್ಯಾಪ್ತನಾದವನು ಮಹಾವಿಷ್ಣುವೇ ಹೊರತು ಬಾಹ್ಯಾಕಾಶವಲ್ಲ

**सत्तर्कदीपावळिः** – अथवा विष्णुमेव न बाह्याकाशं व्यापकं हृत्कुहरस्थाकाशशब्देन निर्दिश्य तत्स्थं सर्वमुच्यते ।

ಅಥವಾ ವಿಷ್ಣುವೇ ವ್ಯಾಪ್ತನಾಗಿದ್ದಾನೆ ಹೊರತು ಬಾಹ್ಯಾಕಾಶವಲ್ಲ; ಹೃದಯಗುಹೆಯಲ್ಲಿರುವ ಆಕಾಶದಲ್ಲಿ ವಿಷ್ಣುವಿದ್ದಾನೆಂದು ನಿರ್ದೇಶ ಮಾಡಿ ಅವನಲ್ಲಿ ಎಲ್ಲವೂ ಇದೆ ಎಂದು 'ಆಕಾಶ' ಶಬ್ದದಿಂದ ಶ್ರುತಿ ಹೇಳುತ್ತಿದೆ.

### ಹಸಿವು ನೀರಡಿಕೆಗಳನ್ನು ದಾಟಿದ್ದು ಭೂತಾಕಾಶವಲ್ಲ

**सत्तर्कदीपावळिः – उभे इत्यादिना अपहतपाप्मत्वादिगुणकश्च विष्णुरेवैतच्छ्रुत्यन्तरसंवादेन दृढीकरोति – योऽशनायेत्यादिना ।। अशनाया विजिघित्सा क्षुदित्यर्थः ।**

'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ ಅಪಹತಪಾಪ್ಮತ್ವಾದಿಗುಣಗಳು ವಿಷ್ಣುವಿನಲ್ಲೇ ಬರುತ್ತದೆ ಎಂದು ಶ್ರುತ್ಯಂತರಸಂವಾದದಿಂದ ದೃಢಪಡಿಸುತ್ತಿದ್ದಾರೆ. 'ಯೋಽಶನಾಯಾ' ಇತ್ಯಾದಿಯಾಗಿ. ಹಸಿವೆ ನೀರಡಿಕೆಗಳನ್ನು ದಾಟಿದ್ದಾನೆಂದರ್ಥ.

### ಮುಕ್ತರಲ್ಲಿಯೂ ಕೂಡ ನಿತ್ಯತೀರ್ಣಾತ್ವಾದಿಗಳು ಇರುವುದಿಲ್ಲ

**सत्तर्कदीपावळिः – नन्वशनायादिपिपासाद्यतिक्रमणं न विष्णोरेव, मुक्तानामपि सम्भवादित्याशङ्कित आह – नित्येति ।।**

ಹಸಿವೆ, ನೀರಡಿಕೆಗಳನ್ನು ದಾಟಿರುವುದು ವಿಷ್ಣುವಿನದ್ದೇ ಲಕ್ಷಣವಾಗುವುದಿಲ್ಲ. ಏಕೆಂದರೆ ಮುಕ್ತರಲ್ಲಿಯೂ ಕೂಡ ಈ ಗುಣಗಳಿರುತ್ತವಲ್ಲವೆ ? ಎಂಬ ಪ್ರಶ್ನೆಗೆ 'ನಿತ್ಯತೀರ್ಣಾ' ಇತ್ಯಾದಿ ಪ್ರಮಾಣದ ಬಲದಿಂದ ವಿಷ್ಣುವಿನ ಅಸಾಧಾರಣ ಧರ್ಮವೆಂದು ನಿಶ್ಚಯ ಮಾಡುತ್ತಿದ್ದಾರೆ.

### ದಹರಾಕಾಶದಲ್ಲಿ ಅಪಹತಪಾಪ್ಮತ್ವಾದಿಗಳು ಕೂಡುವುದಿಲ್ಲ

**सत्तर्कदीपावळिः – नच दहराकाशस्याप्यपहतपाप्मत्वादिकं किञ्चिदाशङ्कनीयम्, अप्रसक्तप्रतिषेध प्रसङ्गात् । भगवदनुकूलेच्छावत्त्वमेव मुक्तानां सत्यकामत्वमित्यर्थः ।।**

ದಹರಾಕಾಶಕ್ಕೂ ಕೂಡ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳಬಹುದಲ್ಲವೆ ? ಎಂದು ಶಂಕಿಸಬಾರದು. ಜಡವಾದ ಆಕಾಶದಲ್ಲಿ ಪಾಪಕ್ಕೆ ಪ್ರಸಕ್ತಿಯೇ ಇಲ್ಲ. ಹೀಗಿರುವಾಗ ಅದನ್ನು ನಿಷೇಧ ಮಾಡುವುದು ತಪ್ಪಾಗುತ್ತದೆ. ಮುಕ್ತರಲ್ಲಿ ಸತ್ಯಕಾಮತ್ವಾದಿಗಳು ಇದ್ದರೂ ಅವು ಭಗವಂತನ ಮನಸ್ಸಿಗೆ ಅನುಕೂಲವಾದ ಇಚ್ಛೆಯೇ ಆಗಿರುತ್ತವೆಂದು ತಿಳಿಯಬೇಕು.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

## ದಹರಾಕಾಶದಲ್ಲಿ ಏನಿದೆ ?

**तत्वप्रदीपः – चन्द्रादित्याद्याधारत्वं विष्णोरुक्तं ''सूर्याचन्द्रमसौ विधृतौ'' इत्यादिना । तच्च ''एतस्मिन् ब्रह्मपुरे दहरं पुण्डरीकं वेश्म दहारोऽस्मिन् अन्तराकाशः किं तदत्र विद्यते यदन्वेष्टव्यं यद्वाव विजिज्ञासितव्यमिति, स ब्रूयात् यावान्वाऽयमाकाशस्तावानेषोऽऽन्तर्हृदय आकाशः । उभे अस्मिन् द्यावापृथिवी अन्तरेव समाहिते । उभावग्निश्च वायुश्च सूर्याचन्द्रमसावुभौ' इत्यादावाकाशस्य प्रतीयते ।**

ಸೂರ್ಯಚಂದ್ರಾದಿಗಳಿಗೆ ಆಧಾರನಾದವನು ಮಹಾವಿಷ್ಣುವೇ ಆಗಿದ್ದಾನೆಂದು ''ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'' ಇತ್ಯಾದಿ ವಾಕ್ಯಗಳಿಂದ ಈ ಹಿಂದೆ ಸಮರ್ಥಿಸಿದ್ದಾಯಿತು. ಆದರೆ ಇದೇ ಸೂರ್ಯಚಂದ್ರಾದ್ಯಾಧಾರತ್ವವು ದಹರಾಕಾಶದಲ್ಲಿ ಶ್ರುತವಾಗುತ್ತಿದೆ = 'ಏತಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ ಅಂತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮ್ ಇತಿ, ಸ ಬ್ರೂಯಾತ್ ಯಾವಾನ್ವಾऽಯಮಾಕಾಶಸ್ತಾವಾನೇಷೋऽಂತರ್ಹೃದಯ ಆಕಾಶಃ । ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ' ''ಕಣ್ಣಿಗೆ ಕಾಣಿಸುತ್ತಿರುವ ಈ ದೇಹವೆಂಬ ಪಟ್ಟಣದಲ್ಲಿ ಹೃದಯ

ಕಮಲವೆಂಬ ಒಂದು ಮನೆಯಿದೆ. ಅದರಲ್ಲಿ ಒಂದು ಸೂಕ್ಷ್ಮವಾದ ಪ್ರದೇಶವಿದೆ. ಆ ಪ್ರದೇಶದಲ್ಲಿ ಏನಿದೆ ? ಇದರ ಬಗ್ಗೆ ಅನ್ವೇಷಣೆ ಮಾಡಬೇಕು ಹಾಗೂ ಜಿಜ್ಞಾಸೆ ಮಾಡಬೇಕು. ಬಾಹ್ಯದಲ್ಲಿ ಯಾವ ಆಕಾಶವಿದೆಯೋ, ಅದೆಲ್ಲವೂ ಈ ಜಾಗದಲ್ಲಿದೆ. ಮತ್ತು ಭೂಮ್ಯಾಕಾಶಗಳೆಲ್ಲವೂ ಇದರಲ್ಲೇ ಅಡಗಿದೆ. ಅಷ್ಟೇ ಅಲ್ಲದೇ ಅಗ್ನಿ, ವಾಯು, ಸೂರ್ಯ, ಚಂದ್ರ ಇವರೆಲ್ಲರೂ ಇದನ್ನೇ ಆಶ್ರಯಿಸಿದ್ದಾರೆ'' ಇತ್ಯಾದಿ ವಾಕ್ಯದಿಂದ ಸೂರ್ಯ-ಚಂದ್ರಾದ್ಯಾಧಾರತ್ವವು ಪ್ರತೀತವಾಗುತ್ತಿದೆ.

### ದಹರಾಕಾಶವೇ ಸಕಲಕ್ಕೂ ಆಶ್ರಯ, ಅಲ್ಲಿ ನೆಲೆಸಿರುವವನು ಜೀವನೆಂಬುದು ಅಧಿಕರಣದ ಪೂರ್ವಪಕ್ಷ

**तत्वप्रदीपः – स चाऽदित्याद्याधारः किं दहराकाशस्स्यादाहोस्वित् तत्स्थः कश्चिदितीदानीं चिन्त्यते । किं तावत् प्राप्तम् ? दहराकाश इति ''तस्यान्ते सुषिरं सूक्ष्मं तस्मिन् सर्वं प्रतिष्ठितम्'' इत्यादिश्रुत्यन्तरे दहरसुषिरस्य सर्वाधारत्वप्रतीतेः । तत्स्थः कश्चिदित्यपरः पक्षः । सोऽपि जीव इति प्राप्तम् । हृदयगतदहराकाशान्तस्थत्वात् । उपरि च तत्परामर्शदर्शनादिति ।**

ಆದಿತ್ಯಾದಿಗಳಿಗೆ ಆಧಾರವಾದದ್ದು ದಹರಾಕಾಶವೇ ಆಗಿದೆ. ಅಥವಾ ಆ ದಹರಾಕಾಶದಲ್ಲಿರುವ ವ್ಯಕ್ತಿಯು ಸಕಲಕ್ಕೂ ಆಶ್ರಯನೆಂಬುದು ಈ ಅಧಿಕರಣದ ಪೂರ್ವಪಕ್ಷ. 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬುದಾಗಿ ನಾರಾಯಣೋಪನಿಷತ್ತು ಸೂಕ್ಷ್ಮವಾದ ಆ ಸುಷಿರಪ್ರದೇಶವೇ ಸಕಲಕ್ಕೂ ಆಧಾರವಾಗಿದೆ ಎಂದು ಹೇಳುತ್ತಿದೆ. ಆ ಸೂಕ್ಷ್ಮಪ್ರದೇಶದಲ್ಲಿ ಇರುವ ವ್ಯಕ್ತಿಯೂ ಸಕಲಕ್ಕೆ ಆಧಾರ ಎಂಬುದು ಮತ್ತೊಂದು ಪಕ್ಷ. ಅವನು ಜೀವನೇ ಆಗುತ್ತಾನೆ. ಏಕೆಂದರೆ ಜೀವನು ಹೃದಯದ ದಹರಾಕಾಶದಲ್ಲಿ ನೆಲೆಸಿದ್ದಾನೆಂಬುದು ಪ್ರಸಿದ್ಧವಾಗಿದೆ. ಮುಂದೆಯೂ ಸಹ ಆ ಜೀವನನ್ನೇ ಪರಾಮರ್ಶ ಮಾಡಿದ್ದಾರೆ.

### ದಹರಾಕಾಶದ ಜಿಜ್ಞಾಸೆ ಅಸಂಗತ

**तत्वप्रदीपः – अत्रोत्तरं – 'दहर उत्तरेभ्यः' ।। न तावत् दहराकाशोऽत्र प्रतिपाद्यते । ''तस्मिन् यदन्तस्तदन्वेष्टव्यं तद्वाव विजिज्ञासितव्यम्'' इति**

**तदन्तस्थस्यैवान्वेष्टव्यत्वप्रतिज्ञानात् । किन्तु तत्स्थः कश्चिदेव । स च दहराकाशे स्थितो विष्णुरेव ।**

ಉತ್ತರವನ್ನು ಸೂತ್ರಕಾರರು 'ದಹರೇ ಉತ್ತರೇಭ್ಯಃ' ಎಂಬುದಾಗಿ ಹೇಳುತ್ತಿದ್ದಾರೆ. ಈ ಛಾಂದೋಗ್ಯದ ಪ್ರಕರಣದಿಂದ ದಹರಾಕಾಶವು ಪ್ರತಿಪಾದ್ಯವೇ ಅಲ್ಲ. ಏಕೆಂದರೆ 'ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' ಅಲ್ಲಿ ನೆಲೆಸಿದ್ದನ್ನೇ ಅನ್ವೇಷಣೆ ಮಾಡಬೇಕು. ಹಾಗೂ ಜಿಜ್ಞಾಸೆ ಮಾಡಬೇಕು ಎಂಬುದಾಗಿ, ದಹರಾಕಾಶದಲ್ಲಿ ಇರುವ ಪದಾರ್ಥದ ಬಗ್ಗೆ ಅನ್ವೇಷ್ಟವ್ಯತ್ವ ವಿಜಿಜ್ಞಾಸ್ಯತ್ವಗಳ ಪ್ರತಿಜ್ಞೆಯನ್ನು ಉಪನಿಷತ್ತು ಮಾಡುತ್ತಿದೆ. ಆದ್ದರಿಂದ ದಹರಾಕಾಶವನ್ನೇ ಸಕಲಕ್ಕೂ ಆಧಾರವೆಂದು ವಿವಕ್ಷಿಸಬಾರದು. ಹೊರತಾಗಿ, ಆ ದಹರಾಕಾಶದಲ್ಲಿ ನೆಲೆಸಿರುವ ಒಬ್ಬ ವ್ಯಕ್ತಿಯನ್ನೇ ಅನ್ವೇಷಣೆ ಮಾಡಬೇಕು. ಆ ವ್ಯಕ್ತಿಯಾದರೂ ಜೀವನಾಗಲು ಸಾಧ್ಯವಿಲ್ಲ. ಮಹಾವಿಷ್ಣುವೇ ಆಗುತ್ತಾನೆ.

ವಿವರಣೆ - (ಸಂಗ್ರಹ) 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ। ದಹರೋಽಸ್ಮಿನ್ನಂತರಾಕಾಶಃ। ತಸ್ಮಿನ್ ಯದಂತಃ ತದನ್ವೇಷ್ಟವ್ಯಮ್। ತದ್ವಾವ ವಿಜಿಜ್ಞಾಸಿತವ್ಯಂ' ಇತಿ।

ಈ ಶರೀರದಲ್ಲಿ ವ್ಯಾಪಿಸಿರುವ ಪೂರ್ಣಗುಣನೂ, ಪೂರ್ಣಕಾಮನೂ ಆಗಿರುವ ಪರಮಾತ್ಮನಲ್ಲಿ ಹೃದಯಕಮಲರೂಪವಾದ ಸಣ್ಣಮನೆಯು ಆಶ್ರಿತವಾಗಿದೆ. ಈ ಮನೆಯಲ್ಲಿ ಸಣ್ಣ ಆಕಾಶವಿದೆ. ಅದರ ಒಳಗೆ ಏನು ಇದೆಯೋ ಅದನ್ನೇ ಹುಡುಕಬೇಕು ಅಂದರೆ ಮನನ ಮಾಡಬೇಕು ಎಂದು.

ತಂ ಚೇದ್ ಬ್ರೂಯುಃ 'ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ, ದಹರೋಽಸ್ಮಿನ್ನಂತರಾಕಾಶಃ, ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ, ಯದ್ವಾವ ವಿಜಿಜ್ಞಾಸಿತವ್ಯಂ' ಇತಿ।

ಸ ಬ್ರೂಯಾತ್ ಯಾವಾನ್ವಾ ಅಯಮಾಕಾಶಃ ತಾವಾನೇಷೋಽಂತರ್ಹೃದಯ ಆಕಾಶಃ। ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ। ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ ಸಮಾಹಿತಂ ಇತಿ॥

ಆಗ ಗುರುಗಳನ್ನು ಶಿಷ್ಯರು ಹೀಗೆ ಕೇಳಬಹುದು - 'ಪರಮಾತ್ಮನ ಆವಾಸ ಸ್ಥಾನವಾದ ಈ ಶರೀರದಲ್ಲಿ ಚಿಕ್ಕ ಹೃದಯ ಕಮಲವಿದೆ ಮತ್ತು ಅದರೊಳಗೆ ಅಲ್ಪವಾದ ಆಕಾಶವಿದೆ ಎಂದಿರಿ. ಅದರಲ್ಲಿ ಹುಡುಕಬೇಕಾದುದು, ಮನನ ಮಾಡಬೇಕಾದುದು ಏನಿದೆ ? ಬ್ರಹ್ಮನಂತೂ ಅಲ್ಲ. ಅವನು ವ್ಯಾಪ್ತ. ಚಿಕ್ಕ ಹೃದಯಕಮಲದಲ್ಲಿ ಅವನು ಇರಲಾರ' ಎಂದು.

ಆಗ ಗುರುಗಳು ಹೇಳಬೇಕು - 'ಶರೀರದಲ್ಲಿ ಹೃತ್ಕಮಲದೊಳಗಿನ ಆಕಾಶದೊಳಗೆ ಆಕಾಶನಾಮಕ ಪರಬ್ರಹ್ಮನಿದ್ದಾನೆ. ಹೃದಯದ ಹೊರಗೆ ವ್ಯಾಪ್ತನಾಗಿರುವ ಆಕಾಶನಾಮಕನಾದ ಪರಬ್ರಹ್ಮನು ದೇಶಕಾಲಗುಣಗಳಿಂದ ಹೇಗೆ ಅನಂತನಾಗಿರುವನೋ ಹಾಗೆಯೇ ಹೃತ್ಕಮಲದೊಳಗಿನ ಆಕಾಶದಲ್ಲಿರುವ ಈ ಆಕಾಶನಾಮಕ ಪರಬ್ರಹ್ಮನೂ ಅನಂತನಾಗಿರುವನು. ಹೀಗೆ ಅವನು ಅಣುವೂ ಮಹತ್ತೂ ಆಗಿರುವುದರಿಂದ ಹೃದಯಕಮಲದಲ್ಲಿ ಅಣುವಾಗಿ ನೆಲೆಸುವುದು ಅಸಂಭಾವಿತವಲ್ಲ. ಅವನನ್ನೇ ಮನನ ಮಾಡಬೇಕು. ಏಕೆಂದರೆ, ಅವನಲ್ಲೇ ಮುಕ್ತರು, ಅಮುಕ್ತರು ಎಂದು ಎರಡು ವಿಧರಾದ ಸ್ವರ್ಗ ಹಾಗೂ ಭೂಮಿಗಳ ಅಭಿಮಾನಿದೇವತೆಗಳೂ, ಅಗ್ನಿ ಹಾಗೂ ವಾಯುಗಳ ಅಭಿಮಾನಿಗಳು, ಸೂರ್ಯ-ಚಂದ್ರರೂ, ವಿದ್ಯುತ್ ಹಾಗೂ ನಕ್ಷತ್ರಗಳ ಅಭಿಮಾನಿದೇವತೆಗಳೂ ಹೀಗೆ ಎಲ್ಲರೂ ಆಶ್ರಿತರಾಗಿರುವರು'.

ತಂ ಚೇತ್ ಬ್ರೂಯುಃ 'ಅಸ್ಮಿನ್ ಚೇದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಂ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ ಯದ್ಯೆನತ್ ಜರಾಽವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋಽತಿಶಿಷ್ಯತೇ' ಇತಿ। ಸ ಬ್ರೂಯಾತ್ 'ನಾಸ್ಯ ಜರಯೈತತ್ ಜೀರ್ಯತಿ । ನ ವಧೇನಾಸ್ಯ ಹನ್ಯತೇ । ಏತತ್ ಸತ್ಯಂ ಬ್ರಹ್ಮಪುರಮ್ । ಅಸ್ಮಿನ್ ಕಾಮಾಃ ಸಮಾಹಿತಾಃ । ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿ-ಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾಃ ಅನ್ವಾವಿಶಂತಿ ಯಥಾನುಶಾಸನಂ ಯಂ ಯಮಂತಮಭಿಕಾಮಾ ಭವಂತಿ ಯಂ ಜನಪದಂ ಯಂ ಕ್ಷೇತ್ರಭಾಗಂ ತಂ ತಮೇವೋಪಜೀವಂತಿ ॥

ಆ ಗುರುಗಳನ್ನು ಶಿಷ್ಯರು 'ಬ್ರಹ್ಮನ ಪುರವೆನಿಸಿರುವ ಶರೀರದಲ್ಲಿರುವ ಪರಬ್ರಹ್ಮನಲ್ಲಿ ಎಲ್ಲವೂ ಇದೆ. ಎಲ್ಲ ಪ್ರಾಣಿಫಲೂ ಇವೆ ಮತ್ತು ಅವನಲ್ಲಿ ಎಲ್ಲ ಕಾಮನೆಗಳು ಪೂರೈಸಿವೆ ಎಂದಾದರೆ, ಈ ಶರೀರವನ್ನು ಮುದಿತನವು ಆವರಿಸಿದಾಗ ಅಥವಾ ಶರೀರ ನಾಶವಾದಾಗ ಆ ಶರೀರದೊಳಗೆ ಯಾವುದು ತಾನೇ ಉಳಿದೀತು?' ಎಂದು ಕೇಳಿದರೆ ಗುರುಗಳು ಹೇಳಬೇಕು 'ಈ ಶರೀರದ ಮುದಿತನದಿಂದ ಬ್ರಹ್ಮನಿಗೆ ಮುದಿತನವೂ ಉಂಟಾಗದು, ಶರೀರದ ನಾಶದಿಂದ ನಾಶವೂ ಸಂಭವಿಸದು. ಈ ಪರಬ್ರಹ್ಮನು ಪಾಪಲೇಪರಹಿತನೂ, ಮುದಿತನವಿಲ್ಲದವನೂ,

ಮರಣದೂರನೂ, ಶೋಕವಿಲ್ಲದವನೂ ಹಸಿವೆತೃಷೆ ಪೀಡೆ ಇಲ್ಲದವನೂ, ಅಮೋಘ ಇಚ್ಛೆ ಉಳ್ಳವನೂ ಅಮೋಘ ಸಂಕಲ್ಪ ಉಳ್ಳವನೂ ಆಗಿರುವನು. ಸಾಯುಜ್ಯಮುಕ್ತರು ತಮ್ಮ ತಮ್ಮ ಯೋಗ್ಯತೆಗೆ ಅನುಸಾರ ಅಂದರೆ ತಾರತಮ್ಯ- ಯುಕ್ತರಾಗಿಯೇ, ಪರಮಾತ್ಮನ ಆಜ್ಞಾನುಸಾರ ಪರಮಾತ್ಮನನ್ನು ಪ್ರವೇಶಿಸುತ್ತಾರೆ. ಯಾವ ಯಾವ ದೇಶವನ್ನು ಯಾವ ಯಾವ ರಾಷ್ಟ್ರವನ್ನು, ಯಾವ ಯಾವ ಪ್ರದೇಶವನ್ನು ಮುಕ್ತರು ಹೊಂದಲು ಇಚ್ಛಿಸುವರೋ ಅವನ್ನೆಲ್ಲಾ ಹೊಂದುತ್ತಾರೆ. ಇದು ಪರಮಾತ್ಮನ ಅನುಗ್ರಹದಿಂದ ಹೊರತು ಸ್ವತಂತ್ರವಾಗಿ ಅಲ್ಲ.

**ತತ್ ಯಥೇಹ ಕರ್ಮಜಿತೋ ಲೋಕಃ ಕ್ಷೀಯತೇ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನಮನನುವಿದ್ಯ ವ್ರಜಂತ್ಯೇತಾನ್ ಚ ಸತ್ಯಾನ್ ಕಾಮಾನ್ । ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ । ಅಥ ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾನ್ ಚ ಸತ್ಯಾನ್ ಕಾಮಾನ್ ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥**

ಹೇಗೆ ಈ ಲೋಕದಲ್ಲಿ ಕರ್ಮದಿಂದ ಸಂಪಾದಿಸಿದ ದೇಹ, ಮನೆ ಮೊದಲಾದ ಐಶ್ವರ್ಯಗಳು ನಾಶವಾಗುತ್ತವೋ ಹಾಗೆಯೇ, ಯಾರು ಪರಮಾತ್ಮನನ್ನೂ ಅವನ ಸತ್ಯಕಾಮತ್ವಾದಿ ಮಹಿಮೆಗಳನ್ನೂ ತಿಳಿಯದೆ ಕರ್ಮಾಚರಣೆ ಮಾಡುವರೋ ಅವನು ಹೊಂದುವ ಸ್ವರ್ಗಾದಿ ಫಲಗಳೂ ಪುಣ್ಯಕ್ಷಯವಾದಾಗ ನಾಶಹೊಂದುತ್ತವೆ. ಅವರಿಗೆ ಎಲ್ಲಾ ಲೋಕಗಳಲ್ಲೂ ಇಚ್ಛಾನುಸಾರವಾಗಿ ಸಂಚರಿಸುವ ಭಾಗ್ಯವು ಕೈಗೂಡದು. ಆದರೆ ಯಾರು ಈ ಲೋಕದಲ್ಲಿ ಪರಮಾತ್ಮನನ್ನೂ, ಅವನ ಸತ್ಯಕಾಮತ್ವಾದಿ ಮಹಿಮೆಗಳನ್ನೂ ಅರಿತು ಪುಣ್ಯವನ್ನು ಸಂಪಾದಿಸುತ್ತಾರೋ ಅವರ ಆ ಪುಣ್ಯದಿಂದ ಲಭ್ಯವಾದ ಮೋಕ್ಷರೂಪ ಫಲವು ಎಂದೂ ಸಂಪಾದಿಸುತ್ತಾರೋ ಅವರ ಆ ಪುಣ್ಯದಿಂದ ಲಭ್ಯವಾದ ಮೋಕ್ಷರೂಪ ಫಲವು ಎಂದೂ ನಾಶವಾಗುವುದಿಲ್ಲ. ಇಷ್ಟೇ ಅಲ್ಲದೆ ಅವರಿಗೆ ಇಚ್ಛಾನುಸಾರವಾಗಿ ಎಲ್ಲಾ ಲೋಕಗಳಲ್ಲೂ ಸಂಚಿಸುವ ಭಾಗ್ಯ ದೊರಕುತ್ತದೆ ಎಂದು ಉತ್ತರಿಸಿದ್ದಾರೆ.

**ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ । ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ । ಅಥ ಯದಿ ಮಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಮಾತರಃ ಸಮುತ್ತಿಷ್ಠಂತಿ । ತೇನ ಮಾತೃ ಲೋಕೇನ ಸಂಪನ್ನೋ ಮಹೀಯತೇ । ಅಥ ಯದಿ ಭ್ರಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಭ್ರಾತರಃ ಸಮುತ್ತಿಷ್ಠಂತಿ ತೇನ ಭ್ರಾತೃಲೋಕೇನ ಸಂಪನ್ನೋ ಮಹೀಯತೇ । ಅಥ ಯದಿ ಸ್ವಸೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ವಸಾರಃ ಸಮುತ್ತಿಷ್ಠಂತಿ । ತೇನ**

ಸ್ವಸೃಲೋಕೇನ ಸಂಪನ್ನೋ ಮಹೀಯತೇ । ಅಥ ಯದಿ ಸಖಿಲೋಕಾಮೋ ಭವತಿ ಸಂಕಲ್ಪಾದೇವಸ್ಯ ಸಖಾಯಃ ಸಮುತ್ತಿಷ್ಠಂತಿ । ತೇನ ಸಖಿಲೋಕೇನ ಸಂಪನ್ನೋ ಮಹೀಯತೇ ।

ಆ ಮುಕ್ತನು ತನ್ನ ಚರಮಜನ್ಮವಿತ್ತ ತಂದೆ ವಿಷ್ಣುಲೋಕ ಹೊಂದಲಿ. ಅವನ ಆ ಲೋಕವೇ ನನ್ನದೂ ಆಗಿರಲೆಂದು ಬಯಸಿದರೆ ಆಗ ಅವನ ಇಚ್ಛಾಮಾತ್ರದಿಂದಲೇ ಅವನ ತಂದೆ ಮುಕ್ತನಾಗಿ ಅವನ ಎದುರಿನಲ್ಲಿ ಇರುತ್ತಾನೆ. ತಂದೆಯ ದರ್ಶನದಿಂದ ಯುಕ್ತನಾದ ಆ ಮುಕ್ತನು ಇತರ ಮುಕ್ತರಿಂದ ಗೌರವಿಸಲ್ಪಡುತ್ತಾನೆ. ಆ ಮುಕ್ತನು ತನ್ನ ಚರಮಜನ್ಮದ ಮಾತೆಯನ್ನು ತನ್ನ ಲೋಕದಲ್ಲಿ ನೋಡಲು ಬಯಸಿದನೆಂದರೆ ಆಗ ಅವನ ಇಚ್ಛಾಮಾತ್ರದಿಂದಲೇ ಅವನ ಮಾತೆಯರು ಮುಕ್ತರಾಗಿ ತನ್ನ ಮುಂದೆ ಸನ್ನಿಹಿತರಾಗಿರುವರು. ತನ್ನ ಮಾತೆಯರ ದರ್ಶನದಿಂದ ಯುಕ್ತನಾದ ಆ ಮುಕ್ತನು ಇತರ ಮುಕ್ತರಿಂದಪ ಆದರಿಸಲ್ಪಡುವನು. ಅವನ ತನ್ನ ಚರಮಜನ್ಮದ ಸಹೋದರರನ್ನು ತನ್ನ ಲೋಕದಲ್ಲಿ ನೋಡಲು ಇಚ್ಛಿಸಿದರೆ ಆಗ ಅವನ ಇಚ್ಛಾಮಾತ್ರದಿಂದ ಆ ಸಹೋದರರು ಮುಕ್ತರಾಗಿ ಬಂದು ಮುಂದೆ ಸನ್ನಿಹಿತರಾಗರುತ್ತಾರೆ. ಸಹೋದರರ ದರ್ಶನದಿಂದ ಸಂತುಷ್ಟನಾದ ಅವನನ್ನು ಇತರ ಮುಕ್ತರು ಸನ್ಮಾನಿಸುತ್ತಾರೆ. ಅವನು ತನ್ನ ಚರಮಜನ್ಮದ ಸಹೋದರಿಯರನ್ನು ತನ್ನ ಲೋಕದಲ್ಲಿ ನೋಡಲು ಬಯಸಿದರೆ ಅವನ ಇಚ್ಛಾಮಾತ್ರದಿಂದ ಸಹೋದರಿಯರು ಮುಕ್ತರಾಗಿ ಬಂದು ಮುಂದೆ ಸನ್ನಿಹಿತರಾಗುವರು. ಸಹೋದರಿಯರ ದರ್ಶನದಿಂದ ಕೃತಕೃತ್ಯನಾದ ಅವನನ್ನು ಇತರ ಮುಕ್ತರು ಆದರಿಸುತ್ತಾರೆ. ಆ ಮುಕ್ತನು ತನ್ನ ಚರಮಜನ್ಮದ ಸ್ನೇಹಿತರನ್ನು ತನ್ನ ಲೋಕದಲ್ಲಿ ನೋಡಲು ಬಯಸಿದನೆಂದರೆ ಅವನ ಇಚ್ಛಾಮಾತ್ರದಿಂದಲೇ ಅವನ ಸ್ನೇಹಿತರು ಮುಕ್ತರಾಗಿ ಬಂದು ಮುಂದೆ ಪ್ರತ್ಯಕ್ಷರಾಗುವರು. ಸ್ನೇಹಿತರ ದರ್ಶನದಿಂದ ತೃಪ್ತನಾದ ಆ ಮುಕ್ತನನ್ನು ಇತರ ಮುಕ್ತರು ಆದರಿಸುತ್ತಾರೆ.

ಅಥ ಯದಿ ಗಂಧಮಾಲ್ಯಲೋಕಕಾಮೋ ಭವತಿ ಸಂಕಲ್ಪಾದೇವಸ್ಯ ಗಂಧಮಾಲ್ಯೇ ಸಮುತ್ತಿಷ್ಠತಃ । ತೇನ ಗಂಧಮಾಲ್ಯಲೋಕೇನ ಸಂಪನ್ನೋ ಮಹೀಯತೇ । ಅಥ ಯದ್ಯನ್ನಪಾನಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯನ್ನಪಾನೇ ಸಮುತ್ತಿಷ್ಠತಃ। ತೇನಾನ್ನಪಾನಲೋಕೇನ ಸಂಪನ್ನೋ ಮಹೀಯತೇ । ಅಥ ಯದಿ ಗೀತವಾದಿತ್ರ ಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಗೀತವಾದಿತ್ರೇ ಸಮುತ್ತಿಷ್ಠಂತಃ । ತೇನ ಗೀತವಾದಿತ್ರ ಲೋಕೇನ ಸಂಪನ್ನೋ ಮಹೀಯತೇ। ಅಥ ಯದಿ ಸ್ತ್ರೀಲೋಕಕಾಮೋ

ಭವತಿ ಸಂಕಲ್ಪಾದೇವಾಸ್ಯಸ್ತ್ರಿಯಃ ಸಮುತ್ತಿಷ್ಠಂತಿ । ತೇನ ಸ್ತ್ರೀಲೋಕೇನ ಸಂಪನ್ನೋ ಮಹೀಯತೇ । ಯಂ ಯಮಂತಭಿಕಾಮೋ ಭವತಿ ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠಂತಿ । ತೇನ ಸಂಪನ್ನೋನ ಮಹೀಯತೇ ॥

ಅವನು ಗಂಧಮಾಲ್ಯಾದಿ ಭೋಗ್ಯವಸ್ತುಗಳನ್ನು ಭೋಗಿಸಲು ಇಚ್ಛಿಸಿದನೆಂದರೆ ಅವನ ಇಚ್ಛಾಮಾತ್ರದಿಂದ ಅವೆಲ್ಲವೂ ಎದುರಿಗೆ ಸನ್ನಿಹಿತವಾಗುವುವು. ಗಂಧಮಾಲ್ಯಾದಿಗಳ ಭೋಗದಿಂದ ತೃಪ್ತನಾದ ಅವನು ಇತರ ಮುಕ್ತರಿಂದ ಸನ್ಮಾನಿಸಲ್ಪಡುತ್ತಾನೆ. ಅವನ ಅನ್ನಪಾನಾದಿಗಳನ್ನು ಉಪಭೋಗಿಸಲು ಇಚ್ಛಿಸಿದನೆಂದರೆ ಅವನ ಇಚ್ಛಾಮಾತ್ರದಿಂದ ಅನ್ನಪಾನಗಳು ಎದುರಿಗೆ ಸನ್ನಿಹಿತವಾಗುತ್ತವೆ. ಅನ್ನಪಾನಗಳ ಉಪಭೋಗದಿಂದ ತೃಪ್ತನಾದ ಅವನು ಇತರ ಮುಕ್ತರಿಂದ ಸತ್ಕರಿಸಲ್ಪಡುತ್ತಾನೆ. ಅವನು ಸಂಗೀತ ವಾದ್ಯಗಳನ್ನು ಆಲಿಸಲು ಇಚ್ಛಿಸಿದನೆಂದರೆ ಅವನ ಆ ಇಚ್ಛಾಮಾತ್ರದಿಂದಲೇ ಸಂಗೀತ ವಾದ್ಯಗಳು ಒದಗಿ ಬರುತ್ತವೆ. ಸಂಗೀತವಾದ್ಯಗಳ ಶ್ರವಣದಿಂದ ತೃಪ್ತನಾದ ಆ ಮುಕ್ತನನ್ನು ಇತರ ಮುಕ್ತರು ಸನ್ಮಾನಿಸುತ್ತಾರೆ. ಅವನು ಚರಮ ಜನ್ಮದಲ್ಲಿ ಸೇವಿಸಿದ ಸ್ತ್ರೀಯರನ್ನು ತನ್ನ ಲೋಕದಲ್ಲಿ ಕಾಣಲು ಇಚ್ಛಿಸಿದನೆಂದರೆ ಆಗ ಅವನ ಇಚ್ಛಾಮಾತ್ರದಿಂದಲೇ ಆ ಸ್ತ್ರೀಯರು ಮುಕ್ತರಾಗಿ ಮುಂದೆ ಬಂದು ಸನ್ನಿಹಿತರಾಗರುವರು. ಸ್ತ್ರೀಯರ ದರ್ಶನದಿಂದ ತೃಪ್ತನಾದ ಅವನು ಇತರ ಮುಕ್ತರಿಂದ ಪೂಜಿಸಲ್ಪಡುತ್ತಾನೆ. ಆ ಮುಕ್ತನು ಯಾವ ಯಾವ ಪ್ರದೇಶದಲ್ಲಿ ಸಂಚರಿಸಲು ಬಯಸುತ್ತಾನೋ ಪ್ರದೇಶಗಳೂ, ಎಲ್ಲ ಅಭೀಷ್ಟವಸ್ತುಗಳೂ ಇಚ್ಛಾಮಾತ್ರದಿಂದಲೇ ಅವನಿಗೆ ಒದಗಿ ಬರುತ್ತವೆ. ತನ್ನ ಆ ಇಚ್ಛಾವಿಷಯಗಳನ್ನು ಅನುಭವಿಸಿ ತೃಪ್ತನಾದ ಆ ಮುಕ್ತನು ಇತರ ಮುಕ್ತರಿಂದ ಸನ್ಮಾನಿಸಲ್ಪಡುತ್ತಾನೆ.

ತ ಇಮೇ ಸತ್ಯಾಃ ಕಾಮಾಃ ಅನೃತಾಪಿಧಾನಾಃ । ತೇಷಾಂ ಸತ್ಯಾನ್ಯಾಂ ಸತಾಮನೃತಮಪಿಧಾನಮ್ । ಯೋ ಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ ಲಭತೇ ।

ಮುಕ್ತಿಯಲ್ಲಿ ಕಂಡು ಬರುವ ಈ ಸತ್ಯಕಾಮತ್ವಾದಿರೂಪಮಹಿಮೆಯು ಜೀವರಿಗೆ ಸಂಸಾರಾವಸ್ಥೆಯಲ್ಲೂ ಇದ್ದೇ ಇದೆ. ಆದರೆ ಅನಾದ್ಯಜ್ಞಾನದಿಂದ ಆವೃತವಾಗಿದೆ. ಅಂದರೆ ಅದರ ಅಭಿವ್ಯಕ್ತಿಗೆ ಅಜ್ಞಾನವು ಪ್ರತಿಬಂಧಕವಾಗಿದೆ. ಆದ್ದರಿಂದ ಮುಕ್ತಿಯೋಗ್ಯ ಸಂಸಾರಿ ಜೀವನ ಯಾವ ಯಾವ ತಂದೆ ತಾಯಿ ಮೊದಲಾದ ಬಂಧುಗಳು ಪರಲೋಕಕ್ಕೆ ಹೋಗುತ್ತಾರೋ, ಅವರನ್ನು ಈ ಜೀವನು ಪುನಃ ನೋಡಲಿಚ್ಛಿಸಿದರೂ ನೋಡಲು ಸಿಗುವುದಿಲ್ಲ.

**ಅಥ ಯೇ ಚಾಸ್ಯೇಹ ಜೀವಾ ಯೇ ಚ ಪ್ರೇತಾ ಯಚ್ಚಾನ್ಯದಿಚ್ಛನ್ ನ ಲಭತೇ ಸರ್ವಂ ತದತ್ರ ಗತ್ವಾವಿಂದತೇ। ಅತ್ರ ಹ್ಯಸ್ಯೈತೇ ಸತ್ಯಾಃ ಕಾಮಾಃ। ತದ್ಯಥಾऽಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ। ಅನೃತೇನ ಹಿ ಪ್ರತ್ಯೂಢಾಃ।**

ಈ ಅಮುಕ್ತ ಜೀವನು ಬದುಕಿರುವ ಅಥವಾ ಮರಣ ಹೊಂದಿರುವ ತನ್ನ ಬಂಧುಗಳನ್ನಾಗಲೀ, ಬೇರೆ ವಿಷಯ ಪದಾರ್ಥಗಳನ್ನಾಗಲೀ ಬಯಸಿದಾಗಲೆಲ್ಲಾ ಹೊಂದಲಾರ, ಆದರೆ ಅವೆಲ್ಲವನ್ನೂ ವಿಷ್ಣುಲೋಕದಲ್ಲಿ ಹೊಂದುತ್ತಾನೆ. ಏಕೆಂದರೆ ಅಲ್ಲಿ ಅವನ ಸ್ವರೂಪ ಭೂತವಾದ ಸತ್ಯಕಾಮತ್ವಾದಿಗಳು ಅಭಿವ್ಯಕ್ತವಾಗುತ್ತದೆ. ಸಂಸಾರದಲ್ಲಿ ಅವು ಅಜ್ಞಾನಾವೃತವಾಗಿರುತ್ತವೆ. ನಿಧಿಯಿರುವ ಸ್ಥಳವೆಂದು ಅರಿಯದೇ ಇರುವವರು ಆ ಸ್ಥಳದಲ್ಲಿಯೇ ಇರುವ ಬಂಗಾರದ ನಿಧಿಯ ಮೇಲೆ ಸಂಚರಿಸುತ್ತಿದ್ದರೂ ಆ ನಿಧಿಯನ್ನು ಮಾತ್ರ ಹೇಗೆ ನೋಡುವುದಿಲ್ಲವೋ ಹಾಗೆಯೇ ಈ ಜೀವರೆಲ್ಲರೂ ಪ್ರತಿದಿನ ಗಾಢನಿದ್ರಾವಸ್ಥೆಯಲ್ಲಿ ಹೃದಯದಲ್ಲಿರುವ ಸರ್ವಾಶ್ರಯನಾದ ಪರಬ್ರಹ್ಮನನ್ನು ಹೊಂದಿದರೂ ಅಜ್ಞಾನದಿಂದ ಆವೃತವಾಗಿರುವುದರಿಂದ ಅವನನ್ನು ಸಾಕ್ಷಾತ್ಕರಿಸುತ್ತಿಲ್ಲ. ಅಷ್ಟರಿಂದಲೇ ಅವನು ಅಲ್ಲಿ ಇಲ್ಲವೇ ಇಲ್ಲ ಎಂದು ನಿರ್ಣಯಿಸುವುದು ಸರಿಯಲ್ಲ.

ಸ ವಾ ಏಷ ಆತ್ಮಾ ಹೃದಿ। ತಸ್ಯೈತದೇತದೇವ ನಿರುಕ್ತಂ 'ಹೃದ್ಯಯಂ' ಇತಿ। ತಸ್ಮಾತ್ ಹೃದಯಮ್। ಅಹರಹರ್ವಾ ಏವಂ ವಿತ್ ಸ್ವರ್ಗಂ ಲೋಕಮೇತಿ।

ಅಂತಹ ಈ ಪರಮಾತ್ಮನು ಹೃದಯದಲ್ಲಿ ಇದ್ದೇ ಇರುವನು. ಹೃದಯ ಕಮಲದಲ್ಲಿರುವ ಈ ಪರಮಾತ್ಮನ 'ಹೃದಯ' ಎಂಬ ನಾಮದ ಅರ್ಥ ವಿವರಣೆ ಹೃದಯದಲ್ಲಿರುವವನು, ಹೃದಿ ಆಯತೇ ಎಂದು. ಆದುದರಿಂದ ವನು ಹೃದಯನಾಮಕನು. ನಿತ್ಯವೂ, ಹೀಗೆ ಹೃದಯನಾಮಕ ವಿಷ್ಣುವನ್ನರಿತು ಉಪಾಸಿಸುವವನು ವಿಷ್ಣುಲೋಕವನ್ನು ಹೊಂದುವನು.

**ಅಥ ಯ ಏಷ ಸಂಪ್ರಸಾದೋऽಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಏಷ ಆತ್ಮೇತಿ ಹೋವಾಚ । ಏತದಮೃತಮಭಯಂ ಏತತ್ ಬ್ರಹ್ಮೇತಿ । ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ ॥**

ಪರಮಾತ್ಮನ ಪರಮಪ್ರಸಾದಕ್ಕೆ ಪಾತ್ರನೆನಿಸಿದ ಈ ಪರಮಾತ್ಮಜ್ಞಾನಿಯು ತನ್ನ ಚರಮಶರೀರದಿಂದ ಹೊರಗೆ ಬಂದು ಪರಂಜ್ಯೋತಿಸ್ವರೂಪನಾದ ಪರಮಾತ್ಮನನ್ನು ಹೊಂದಿ, ಜ್ಞಾನಾನಂದಮಯವಾದ ತನ್ನ ಸ್ವರೂಪದಿಂದ ಪ್ರಕಟನಾಗುತ್ತಾನೆ. ಈ ಪರಂಜ್ಯೋತಿ ಜೀವನಲ್ಲ, ಪರಮಾತ್ಮನು. ಈ ಪರಮಾತ್ಮನು ನಿತ್ಯಮುಕ್ತನೂ, ಭಯರಹಿತನೂ, ಗುಣಪರಿಪೂರ್ಣನೂ ಆಗಿರುವನು ಎಂದು ಈ ಉಪನಿಷತ್ತಿನ ದ್ರಷ್ಟಾರಳಾದ ಲಕ್ಷ್ಮೀದೇವಿ ಹೇಳಿದ್ದಾಳೆ. ಈ ಪರಮಾತ್ಮನಿಗೆ ಸತ್ಯ ಎಂಬುದು ನಾಮಾಂತರ.

**ತಾನಿ ಹ ವಾ ಏತಾನಿ ತ್ರೀಣ್ಯಕ್ಷರಾಣಿ ಸತ್ ತಿ ಯಮಿತಿ । ತತ್ ಯತ್ ಸತ್ ತದಮೃತಮ್ । ಅಥ ಯತ್ ತಿ ತನ್ಮರ್ತ್ಯಮ್ । ಅಥ ಯತ್ ಯಂ ತೇನೋಭೇ ಯಚ್ಛತಿ । ಯದನೇನೋಭೇ ಯಚ್ಛತಿ ತಸ್ಮಾದ್ಯಮಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ ॥**

'ಸತ್ಯಂ' ಎಂಬ ಪದದಲ್ಲಿ 'ಸತ್', 'ತಿ', 'ಯಂ' ಎಂದು ಮೂರು ಅಕ್ಷರಗಳಿವೆ. ಅವುಗಳಲ್ಲಿ 'ಸತ್' ಎಂಬ ಅಕ್ಷರ ಮುಕ್ತರ ಸಮೂಹವನ್ನು ಹೇಳುತ್ತಿದೆ. 'ತಿ' ಎಂಬ ಅಕ್ಷರವು ಮರ್ತ್ಯರೆನಿಸಿರುವ ಸಂಸಾರಿಜೀವರನ್ನು ಹೇಳುತ್ತಿದೆ. 'ಯಂ' ಎಂಬ ಅಕ್ಷರವು ಪರಮಾತ್ಮನು ಮುಕ್ತ, ಸಂಸಾರಿಗಳಿಬ್ಬರನ್ನೂ ನಿಯಮಿಸುತ್ತಾನೆ ಎಂಬ ಪ್ರಮೇಯವನ್ನು ಹೇಳುತ್ತಿದೆ. 'ಯಂ' ಎಂಬುದರಿಂದ ಮುಕ್ತರು ಹಾಗೂ ಸಂಸಾರಿಗಳೆಂಬ ಎರಡು ರೀತಿಯ ಜೀವ ವರ್ಗಗಳನ್ನು ನಿಯಮಿಸುತ್ತಾನೆ ಎಂಬ ಅರ್ಥವು ಲಭಿಸುವುದರಿಂದ ಪರಮಾತ್ಮನಿಗೆ 'ಯಂ' ಎಂದು ಹೆಸರು. ಹೀಗೆ ಸತ್ಯಶಬ್ದವಾಚ್ಯನಾಗಿರುವನೆಂದು ಪರಮಾತ್ಮನನ್ನು ಯಾರು ನಿತ್ಯ ಉಪಾಸನೆ ಮಾಡುವರೋ ಅಂತಹ ಜ್ಞಾನಿಗಳು ವಿಷ್ಣುಲೋಕವನ್ನು ಪಡೆಯುತ್ತಾರೆ.

**ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮ ಸಂಭೇದಾಯ । ನೈತಂ ಸೇತುಮಹೋರಾತ್ರೇ ತರತಃ। ನ ಜರಾ। ನ ಮೃತ್ಯುಃ। ನ ಶೋಕಃ। ನ ಸುಕೃತಮ್। ನ ದುಷ್ಕೃತಮ್ । ಸರ್ವೇ ಪಾಪ್ಮಾನೋಽತೋ ನಿವರ್ತಂತೇ। ಅಪಹತ ಪಾಪ್ಮಾಹ್ಯೇಷ ಬ್ರಹ್ಮಲೋಕಃ।**

ಹೃದಯಾಕಾಶಸ್ಥನಾದ ಈ ಪರಮಾತ್ಮನು ಈ ಲೋಕಗಳೆಲ್ಲಾ ಒಂದರೊಳಗೊಂದು ಸೇರಿಕೊಳ್ಳದಂತೆ ಅಥವಾ ನಾಶವಾಗದಂತೆ ಅವುಗಳಿಗೆ ಆಶ್ರಯನೂ ಆಧಾರನೂ ಆಗಿರುವನು. ಈ ಪರಮಾತ್ಮನೇ ಹಗಲು ರಾತ್ರಿಗಳನ್ನು ಮೀರಿ ನಿಂತಿರುವನು ಏನಹ ಹಗಲು ರಾತ್ರಿಗಳ ಪರಿಣಾಮವಾದ ಯಾವ ವಿಕಾರವೂ ಅವನಲ್ಲಿ ಉಂಟಾಗುವುದಿಲ್ಲ. ಆದ್ದರಿಂದ ಮುಪ್ಪು, ಸಾವು, ದುಃಖ, ಪಾಪ, ಪುಣ್ಯ ಇವ್ಯೆಲವೂ ಅವನನ್ನು ಎಂದೂ ಸ್ಪರ್ಶಿಸಲಾರವು. ಎಲ್ಲಾ

ಪಾಪಗಳೂ ಅವನಿಂದ ನಿತ್ಯವೂ ದೂರವಾಗಿವೆ. ಆದ್ದರಿಂದಲೇ ಅವನು ಪಾಪರಹಿತನೆಂದು ಪ್ರಸಿದ್ಧನಾಗಿದ್ದಾನೆ.

ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಂಧಃ ಸನ್ನನಂಧೋ ಭವತಿ । ವಿದ್ಧಃ ಸನ್ನವಿದ್ಧೋ ಭವತಿ । ಉಪತಾಪೀ ಸನ್ನನುಪತಾಪೀ ಭವತಿ । ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ । ಅಸಕೃತ್ ವಿಭಾತೋ ಹ್ಯೇವೈಷ ಬ್ರಹ್ಮಲೋಕಃ ॥

ಅವನಪ್ರಸಾದದಿಂದ ಸರ್ವಾಶ್ರಯನಾದ ಅವನನ್ನು ಹೊಂದುವುದಕ್ಕಾಗಿ ಸಂಸಾರವನ್ನು ದಾಟಿ,ಮೊದಲು ಸಂಸಾರಾವಸ್ಥೆಯಲ್ಲಿ ಅಜ್ಞಾನಿಯಾಗಿರುವ ಜೀವನು, ಬಳಿಕ ಜ್ಞಾನಿಯಾಗಿಯೂ, ಮದಲು ಇತರರ ಕೆಟ್ಟಮಾತಿನಿಂದ ಘಾಸಿಹೊಂದಿದವನು ಬಳಿಕ ಅಂಥ ಆಘಾತ ಇಲ್ಲದವನೂ, ಮೊದಲು ರೋಗಿಯಾಗಿದ್ದವನು ಬಳಿಕ ರೋಗರಹಿತನೂ ಆಗಿ ಪಾಪರಹಿತನಾದ ಪರಮಾತ್ಮನ ಪ್ರಸಾದದಿಂದ, ತಾನೂ ಪಾಪರಹಿತನೆನಿಸುತ್ತಾನೆ. ಅವನನ್ನು ಹೊಂದುವುದಕ್ಕಾಗಿ ಸಂಸಾರವನ್ನು ದಾಟಿ ಮುಕ್ತರೆನಿಸಿರುವ ಜೀವರಿಗೆ ರಾತ್ರಿಯೂ ಹಗಲೆನಿಸುತ್ತದೆ. ಬ್ರಹ್ಮನೆಂಬ ಈ ಸರ್ವಾಶ್ರಯನು ಸದಾ ಪ್ರಕಾಶಮಾನನಾಗಿಯೇ ಇರುವುದರಿಂದ ಅವನನ್ನು ಹೊಂದಿದ ಜೀವನಿಗೆ ರಾತ್ರಿಯೂ ಹಗಲೆನಿಸುವುದು ಯುಕ್ತವೇ ಆಗಿದೆ.

ತದ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿಂದಂತಿ ತೇಷಾಮೇವೈಷ ಬ್ರಹ್ಮಲೋಕಃ । ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥

ಉಪಾಸಕರ ನಡುವೆ ಯಾರು ತ್ರಿಕರಣ ಪೂರ್ವಕವಾಗಿ ಅನುಷ್ಠಾನಗೈದು, ಗುಣಪರಿಪೂರ್ಣನೂ ಸರ್ವಾಶ್ರಯನೂ ಆದ ಪರಮಾತ್ಮನನ್ನು ತಿಳಿದುಕೊಳ್ಳುವರೋ ಅವರಿಗೆ ಮಾತ್ರ ಪರಮಾತ್ಮನ ಕೃಪಾಕಟಾಕ್ಷವು ಲಭಿಸುತ್ತದೆ. ಮತ್ತು ಬ್ರಹ್ಮದರ್ಶನವಾಗುತ್ತದೆ. ಅದರ ಫಲವಾಗಿ ಅವರಿಗೆ ಎಲ್ಲಾ ಲೋಕಗಳಲ್ಲಿ ಇಚ್ಛಾನುಸಾರವಾಗಿ ಸಂಚರಿಸುವ ಸೌಭಾಗ್ಯ ಲಭಿಸುತ್ತದೆ.

ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ ।
ಬ್ರಹ್ಮಚರ್ಯೇಣ ಹ್ಯೇವ ಯೋ ಜ್ಞಾತಾ ತಂ ವಿಂದತೇ ।
ಅಥ ಯದಿಷ್ಟಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ ।
ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾSSತ್ಮಾನಮನುವಿಂದತೇ ॥

ಜ್ಞಾನವೊಂದೇ ಮೋಕ್ಷಸಾಧನವಾಗಿರುವುದರಿಂದ ಜ್ಞಾನಿಗಳು ಯಾವ ಯಜ್ಞವನ್ನು ಮೋಕ್ಷಸಾಧನವೆನ್ನುವರೋ ಆ ಯಜ್ಞವು ಬ್ರಹ್ಮನ ಪ್ರಾಪ್ತಿಗೆ ಸಾಧನವಾದ ಜ್ಞಾನವಾಗಿದ್ದು

ಮಾನಸ ಬ್ರಹ್ಮಚರ್ಯವೇ ಆಗಿದೆ. ಕಾಯಿಕ ಹಾಗೂ ವಾಚಿಕ ಬ್ರಹ್ಮಚರ್ಯದ ಸಹಾಯದಿಂದ ಜ್ಞಾನವನ್ನು ಸಂಪಾದಿಸಿದವನು 'ಜ್ಞ' ಎನಿಸಿರುವ ಆ ಪರಮಾತ್ಮನನ್ನು ಹೊಂದುತ್ತಾನೆಂಬುದು ಪ್ರಸಿದ್ಧ. ಜ್ಞಾನಿಗಳು ಯಾವ ಇಷ್ಟವನ್ನು ಮೋಕ್ಷಸಾಧನವೆಂದು ಅನ್ನುವರೋ ಅದೂ ಕೂಡ ಬ್ರಹ್ಮಚರ್ಯೆವೇ ಆಗಿದೆ. ಮಾನಸಿಕ ಬ್ರಹ್ಮಚರ್ಯವೆನಿಸಿರುವ ಪರಬ್ರಹ್ಮಜ್ಞಾನದಿಂದ ಪರಬ್ರಹ್ಮನ ಪೂಜಾರೂಪವಾಗಿ ಯಾಗ ಮಾಡಿ ಉಪಾಸಕನು ಪರಬ್ರಹ್ಮನನ್ನು ಹೊಂದುತ್ತಾನೆಂಬುದು ಪ್ರಸಿದ್ಧವೇ ಆಗಿದೆ.

ಅಥ ಯತ್ ಸತ್ತ್ರಾಯಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಬ್ರಹ್ಮಚರ್ಯೇಣ ಹ್ಯೇವ ಸತಃ ಆತ್ಮನಃ ತ್ರಾಣಂ ವಿಂದತೇ । ಅಥ ಯನ್ಮೌನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಬ್ರಹ್ಮಚರ್ಯೇಣ ಹ್ಯೇವಾತ್ಮನಮನುವಿದ್ಯ ಮನುತೇ । ಅಥ ಯದನಾಶಕಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಏಷ ಹ್ಯಾತ್ಮಾ ನ ಪಶ್ಯತಿ ಯಂ ಬ್ರಹ್ಮಚರ್ಯೇಣಾನುವಿಂದತೇ ।

ಜ್ಞಾನಿಗಳು ಯಾವ ಸತ್ತ್ರಾಯಣವನ್ನು ಮೋಕ್ಷಸಾಧನವೆನ್ನುವರೋ ಅದು ಬ್ರಹ್ಮಚರ್ಯವೇ ಆಗಿದೆ. ಮೋಕ್ಷಸಾಧನವಾದ ಬ್ರಹ್ಮವಿಷಯಕ ಜ್ಞಾನವೆಂಬ ಮಾನಸಿಕ ಬ್ರಹ್ಮಚರ್ಯದ ಸಹಾಯದಿಂದಲೇ ಸತ್ ಎಂಬ ಹೆಸರುಳ್ಳ ಪರಮಾತ್ಮನಿಂದ ರಕ್ಷಣೆಯನ್ನು ಜ್ಞಾನಿಯು ಪಡೆಯುತ್ತಾನೆ ಎಂಬ ವಿಷಯವು ಪ್ರಸಿದ್ಧವೇ ಆಗಿದೆ. ಜ್ಞಾನಿಗಳು ಯಾವ ಮೌನವನ್ನು ಮೋಕ್ಷಸಾಧನವೆಯೆನ್ನುವರೋ ಅದೂ ಬ್ರಹ್ಮಚರ್ಯವೇ ಆಗಿದೆ. ಕಾಯಿ ವಾಚಿಕ ಬ್ರಹ್ಮಚರ್ಯದ ಸಹಾಯದಿಂದಲೇ ಶ್ರವಣಾದಿಗಳಿಂದ ಪರಮಾತ್ಮನನ್ನು ಪರೋಕ್ಷವಾಗಿ ಅರಿತು, ಅಪರೋಕ್ಷದಿಂದ ತಿಳಿಯುತ್ತಾನೆ. ಅಪರೋಕ್ಷದಿಂದ ತಿಳಿದು ಮೋಕ್ಷದಲ್ಲಿ ಧ್ಯಾನಿಸುತ್ತಾನೆ ಎಂಬುದೂ ಪ್ರಸಿದ್ಧವೇ ಆಗಿದೆ. ಯಾವ ಅನಾಶಕಾಯನವನ್ನು ಜ್ಞಾನಿಗಳು ಮೋಕ್ಷಸಾಧನವೆನ್ನುವರೋ ಅದೂ ಬ್ರಹ್ಮಚರ್ಯವೇ ಆಗಿದೆ. ಬ್ರಹ್ಮಚರ್ಯದ ಸಹಾಯದಿಂದ ಜ್ಞಾನಿಯು ಯಾವ ಪರಮಾತ್ಮನನ್ನು ಅರಿಯುವನೋ ಅಂತಹ ಪರಮಾತ್ಮನು ಆ ಜ್ಞಾನಿಯ ವಿಷಯದಲ್ಲಿ ನಾಶವಾಗುವುದಿಲ್ಲ. ಅಂದರೆ ಪರಮಾತ್ಮನು ಅವನನ್ನು ಕೈ ಬಿಡುವುದಿಲ್ಲ. ಇದು 'ತಸ್ಯಾಹಂ ನ ಪ್ರಣಶ್ಯಾಮಿ' ಎಂದು ಮುಂತಾದ ವಚನಗಳಿಂದ ಪ್ರಸಿದ್ಧವೇ ಆಗಿದೆ.

ಅಥ ಯದರಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ । ತದೈರಂ ಮದೀಯಂ ಸರಃ । ತದಶ್ವತ್ಥಃ ಸೋಮಸವನಃ । ತದಪರಾಜಿತಾ ಪೂಃ । ಬ್ರಹ್ಮಣಃ ಪ್ರಭುವಿಮಿತಂ

**ಹಿರಣ್ಮಯಮ್ । ತದ್ಯ ಏವೈತಾವರಂ ಚ ವೈ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮಚರ್ಯೇಣಾನುವಿಂದತೇ, ತೇಷಾಮೇವೈಷ ಬ್ರಹ್ಮಲೋಕಃ ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥**

ಜ್ಞಾನಿಗಳು ಯಾವ ಅರಣ್ಯಾಯನವನ್ನು ಮೋಕ್ಷಸಾಧನವೆನ್ನುವರೋ ಅದೂ ಬ್ರಹ್ಮಚರ್ಯವೇ ಆಗಿದೆ. ಮೂರನೆಯ ದ್ಯುಲೋಕವಾದ ಶ್ವೇತದ್ವಿಪದಲೀಲ ಅರ ಹಾಗೂ ಣ್ಯ ಎಂಬ ಹೆಸರುಳ್ಳ ಸಮುದ್ರಗಳಂತಹ ಎರಡು ಸರೋವರಗಳಿವೆ. ಲಕ್ಷ್ಮ್ಯಾತ್ಮಕವಾದ ಸುಖಕರವಾದ ಇನ್ನೊಂದು ಸರೋವರೂ ಆ ಬ್ರಹ್ಮಲೋಕದಲ್ಲಿದೆ. ಅಮೃತರಸವನ್ನು ಸುರಿಸುತ್ತಿರುವ ಅಶ್ವತ್ಥವೃಕ್ಷ ಸಮೂಹವೂ ಇದ. ಅಪರಾಜಿತಾ ಎಂಬ ಹೆಸರುಳ್ಳ ಪರಬ್ರಹ್ಮನ ಪುರವೂ ಇದೆ. ಇಲ್ಲಿ ಪರಮಾತ್ಮನಿಗೆ ತಕ್ಕ ಪರಿಮಾಣವುಳ್ಳ ಲಕ್ಷ್ಮ್ಯಾತ್ಮಕವಾದ ಸುವರ್ಣಮಯ ಪರ್ಯಂಕ ಒಂದಿದೆ.

ಪರಮಾತ್ಮ ಜ್ಞಾನವೆಂಬ ಬ್ರಹ್ಮಚರ್ಯದ ಸಹಾಯದಿಂದ ಯಾರು ಈ ಅರ ಹಾಗೂ ಣ್ಯಗಳೆಂಬ ಸರೋವರಗಳನ್ನು ಹೊಂದುತ್ತಾರೋ ಅಂತಹ ಜ್ಞಾನಿಗಳಿಗೇ ಈ ಬ್ರಹ್ಮಲೋಕವು ಲಭಿಸುತ್ತದೆ. ಅವರಿಗೇ ತಮಗೆ ಯೋಗ್ಯವಾದ ಎಲ್ಲಾ ಲೋಕಗಳನ್ನೂ ಇಚ್ಛಾನುಸಾರವಾಗಿ ಸಂಚರಿಸುವ ಭಾಗ್ಯವೂ ಕೈಗೂಡುತ್ತದೆ.

**ಅಥ ಯಾ ಏತ ಹೃದಯಸ್ಯ ನಾಡ್ಯಃ ತಾಃ ಪಿಂಗಲಸ್ಯಾಣಿಮ್ನಃ ತಿಷ್ಠಂತಿ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯೇತಿ । ಅಸೌ ವಾ ಆದಿತ್ಯಃ ಪಿಂಗಲಃ । ಏಷ ಶುಕ್ಲಃ । ಏಷ ನೀಲಃ । ಏಷ ಪೀತಃ । ಏಷ ಲೋಹಿತಃ॥**

ಸುಷುಮ್ನಾ, ನಾಂದಿನೀ, ಪಿಂಗಲಾ, ವಜ್ರಿಕಾ ಹಾಗೂ ಇಡಾ ಎಂಬ ಹೆಸರುಳ್ಳ ಯಾವ ಐದು ಹೃದಯದ ನಾಡಿಗಳಿವೆಯೋ ಅವು ಕ್ರಮವಾಗಿ ಕೆಂಪುಮಿಶ್ರಿತ ಕಪ್ಪುಬಣ್ಣವುಳ್ಳ ಅತಿಸೂಕ್ಷ್ಮವಾದ ಸಂಕರ್ಷನಿಗೂ, ಶುಕ್ಲವರ್ಣನಾದ ಅಣುಪರಿಮಾಣವುಳ್ಳ ವಾಸುದೇವನಿಗೂ, ನೀಲವಣನಾಗಿದ್ದು, ಅಣುಪರಿಮಿತಿಯುಳ್ಳ ಅನಿರುದ್ಧನಿಗೂ, ಬಂಗಾರಬಣ್ಣವಿದ್ದು ಅಣುರೂಪವಾದ ಪ್ರದ್ಯುಮ್ನನಿಗೂ, ರಕ್ತವರ್ಣನಾಗಿದ್ದು ಅಣುಸ್ವರೂಪನಾದ ನಾರಾಯಣನಿಗೂ ಆಧಾರವಾಗಿವೆ ಎಂದು ಉಪಾಸನೆಗೈಯಬೇಕು. ಜಗತ್ತಿಗೆ ಆದಿಯಾಗಿರುವುದರಿಂದ 'ಆದಿತ್ಯ' ಎಂಬ ಹೆಸರುಳ್ಳ ಈ ಪರಮಾತ್ಮನು ಆದಿತ್ಯನಲ್ಲಿರುವನೆಂದೂ, ಈ ಸೂರ್ಯಮಂಡಲದಲ್ಲಿ ಆದಿತ್ಯ ಎಂಬ ಹೆಸರುಳ್ಳ ಕೆಂಪುಮಿಶ್ರಿತಕಪ್ಪುವರ್ಣವುಳ್ಳ ಸಂಕರ್ಷಣ, ಶುಕ್ಲವರ್ಣ ವಾಸುದೇವ, ನೀಲವರ್ಣ ಅನಿರುದ್ಧ,

ಬಂಗಾರದ ವರ್ಣವುಳ್ಳ ಪ್ರದ್ಯುಮ್ನ, ಕೆಂಪುವರ್ಣವುಳ್ಳ ನಾರಾಯಣ ಹೀಗೆ ಪರಮಾತ್ಮನ ಐದುರೂಪಗಳೂ ಇವೆ ಎಂದೂ ಉಪಾಸಿಸಬೇಕು.

ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛಂತೀಮಂ ಚಾಮುಂಚ। ಅಭ್ಯೋ ನಾಡೀಭ್ಯಃ ಪ್ರತಾಯಂತೇ ತೇऽಮುಷ್ಮಿನ್ನಾದ್ಯೇತ ಸೃಪ್ತಾಃ।

ಯಾವ ರೀತಿಯಲ್ಲಿ ದೊಡ್ಡದಾದ ರಸ್ತೆತಯು ಹತ್ತಿರದಲ್ಲಿರುವ ಈ ಗ್ರಾಮ ಹಾಗೂ ದೂರದಲ್ಲಿರುವ ಆ ಗ್ರಾಮ ಹೀಗೆ ಎರಡು ಗ್ರಾಮಗಳನ್ನು ವ್ಯಾಪಿಸಿಕೊಂಡಿರುತ್ತದೋ ಹಾಗೆಯೇ, ಆದಿತ್ಯನಲ್ಲಿರುವ ಆದಿತ್ಯನಾಮಕ ಪರಮಾತಮ್ನ ಕಿರಣಗಳು ಸೂರ್ಯಕಿರಣಗಳಲ್ಲಿ ವ್ಯಾಪ್ತವಾಗಿದ್ದು ಈ ಜೀವನನ್ನು ಆ ಸೂರ್ಯನನ್ನು ಹೀಗೆ ಎರಡು ಲೋಕಗಳನ್ನು ವ್ಯಾಪಿಸಿಕೊಂಡಿವೆ. ಆ ಸೂರ್ಯನಿಂದ ಹೊರಟು ಸೂರ್ಯನಲ್ಲಿರುವವುಗಳಾಗಿ ಯಾವ ಕಿರಣಗಳು ಕಾಣಸುತ್ತಿವೆಯೋ ಅವು ಜೀವನ ಹೃದಯದಲ್ಲಿರುವ ನಾಡಿಗಳಲ್ಲಿ ವ್ಯಾಪ್ತವಾಗಿವೆ. ಈ ನಾಡಿಗಳಿಂದ ಹೊರಟು ನಾಡಿಗಳಲ್ಲಿರುವಂತೆ ಯಾವ ಕಿರಣಗಳು ಕಾಣಸುತ್ತಿವೆಯೋ ಅವು ಸೂರ್ಯನಲ್ಲಿ ವ್ಯಾಪಿಸಿವೆ.

ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ। ತಂ ನ ಕಶ್ಚನ ಪಾಪ್ಮಾ ಸ್ಪೃಶತಿ। ತೇಜಸಾ ಹಿ ತದಾ ಸಂಪನ್ನೋನ ಭವತಿ।

ಸುಪ್ತಜೀವನು ಎಲ್ಲ ಇಂದ್ರಿಯ ವ್ಯಾಪಾರಗಳನ್ನು ತೊರೆದು ಸ್ವರೂಪ ಸುಖವನ್ನನುಭವಿಸುತ್ತಾ, ಯಾವಾಗ ಸ್ವಪ್ನವನ್ನು ಕಾಣುವುದಿಲ್ಲವೋ ಆಗ ಸುಷುಮ್ನಾನಾಡಿಯಲ್ಲಿರುವ ಪರಮಾತ್ಮನನ್ನು ಹೊಂದಿರುತ್ತಾನೆ. ಆಗ ಜೀವನು ತೇಜೋರೂಪನಾದ ಪರಮಾತ್ಮನಿಂದ ಕೂಡಿಕೊಂಡಿರುವ ಕಾರಣ ಯಾವ ಪಾಪವೂ ಅವನನ್ನು ಸ್ಪರ್ಶಿಸುವುದಿಲ್ಲ.

ಅಥ ಯತ್ರೈತದಬಲಿಮಾನಂ ನೀತೋ ಭವತಿ ತಮಭಿತ ಆಸೀನಾ ಆಹುಃ 'ಜಾನಿಸಿ ಮಾಂ ? ಜಾನಾಸಿ ಮಾಂ?' ಇತಿ। ಸ ಯಾವದಸ್ಮಾತ್ ಶರೀರಾದನ್ನುಂತೋ ಭವತಿ ತಾವತ್ ಜಾನಾತಿ।

ಯಾವಾಗ ಹೃದಯಕಮಲದಲ್ಲಿರುವ ಪರಮಾತ್ಮನನ್ನು ಉಪಾಸಿಸುವ ಜ್ಞಾನಿಯು ಜರಾದಿಗಳಿಂದ ಶರೀರದೌರ್ಬಲ್ಯವನ್ನು ಹೊಂದುವನೋ ಆಗ ಅವನ ಸುತ್ತಲೂ ಕುಳಿತಿರುವ

ಬಂಧುಗಳು ನನ್ನ ಪರಿಚಯವಾಗುತ್ತಿದೆಯೋ ? ನನ್ನ ಪರಿಚಯವಾಗುತ್ತಿದೆಯೋ ? ಎಂದು ಪ್ರಶ್ನಿಸುತ್ತಾರೆ. ಆ ಜ್ಞಾನಿಯು ಎಷ್ಟರತನಕ ತನ್ನ ಶರೀರದಿಂದ ಉತ್ಕ್ರಮಣ ಹೊಂದುವುದಿಲ್ಲವೋ ಅಲ್ಲಿಯ ತನಕ ಅವರನ್ನು ಗುರುತಿಸಿಕೊಳ್ಳುತ್ತಾನೆ.

ಅಥ ಯತ್ರೈತಸ್ಮಾತ್ ಶರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವ ಆಕ್ರಮತೇ । ಸ ಓಮಿತಿವಾಹೋದ್ವಾಮೀಯತೇ । ಸ ಯಾವತ್ ಕ್ಷಿಪ್ಯೇತ್ ಮನಃ ತಾವದಾದಿತ್ಯಂ ಗಚ್ಛತಿ । ಏತದ್ವೈ ಖಲು ಲೋಕದ್ವಾರಂ ವಿದುಷಾಂ ಪ್ರಪದನಮ್ । ನಿರೋಧೋಽ-ವಿದುಷಾಮ್।

ಯಾವಾಗ ಆ ಜ್ಞಾನಿಯು ಈ ಶರೀರದಿಂದ ಉತ್ಕ್ರಮಣ ಹೊಂದುತ್ತಾನೋ ಆಗ ನಾಡಿಯಲ್ಲಿ ವ್ಯಾಪ್ತವಾಗಿರುವ ಸೂರ್ಯರಶ್ಮಿಗಳಿಂದ ನಾಡೀದ್ವಾರವನ್ನು ಕಂಡು, ಊರ್ಧ್ವಲೋಕಕ್ಕೆ ಹೊರಡುತ್ತಾನೆ. ಓಂಕಾರವನ್ನು ಪಠಿಸುತ್ತಾ ಸಂಚರಿಸುವ ವಾಯುದೇವರಿಂದ ದಿವ್ಯವಾದ ಚಿದ್ರೂಪ ಮಂಗಳಸ್ವರೂಪವನ್ನು ಹೊಂದುತ್ತಾನೆ. ಅವನನ್ನು ವಾಯುದೇವರು ಯಾವಾಗ ಕರೆದುಕೊಂಡು ಹೋಗಲು ಮನಸ್ಸು ಮಾಡುವರೋ ಆಗ ಅವನು ಆದಿತ್ಯಾಂತರ್ಗತ ಪರಮಾತ್ಮನನ್ನು ಸೇರುತ್ತಾನೆ. ಆ ಪರಮಾತ್ಮನು ಜ್ಞಾನಿಗಳಿಗೆ ಬ್ರಹ್ಮಲೋಕಕ್ಕೆ ಹೋಗಲು ದ್ವಾರವಾಗಿದ್ದು ಅವರಿಂದ ಹೊಂದಲು ಯೋಗ್ಯ ಸ್ಥಾನವಾಗಿರುವನು. ಅಜ್ಞಾನಿಗಳಿಗೆ ಬ್ರಹ್ಮಲೋಕಕ್ಕೆ ಹೋಗದಂತೆ ಪ್ರತಿಬಂಧಕನೂ ಆಗಿರುವನು.

ತದೇಷ ಶ್ಲೋಕಃ -

ಶತಂ ಚೈಕಾ ಚ ಹೃದಯಸ್ಥ ನಾಡ್ಯಃ
ತಾಸಾಂ ಮೂರ್ಧಾನಮಭಿನಿಃಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ
ವಿಷ್ವಙ್ ಅನ್ಯಾ ಉತ್ಕ್ರಮಣೇ ಭವಂತಿ ॥
ಉತಕ್ರಮಣೇ ಭವಂತಿ ॥

ಶರೀರದಲ್ಲಿ ಮೋಕ್ಷಮಾರ್ಗವಾದ ಒಂದು ನಾಡಿ ಇದೆ ಎಂಬ ವಿಷಯದಲ್ಲಿ ಈ ಶ್ಲೋಕದ ಸಂವಾದವಿದೆ - ಹೃದಯಕಮಲದಲ್ಲಿರುವ ಪರಮಾತ್ಮನು ವಾಸಿಸುವ ನಾಡಿಗಳು ಹೃದಯಲ್ಲಿ ನೂರಾ ಒಂದು ಇವೆ. ಅವುಗಳಲ್ಲಿ ಒಂದಾದ ಸುಷುಮ್ನಾನಾಡಿಯು ಶಿರಸ್ಸಿನ ಕಡೆಗೆ ವ್ಯಾಪಿಸಿಕೊಂಡಿದೆ. ಆ ನಾಡಿಯ ಮೂಲಕ ಊರ್ಧ್ವಲೋಕಕ್ಕೆ ಹೋಗವು ಜ್ಞಾನಿಯು

ಮೋಕ್ಷವನ್ನು ಪಡೆಯುತ್ತಾನೆ. ಇತರ ನಾಡಿಗಳು ಬೇರೆ ಲೋಕಗಳನ್ನು ಹೊಂದಲು ಮಾರ್ಗಗಳಾಗಿವೆ.

'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋ'ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ । ಸ ವಿಜಿಜ್ಞಾಸಿತವ್ಯಃ । ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಃ ತಮಾತ್ಮಾನಮನುವಿದ್ಯ ವಿಜಾನಾತಿ' ಇತಿ ಹ ಪ್ರಜಾಪತಿರುವಾಚ ।

ಯಾವ ಪರಮಾತ್ಮನು ಪಾಪಲೇಪ ರಹಿತನೂ ಅಜರಾಮರನೂ, ಶೋಕರಹಿತನೂ, ಹಸಿವೆ ತೃಷೆಗಳೆಂಬ ಪೀಡೆಗಳಿಗೆ ಒಳಗಾಗದವನೂ, ನಿಯಮೇನ ಫಲಿಸತಕ್ಕ ಇಚ್ಛೆ ಹಾಗೂ ಸಂಕಲ್ಪವುಳ್ಳವನೂ ಆಗಿರುವನೋ ಅಂತಹ ಪರಮಾತ್ಮನನ್ನು ಶ್ರವಣ ಮನನ ಧ್ಯಾನಗಳ ಮೂಲಕ ಕಂಡುಕೊಳ್ಳಬೇಕು. ಯಾರು ಹೀಗೆ ಪರಮಾತ್ಮನನ್ನು ಪರೋಕ್ಷವಾಗಿ ತಿಳಿದುಕೊಳ್ಳುವ ಮೂಲಕ ಸಾಕ್ಷಾತ್ಕರಿಸುತ್ತಾನೋ ಅವನು ಎಲ್ಲ ಲೋಕಗಳನ್ನೂ, ಎಲ್ಲ ಅಭೀಷ್ಟಪದಾರ್ಥಗಳನ್ನೂ ಹೊಂದುತ್ತಾನೆ. ಹೀಗೆ ಚತುರ್ಮುಖಬ್ರಹ್ಮದೇವರು ದೇವತೆಗಳ ಹಾಗೂ ಅಸುರರ ಸಮ್ಮುಖದಲ್ಲಿ ಹೇಳಿದರು.

ತದ್ಧೋಭಯೋ ದೇವಾಸುರಾ ಅನುಬುಬುಧಿರೇ । ತೇ ಹೋಚುಃ 'ಹಂತ ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಇತಿ' ಇಂದ್ರೋ ಹ ವೈ ದೇವಾನಾಮಭಿಪ್ರವವ್ರಾಜ । ವಿರೋಚನೋಽಸುರಾಣಾಮ್ । ತೌ ಹಾಸಂವಿದಾನಾವೇವ ಸಮಿತ್ಪಾಣೀ ಪ್ರಜಾಪತಿಸಕಾಶಮಾಜಗ್ಮತುಃ ।

ಹೀಗೆ ಬ್ರಹ್ಮದೇವರು ಹೇಳಿದುದನ್ನು ದೇವತೆಗಳು ಹಾಗೂ ಅಸುರರು ಕೇಳಿ ತಿಳಿದರು. 'ಯಾವ ಪರಮಾತ್ಮನನ್ನು ಅರಿತುಕೊಂಡರೆ ಎಲ್ಲಾ ಲೋಕಗಳನ್ನು ಪಡೆದು ಎಲ್ಲಾ ಕಾಮನೆಗಳನ್ನು ಕೈಗೂಡಿಸಿಕೊಳ್ಳಬಹುದೋ ಅಂತಹ ಪರಮಾತ್ಮನನ್ನು ಪರೋಕ್ಷವಾಗಿ ತಿಳಿದು ಸಾಕ್ಷಾತ್ಕರಿಸಿಕೊಳ್ಳೋಣ' ಎಂದು ಉತ್ಸುಕತೆಯಿಂದ ದೇವತೆಗಳು, ಇಂದ್ರನಿಗೂ, ಅಸುರರು ವಿರೋಚನನಿಗೂ ಹೇಳಿದರು. ದೇವತೆಗಳಿಗಾಗಿ ದೇವೇಂದ್ರನೂ, ಅಸುರರಾಗಿ ವಿರೋಚನನೂ ಬ್ರಹ್ಮದೇವರಲ್ಲಿ ಉಪದೇಶ ಪಡೆಯಲು ಬಂದರು. ಸಮಿತ್ಪಾಣಿಗಳಾಗಿದ್ದ ಅವರಿಬ್ಬರೂ ಒಂದೇ ಕಾರ್ಯಕ್ಕಾಗಿ ಹೊರಟಿದ್ದರೂ ಪರಸ್ಪರ ಪ್ರೀತಿ ಹಾಗೂ ಮಾತುಕತೆ ಇಲ್ಲದವರಾಗಿಯೇ ಬ್ರಹ್ಮದೇವರನ್ನು ಸಮೀಪಿಸಿದರು.

ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತುಃ। ತೌ ಹ ಪ್ರಜಾಪತಿರುವಾಚ 'ಕಿಮಿಚ್ಛಂತಾವವಾಸ್ತಂ' ಇತಿ। ತೌ ಹೋಚತುಃ 'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ। ಸ ವಿಜಿಜ್ಞಾಸಿತವ್ಯಃ। ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ । ಯಃ ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಭಗವತೋ ವಚೋ ಹರಂತೋ ವೇದಯಂತೇ। ತಮಿಚ್ಛಂತಾವವಾಸ್ತಂ' ಇತಿ ॥

ಆ ಇಂದ್ರ ವಿರೋಚನರಿಬ್ಬರೂ ಮೂವತ್ತೆರಡೂ ವರ್ಷಗಳ ಕಾಲ ಬ್ರಹ್ಮಚರ್ಯ ನಡೆಸುತ್ತ ಬ್ರಹ್ಮದೇವರ ಬಳಿ ವಾಸ ಮಾಡಿದರು. ಬ್ರಹ್ಮದೇವರು ಅವರನ್ನು 'ಯಾವುದರ ಅಪೇಕ್ಷೆಯಿಂದ ನೀವು ನ್ನ ಹತ್ತಿರ ವಾಸವಾಗಿರುವಿರಿ' ಎಂದು ಕೇಳಿದರು. ಅದಕ್ಕುತ್ತರವಾಗಿ ಅವರಿಬ್ಬರೂ 'ಯಾವ ಪರಮಾತ್ಮನು ಪಾಪ, ವೃದ್ಧಾಪ್ಯ, ಮರಣ, ಶೋಕ ಇವುಗಳಿಂದ ದೂರನೂ, ಹಸಿವೆ ಬಾಯಾರಿಕೆಗಳಿಂದ ಬಳಲಿದವನೂ, ನಿಯಮೇನ ಫಲಿಸುವ ಇಚ್ಛೆ ಹಾಗೂ ಸಂಕಲ್ಪಗಳುಳ್ಳವನೂ ಆಗಿರುನೋ, ಅವನ ಶ್ರವಣ ಮನನ ಧ್ಯಾನಗಳ ಮೂಲಕ ಸಾಕ್ಷಾತ್ಕಾರವೆಂಬ ಅನ್ವೇಷಣೆಯನ್ನು ಮಾಡಬೇಕು. ಯಾರು ಹೀಗೆ ಅವನನ್ನು ಸಾಕ್ಷಾತ್ಕರಿಸುವನೋ ಅವನು ಎಲ್ಲಾ ಲೋಕಗಳನ್ನು ಪಡೆದು ತನ್ನ ಎಲ್ಲಾ ಕಾಮನೆಗಳನ್ನು ಕೈಗೂಡಿಸಿಕೊಳ್ಳುವನು, ಎಂಬ ಪೂಜ್ಯರಾದ ತಮ್ಮ ಮಾತನ್ನು ಕೇಳಿ ದೇವತೆಗಳೂ ಅಸುರರೂ ಅಂತಹ ಪರಮಾತ್ಮನನ್ನು ಅರಿತುಕೊಳ್ಳಲು ಅಪೇಕ್ಷಿಸುತ್ತಿರುವರು. ಅವರಿಗೆ ಉಪದೇಶಿಸುವುದಕ್ಕಾಗಿ ತಮ್ಮಿಂದ ತಿಳಿಯಲು ನಾವು ತಮ್ಮ ಹತ್ತಿರ ವಾಸಮಾಡಿಕೊಂಡಿರುವೆವು ಎಂದು ಹೇಳಿದರು.

ತೌ ಹ ಪ್ರಜಾಪತಿರುವಾಚ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ। ಏತದಮೃತಭಯಮೇತತ್ ಬ್ರಹ್ಮ' ಇತಿ। 'ಅಥ ಯೋಽಯಂ ಭಗವೋಽಪ್ಸು ಪರಿಖ್ಯಾಯತೇ ಯಶ್ಚಾಯಮಾದರ್ಶೇ ಕತಮ ಏಷ' ಇತಿ । 'ಏಷ ಉ ಏವೈಷು ಸರ್ವೇಷ್ವಂತೇಷು ಪರಿಖ್ಯಾಯತ' ಇತಿ ಹೋವಾಚ ॥

ಅವರಿಗೆ ಬ್ರಹ್ಮದೇವರು ಸಮ್ಮುಗ್ಧವಾಗಿ ಉಪದೇಶಿಸಿದರು - 'ಕಣ್ಣಿನೊಳಗೆ ಯಾವ ಪುರುಷನು ಕಾಣಿಸುತ್ತಿರುವನೋ ಅವನೇ ಪಾಪಾದಿರಹಿತನಾದ ಈ ಪರಮಾತ್ಮನು. ಅವನು ನಾಶರಹಿತನೂ, ಭಯರಹಿತನೂ, ಆದ ಪರಬ್ರಹ್ಮನಾಗಿರುವನು' ಎಂದು. ಆಗ ಇಂದ್ರ, ವಿರೋಚನರಿಬ್ಬರೂ 'ಪೂಜ್ಯರೇ ! ನೀರಿನಲ್ಲಿ ಹಾಗೂ ಕನ್ನಡಿಯಲ್ಲಿ ಯಾವ ಪುರುಷನು ಗೋಚರಿಸುತ್ತಿರುವನೋ ಅವನ ಯಾರು ?' ಎಂದು ಪ್ರಶ್ನಿಸಲು 'ಕಣ್ಣಿನೊಳಗಿರುವ ಈ

ಪುರುಷನೇ ನೀರು ಕನ್ನಡಿ ಮೊದಲಾದ ಸ್ಥಾನಗಳಲ್ಲೂ ಎಲ್ಲೆಡೆ ಕಾಣಿಸುತ್ತಿರುವನು' ಎಂದು ಬ್ರಹ್ಮದೇವರು ಉತ್ತರಿಸಿದರು.

### ಬೃಹದಾರಣ್ಯಕ ಹಾಗೂ ಛಾಂದ್ಯೋಗಗಳ ಅಭಿಪ್ರಾಯ ಮಹಾವಿಷ್ಣುವೇ

**तत्वप्रदीपः – ''य आत्माऽपहतपाप्मा विजरो विमृत्युर्विशोकोऽविजिघत्सोऽपिपासस्सत्यकामस्सत्यसङ्कल्पः'' इत्यादिभ्यः। न चाऽकाशजीवयोरेते गुणास्सम्भवन्तीत्याह – 'योऽशनायापिपासे' इत्यादिना बृहदारण्यकवाक्येन 'स एषः' इत्यादिना छन्दोगवाक्येन च ।**

'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' 'ಅಲ್ಲಿ ನೆಲೆಸಿರುವ ಆತ್ಮನಾದರೂ ಸಕಲ ಪಾಪಗಳಿಂದ ರಹಿತನಾಗಿದ್ದಾನೆ. ಮುಪ್ಪು, ಮರಣ, ಶೋಕ, ಹಸಿವು, ನೀರಡಿಕೆ ಮೊದಲಾದವುಗಳಿಂದ ರಹಿತನಾಗಿದ್ದಾನೆ. ಸತ್ಯಕಾಮನು ಸತ್ಯಸಂಕಲ್ಪನೂ ಆಗಿದ್ದಾನೆ' ಇತ್ಯಾದಿ ಶ್ರುತಿಯು ಮಹಾವಿಷ್ಣುವಿನ ಅಸಾಧಾರಣಗುಣಗಳನ್ನೇ ಪ್ರತಿಪಾದನೆ ಮಾಡುತ್ತಿದೆ. ದಹರಾಕಾಶಕ್ಕಾಗಲೀ, ಜೀವನಿಗಾಗಲೀ ಈ ಗುಣಗಳಲ್ಲಿ ಯಾವುದೇ ಒಂದು ಇರಲು ಸಾಧ್ಯವೇ ಇಲ್ಲ. ಈ ಅಭಿಪ್ರಾಯದಿಂದ 'ಯೋಽಶನಾಯಾಪಿಪಾಸೇ' ಇತ್ಯಾದಿಯಾಗಿ ಬೃಹದಾರಣ್ಯಕವಾಕ್ಯವನ್ನು ಉದಾಹರಣೆ ನೀಡುತ್ತಿದ್ದಾರೆ. ಮತ್ತು 'ಸ ಏಷಃ ಸರ್ವೇಭ್ಯಃ' ಇತ್ಯಾದಿಯಾಗಿ ಛಾಂದೋಗ್ಯವಾಕ್ಯವನ್ನೂ ಕೂಡ ಉಲ್ಲೇಖಿಸಿದ್ದಾರೆ.

ವಿವರಣೆ - 'ಯ ಆತ್ಮಾ' ಇತ್ಯಾದಿಯಾದ ಛಾಂದೋಗ್ಯ ವಾಕ್ಯದಲ್ಲಿ, ಹಾಗೂ 'ಯೋಽಶನಾಯ' ಇತ್ಯಾದಿ ಬೃಹದಾರಣ್ಯಕ ವಾಕ್ಯದಲ್ಲಿ ಷಡೂರ್ಮಿಗಳನ್ನು ದಾಟದವನು ಜೀವ. ಷಡೂರ್ಮಿಗಳನ್ನು ದಾಟಿದವನು ಪರಮಾತ್ಮ ಎಂದು ಹೇಳಲಾಗಿದೆ ಎಂಬ ಅರ್ಥವನ್ನು ಹೇಳಲಾಯಿತು. ಆದರೆ ಷಡೂರ್ಮಿಗಳನ್ನು ದಾಟಿದವನು ಶ್ರೀಹರಿಯೇ ಆಗಿದ್ದಾನೆ ಎಂದು ಸ್ಪಷ್ಟವಾಗಿ ಎರಡೂ ವಾಕ್ಯಗಳಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಜೀವನೇಕೆ ಈ ಎರಡು ಶ್ರುತಿಗಳಿಂದ ಪ್ರತಿಪಾದ್ಯವಾಗಬಾರದೆಂಬ ಪ್ರಶ್ನೆ ಬರುತ್ತದೆ. ಸಂಸಾರ ಬಂಧನದಲ್ಲಿ ಹಸಿವು, ನೀರಡಿಕೆ ಮೊದಲಾದ ದೋಷಗಳಿದ್ದರೂ ಕೂಡ ಮುಕ್ತಿಯಲ್ಲಿ ಷಡೂರ್ಮಿಗಳನ್ನು ದಾಟಿದವನೇ ಆಗಿದ್ದಾನೆ. ಮತ್ತು ಬೃಹದಾರಣ್ಯಕದ ವಾಕ್ಯದಲ್ಲಿ 'ಅಸ್ಯೇತಿ' ಎಂಬ ಪದವು

ಶ್ರುತವಾಗಿದೆ. ಷಡೂರ್ಮಿಗಳನ್ನು ದಾಟಿದ್ದಾನೆಂಬುದು ಇದರ ಅಭಿಪ್ರಾಯ. ದಾಟಬೇಕಾದರೆ ಮೊದಲು ಆ ದೋಷಗಳನ್ನು ಹೊಂದಿದ್ದಾನೆಂದು ಹೇಳಬೇಕು. ಆದ್ದರಿಂದ ಜೀವನನ್ನೇ ಇಲ್ಲಿ ವಾಕ್ಯಗಳು ಪ್ರತಿಪಾದನೆ ಮಾಡುತ್ತಿವೆ ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ.

ಇದರ ಪರಿಹಾರಕ್ಕಾಗಿ ಭಾಷ್ಯಕಾರರು -' ನಿತ್ಯತೀರ್ಣಾಶನಾಯಾದಿಃ' ಇತ್ಯಾದಿಯಾಗಿ ಪಾದ್ಮಪುರಾಣದ ವಾಕ್ಯವನ್ನು ಪ್ರಮಾಣವನ್ನಾಗಿ ನೀಡುತ್ತಿದ್ದಾರೆ. ನಿತ್ಯವಾಗಿಯೂ ಹಸಿವು, ನೀರಡಿಕೆ ಮೊದಲಾದವುಗಳನ್ನು ದಾಟದವನು ಜೀವನಾಗಲು ಸಾಧ್ಯವಿಲ್ಲ. ಏಕೆಂದರೆ ಸಂಸಾರ ಬಂಧನದಲ್ಲಿ ಎಲ್ಲಾ ಬಗೆಯ ದೋಷಗಳಿಂದ ಕೂಡಿದ್ದರಿಂದ ಶ್ರೀಹರಿಯೊಬ್ಬನೇ 'ಅಪಹತಪಾಪ್ಮಾ' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದ್ಯನಾಗಲು ಸಾಧ್ಯ. ಆದ್ದರಿಂದಲೇ ಪದ್ಮಪುರಾಣದ ಈ ವಾಕ್ಯದಲ್ಲಿ 'ಏಕ ಏವ ಹರಿಃ' ಎಂಬುದಾಗಿ ಹೇಳಿದ್ದಾರೆ. ಮತ್ತು ಜೀವನಲ್ಲಿರುವ ಹಸಿವು ನೀರಡಿಕೆ ಮೊದಲಾದ ಷಡೂರ್ಮಿಗಳನ್ನು ಗೆಲ್ಲುವಿಕೆಯು ಶ್ರೀಹರಿಯ ಅಧೀನವಾಗಿದೆ ಹೊರತು, ಸ್ವಾಭಾವಿಕವಾಗಿ ಇರುವುದಿಲ್ಲ. ಸ್ವಾಭಾವಿಕವಾಗಿ ಇರುವುದು ಶ್ರೀಹರಿಯಲ್ಲಿ ಮಾತ್ರ.

'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ಶ್ರುತಿಯಲ್ಲಿ 'ಅವಿಜಿಘತ್ಸಃ' ಎಂಬ ಪದಕ್ಕೆ ಹಸಿವು ಇಲ್ಲದವನು ಎಂದರ್ಥ. 'ವಿಶೇಷೇಣ ಜಗ್ಧುಂ ಭಕ್ಷಿತುಂ ಇಚ್ಛಾ ಇತಿ ವಿಜಿಘತ್ಸಾ' ಎಂಬ ನಿಷ್ಪತ್ತಿಯಂತೆ ತಿನ್ನುವ ಬಯಕೆಯು 'ವಿಜಿಘತ್ಸಾ' ಎಂದು ಕರೆಸಿಕೊಳ್ಳುತ್ತದೆ. ಆಪ್ತಕಾಮನಾದ ಶ್ರೀಹರಿಗೆ ವಿಜಿಘತ್ಸ ಎಂಬುದು ಇರುವುದಿಲ್ಲ. ಆದ್ದರಿಂದ 'ಅವಿಜಿಘತ್ಸಃ' ಎಂಬುದಾಗಿ ಕರೆಸಿಕೊಳ್ಳುತ್ತಾನೆ.

ಅಪಹತಪಾಪ್ಮತ್ವ ಮೊದಲಾದ ಗುಣಗಳು ಮುಕ್ತಜೀವರಲ್ಲಿ ಇರಬಹುದು. ಆದರೆ ಈ ಗುಣಗಳೆಲ್ಲವೂ ಭಗವಂತನ ಅನುಗ್ರಹದಿಂದಲೇ ಬಂದಿವೆ. ಸ್ವತಂತ್ರವಾಗಿ ಇರುವುದಿಲ್ಲ. ಪರಮಾತ್ಮನಲ್ಲಿರುವ ಅಪಹತಪಾಪ್ಮತ್ವಾದಿ ಗುಣಗಳು ಯಾರ ಅನುಗ್ರಹದಿಂದಲೂ ಬಂದಿರುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿವೆ. ನಿರವಧಿಕವಾಗಿವೆ. ಆದರೆ ಮುಕ್ತಜೀವರಲ್ಲಿರುವ ಅಪಹತಪಾಪ್ಮತ್ವಾದಿ ಗುಣಗಳು ಭಗವಂತನ ಅನುಗ್ರಹದಿಂದ ಬಂದಿವೆ. ಆದ್ದರಿಂದ ಜೀವನ ಗುಣಗಳು ಸಾಪೇಕ್ಷವಾದವು. ಪರಮಾತ್ಮನ ಗುಣಗಳು ನಿರಪೇಕ್ಷವಾದವು. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ, ನಿರಪೇಕ್ಷವೇ ಪ್ರಧಾನವಾಗುತ್ತದೆ. ಅಂಥ ಗುಣಗಳುಳ್ಳ ಪರಮಾತ್ಮನನ್ನೇ ಇಲ್ಲಿ ವಿವಕ್ಷಿಸಬೇಕು.

### ಉಪನಿಷತ್ತಿನಲ್ಲಿ ಶ್ರೀಮದಾಚಾರ್ಯರ ವ್ಯಾಖ್ಯಾನ ನೈಪುಣ್ಯ

**तत्वप्रदीपः – अत्र ब्रह्मपुरं शरीरं दहरो भूताकाश इत्यादि छन्दोगोपनिषद्भाष्ये त्वभाणि निपुणतमं श्रीमच्चरणैः । तस्मादस्माकं न प्रयत्नोऽत्र ।**

'ಬ್ರಹ್ಮಪುರಂ ಶರೀರಂ ದಹರಃ ಭೂತಾಕಾಶಃ' ಇತ್ಯಾದಿಯಾಗಿ ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಬಹಳ ನೈಪುಣ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ ನಾವು ಈ ಶ್ರುತಿಯ ವ್ಯಾಖ್ಯಾನಕ್ಕೆ ಪ್ರಯತ್ನವನ್ನು ಪಟ್ಟಿಲ್ಲ.

### ಆಕಾಶನು ವಿಷ್ಣುವೆನ್ನಲು ನಾಕು ಬಗೆಯ ನಿಷ್ಪತ್ತಿಗಳು

**तत्वप्रदीपः – ''दहरोऽस्मिन् अन्तराकाशः किं तदत्र विद्यते'' इत्यत्राऽकाशशब्देन भूताकाशो विवक्षितः । किं तदत्र विद्यते इत्यस्यायं परिहारः – अस्मिन् भूताकाशे परब्रह्माख्य आकाशो विद्यते । आ समन्तात् काशनादाकाशः, आ समन्तात् कमश्नातीति वा । ''अस्मिन् कामास्समाहिताः'' इति वाक्यशेषादासमन्तात् कामानश्नातीति वा ।**

'ದಹರೋऽಸ್ಮಿನ್ನಂತರಾಕಾಶಃ ಕಿಂ ತದತ್ರ ವಿದ್ಯತೇ' ಎಂಬ ವಾಕ್ಯದಲ್ಲಿ ಆಕಾಶ ಶಬ್ದದಿಂದ ಭೂತಾಕಾಶವು ವಿವಕ್ಷಿತವಾಗಿದೆ. ಅದರಲ್ಲಿ ಯಾರು ನೆಲೆಸಿದ್ದಾರೆ ? ಎಂಬ ಪ್ರಶ್ನೆಗೆ ಪರಿಹಾರವನ್ನು ಹೀಗೆ ತಿಳಿಯಬೇಕು - ಈ ಭೂತಾಕಾಶದಲ್ಲಿ ಪರಬ್ರಹ್ಮವೆಂಬ ಆಕಾಶವಿದೆ. ಇವನನ್ನೇಕೆ ಆಕಾಶ ಎನ್ನುತ್ತಾರೆ ? ಎಂದರೆ -

೧. 'ಆಸಮಂತಾತ್ ಕಾಶನಾದಾಕಾಶಃ' ಎಲ್ಲವನ್ನೂ ಪ್ರಕಾಶಿಸುತ್ತಾನಾದ್ದರಿಂದ ಆಕಾಶ-ನೆನಿಸುತ್ತಾನೆ.

೨. 'ಆಸಮಂತಾತ್ಕಮಶ್ನಾತೀತಿ ವಾ' ಪರಿಪೂರ್ಣವಾದ ಸುಖವನ್ನು ಉಪಭೋಗಿಸುತ್ತಾನೆ.

೩. 'ಅಸ್ಮಿನ್‌ಕಾಮಾಃ ಸಮಾಹಿತಾಃ' ಇವನಲ್ಲಿ ಎಲ್ಲಾ ಕಾಮನೆಗಳು ಒಗ್ಗೂಡಿವೆ.

೪. 'ಆಸಮಂತಾತ್ಕಾಮಾನಶ್ನಾತಿ ವಾ' ಎಲ್ಲಾ ಬಗೆಯ ಕಾಮನೆಗಳನ್ನು ಉಪಭೋಗಿಸುತ್ತಾನೆ.

ಹೀಗೆ ಅನೇಕ ಬಗೆಯ ನಿಷ್ಪತ್ತಿಗಳಿಂದ ಪರಮಾತ್ಮನೊಬ್ಬನೇ ಆಕಾಶನೆಂದು ಕರೆಸಿಕೊಳ್ಳಲು ಯೋಗ್ಯನಾಗಿದ್ದಾನೆ.

### ಆಕಾಶರೂಪಿಯಾದ ಭಗವಂತನು ಗುಣತಃ ವ್ಯಾಪ್ತಿಯುಳ್ಳವನು

**तत्वप्रदीपः – स च यावान् परमात्मा व्याप्तोऽस्ति तावानेव विद्यते गुणतः । पूर्णगुणात्मकत्वात् । अल्पपरिमाणस्य महत्परिमाणत्वं च युज्यते । अचिन्त्यशक्तित्वात् ।**

ಇಂಥ ಆಕಾಶವಾದರೂ ಪರಮಾತ್ಮನು ಎಷ್ಟು ವ್ಯಾಪ್ತನೋ, ಅಷ್ಟೇ ವ್ಯಾಪ್ತಿಯನ್ನು ಹೊಂದಿದೆ. ಪೂರ್ಣಗುಣಾತ್ಮಕನಾದ್ದರಿಂದ ಗುಣತಃ ವ್ಯಾಪ್ತಿಯನ್ನು ವಿವಕ್ಷಿಸಬೇಕು. ಅಲ್ಪಪರಿಮಾಣವುಳ್ಳ ಪರಮಾತ್ಮನಿಗೆ ಮಹತ್‌ಪರಿಮಾಣತ್ವವು ಯುಕ್ತವಾಗುತ್ತದೆ. ಅಚಿಂತ್ಯಶಕ್ತಿಯಿರುವುದರಿಂದ ಅವನಲ್ಲಿ ವಿರೋಧಕ್ಕೆ ಅವಕಾಶವಿಲ್ಲ.

### 'ಯಸ್ಮಿನ್ ವಿರುದ್ಧಗತಯಃ' ಎಂಬ ಭಾಗವತದ ವ್ಯಾಖ್ಯಾನ

**तत्वप्रदीपः – ''यस्मिन् विरुद्धगतयोऽप्यनिशं पतन्ति विद्यादयो विविधशक्तय आनुपूर्व्या'' इति वचनात् । आनुपूर्व्येति श्रुतिप्रमाणादित्यर्थः। ''आनुपूर्वी श्रुतिर्वेद आम्नायश्चेति कथ्यते'' इत्यभिधानात् । अन्यथाऽनिशमित्युक्तिविरोधात् ।**

'ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯಾ' 'ಪಂಚರಾತ್ರಾದಿ ವಿದ್ಯೆಗಳು, ಅಣುತ್ವ-ಮಹತ್ವಾದಿ ಶಕ್ತಿಗಳು ವಿರುದ್ಧವಾದ ಧರ್ಮವನ್ನು ಲೋಕದಲ್ಲಿ ಹೊಂದಿದ್ದರೂ ಶ್ರುತಿಪ್ರಮಾಣವಿರುವುದರಿಂದ ಪರಮಾತ್ಮನಲ್ಲಿ ಯಾವಾಗಲೂ ಒಟ್ಟಿಗೆ ಇರುತ್ತವೆ' ಎಂಬ ಭಾಗವತದ ಚತುರ್ಥಸ್ಕಂಧದ ಮಾತಿನಂತೆ ವಿರುದ್ಧ ಧರ್ಮಗಳನ್ನು ಪರಮಾತ್ಮನಲ್ಲಿ ಒಪ್ಪಬಹುದು. ಈ ಶ್ರುತಿವಾಕ್ಯದಲ್ಲಿರುವ 'ಆನುಪೂರ್ವ್ಯಾ' ಎಂಬ ಪದಕ್ಕೆ ಶ್ರುತಿಪ್ರಮಾಣ ಇರುವುದರಿಂದ ಎಂದರ್ಥ. 'ಆನುಪೂರ್ವೀ ಶ್ರುತಿರ್ವೇದ

ಆಮ್ನಾಯಶ್ಚೇತಿ ಕಥ್ಯತೇ' ಆನುಪೂರ್ವಿ, ಶ್ರುತಿ, ವೇದ, ಆಮ್ನಾಯ ಇವುಗಳೆಲ್ಲವೂ ಪರ್ಯಾಯ ಪದಗಳೆಂದು ಕೋಶವು ಹೇಳುತ್ತಿದೆ. ಇಲ್ಲದಿದ್ದರೆ 'ಅನಿಶಮ್' ಎಂಬ ಮಾತಿನಿಂದ ಆನುಪೂರ್ವ್ಯಾ ಎಂಬ ಮಾತಿಗೆ ವಿರೋಧ ಬರುತ್ತಿತ್ತು.

ವಿವರಣೆ -

ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ
ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯಾ ।
ತದ್ ಬ್ರಹ್ಮವಿಶ್ವಭವಮೇಕಮವಿಶ್ವಮಾದ್ಯಮ್
ಆನಂದ ಮಾತ್ರಮವಿಕಾರಮಹಂ ಪ್ರಪದ್ಯೇ ॥

ಯೋಗ, ರೂಢಿ ಮುಂತಾದ ನಾನಾ ಪದಶಕ್ತಿಗಳೂ ಲೋಕದಲ್ಲಿ ಪರಸ್ಪರ ವಿರುದ್ಧವಾದಂತಿರುವ ವೇದ ಪಂಚರಾತ್ರಾದಿ ಸಮಸ್ತಶಬ್ದಗಳೂ ವಿಚಿತ್ರ ಅಚಿಂತ್ಯಶಕ್ತಿಗಳುಳ್ಳ ವಿರುದ್ಧವಾದ ಅಣುತ್ವ ಮಹತ್ವಾದಿ ಸಕಲಗುಣಗಳೂ ನಿನ್ನಲ್ಲಿ ದೇಶಕಾಲಾದಿವ್ಯವಸ್ಥೆಗಳನ್ನು ಅವಲಂಬಿಸದೇ ಸದಾ ಕೂಡುತ್ತವೆ. ಆದರಿಂದ ನೀನು ಗುಣಪೂರ್ಣ, ಪ್ರಪಂಚಕ್ಕೆ ಆದಿಕಾರಣ, ಸರ್ವೋತ್ತಮ, ಸರ್ವವಿಲಕ್ಷಣ, ಆನಂದಸ್ವರೂಪ ಮತ್ತು ವಿಕಾರರಹಿತನೆಂದು ವೇದಗಳು ಕೊಂಡಾಡುತ್ತವೆ. ಇಂಥ ನಿನ್ನನ್ನು ನಾನು ಮೊರೆ ಹೋಗುತ್ತೇನೆ.

ಇಲ್ಲಿ 'ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯಾ' ಎಂಬಲ್ಲಿ ಆನುಪೂರ್ವ್ಯಾತ್' ಎಂದು ಪಾಠವಿಟ್ಟುಕೊಂಡು 'ಕ್ರಮವಾಗಿ' ಎಂದು ಬೇರೆ ವ್ಯಾಖ್ಯಾನಕಾರರು ಅರ್ಥ ಹೇಳುತ್ತಾರೆ.

ಪರಮಾತ್ಮನಲ್ಲಿ ವಿರುದ್ಧ ಗುಣಗಳು ನಿತ್ಯವಾಗಿದ್ದರೂ ಉಪಾಸಕರ ತಾರತಮ್ಯದಿಂದ ಅವು ಕ್ರಮವಾಗಿ ಆವಿರ್ಭೂತವಾಗುತ್ತವೆ ಎಂದು ಪರಕೀಯರ ವ್ಯಾಖ್ಯಾನ ಹೇಳುತ್ತದೆ. ಮಾಘಕಾವ್ಯದಲ್ಲಿ ನಾರದರು ಶ್ರೀಕೃಷ್ಣನ ಬಳಿಗೆ ಆಕಾಶದಿಂದ ಕೆಳಗಿಳಿದು ಬರುವಾಗ ಮೊದಲಿಗೆ ದೂರದಲ್ಲಿ ಕೇವಲ ಬೆಳಕಿನ ಗೋಲಕದಂತೆ, ಬಳಿಕ ಕೇವಲ ಏನೋ ಒಂದು ಶರೀರದಂತೆ, ಬಳಿಕ ಹತ್ತಿರದಲ್ಲಿ ಸ್ಪಷ್ಟ ಅವಯವಯುಕ್ತರಾಗಿ ಪುರುಷರಾಗಿರುವಂತೆ ಕೃಷ್ಣನಿಗೆ ಕಂಡು ಬಂದರು ಎಂದು ಕವಿ ವರ್ಣಿಸುವುದನ್ನು ಉದಾಹರಿಸಿ ಅದರಂತೆ ಜ್ಞಾನಿಗೆ ಪರಮಾತ್ಮ ಕೇವಲ ಆನಂದ ಮಾತ್ರನಾಗಿ, ಭಕ್ತನಿಗೆ ಕಾಣುತ್ತಾನೆ. ಭಕ್ತಿ ಹೆಚ್ಚಿದಂತೆಲ್ಲ ಹೆಚ್ಚು ಹೆಚ್ಚು ಗುಣಗಳುಳ್ಳವನಾಗಿ ಕಾಣುತ್ತಾನೆ. ವಿದ್ಯೆ-ಅವಿದ್ಯೆ, ಸೃಷ್ಟಿ-ಸಂಹಾರ, ಜನ್ಮ-ಅಜನ್ಮ, ನಿಷ್ಕ್ರಿಯತ್ವ-ಲೀಲಾಕಾರಿತ್ವ,

ಆತ್ಮಾರಾಮತ್ವ-ಭಕ್ತವಾತ್ಸಲ್ಯಗಳು ಪರಸ್ಪರ ವಿರುದ್ಧವಾಗಿದ್ದರೂ ಅವು ನಿತ್ಯ ಜೊತೆಗಿರುತ್ತವೆ ಎಂದು ವಿವರಣೆ ನೀಡುತ್ತದೆ. ಇಲ್ಲಿ ದೃಷ್ಟಾಂತವೆ ಸರಿ ಇಲ್ಲ. ನಾರದರಲ್ಲಿ ಕೃಷ್ಣನಿಗೆ ಬೆಳಕಿನ, ಶರೀರಾಕೃತಿಯ ಮತ್ತು ಅವಯವಗಳ ದರ್ಶನಗಳು ಕ್ರಮವಾಗಿ ಆದರೂ ಆ ಬೆಳಕು ಮುಂತಾದವುಗಳಿಗೆ ವಿರೋಧವಿಲ್ಲ. ಸಗುಣತ್ವನಿರ್ಗುಣತ್ವಗಳಿಗೆ ವಿರೋಧವಿದೆ. 'ನಿರ್ಗುಣತ್ವ ಸತ್ಯವಾದರೂ ಸಗುಣತ್ವ ಕಾಲ್ಪನಿಕ. ಎರಡೂ ನಿತ್ಯವಾಗಿ ಪರಮಾತ್ಮನಲ್ಲಿ ಇದೆ ಕ್ರಮವಾಗಿ ಆವಿರ್ಭೂತವಾಗುತ್ತದೆ' ಎನ್ನುವುದು ಪ್ರಮಿತವಾಗಿಲ್ಲ. ಮತ್ತು 'ವಿದ್ಯಾದಿ'ಗಳು ಎಂಬ ಶಬ್ದದಿಂದ ಹೇಳಿದ ವಿರುದ್ಧಗುಣಗಳಲ್ಲಿ ಒಂದು ವ್ಯಾವಹಾರಿಕ, ಇನ್ನೊಂದು ಪಾರಮಾರ್ಥಿಕವೆನ್ನುವ ಪಕ್ಷದಲ್ಲಿ ಅವುಗಳಿಗೆ ವಿರೋಧವಿಲ್ಲ. ಎರಡೂ ವ್ಯಾವಹಾರಿಕವೆನ್ನುವ ಪಕ್ಷದಲ್ಲಿ 'ವಿದ್ಯೆಯೊಂದಿಗೆ ಅವಿದ್ಯೆ (ಮೋಹ) ಈಶ್ವರನಿಗೆ ಇದೆ ಎರಡೂ ಕ್ರಮವಾಗಿ ಅಭಿವ್ಯಕ್ತವಾಗುತ್ತದೆ' ಎನ್ನುವಂತಿಲ್ಲ. ಅವನ ಮಾಯೆ ಪರವ್ಯಾಮೋಹಕರಿ ಹೊರತು ಸ್ವವ್ಯಾಮೋಹಕರಿಯಲ್ಲ ತಾನೇ ?

ಆದರಿಂದ 'ಆನುಪೂರ್ವ್ಯ'ವೆಂದರೆ ಕ್ರಮವೆಂದು ವ್ಯಾಖ್ಯಾನಿಸಬಾರದು. 'ಆನುಪೂರ್ವೀ' ಎಂದರೆ ವೇದ. ಆನುಪೂರ್ವಿಗಳ ಸಮೂಹವೇ 'ಆನುಪೂರ್ವ್ಯ' ಅವುಗಳು ಭಗವಂತನಲ್ಲಿ ವಿರುದ್ಧವಾದ ಅಣುತ್ವಮಹತ್ವಾದಿಗುಣಗಳನ್ನು ಮಾತ್ರ ಹೇಳುತ್ತವೆ. ದೋಷಗಳನ್ನಲ್ಲ ಎನ್ನಬೇಕು. ಹೀಗಾಗಿ ಅಚಿಂತ್ಯಶಕ್ತಿಯಿಂದ ಅವುಗಳನ್ನು ಕೂಡಿಸಬೇಕೆಂದು ಭಾಗವತದ ತಾತ್ಪರ್ಯವನ್ನು ಶ್ರೀಮದಾಚಾರ್ಯರು ತಿಳಿಸುತ್ತಾ 'ಆನುಪೂರ್ವೀ' ಎಂದರೆ ವೇದ ಎನ್ನುವಲ್ಲಿ ಪ್ರಮಾಣವನ್ನು ತೋರಿಸುತ್ತಾರೆ.

ಆನುಪೂರ್ವೀ ಶ್ರುತಿಶ್ಚೈವ ತ್ರಯೀ ಚಾಮ್ನಾಯ ಉಚ್ಯತೇ ॥ ಇತ್ಯಭಿಧಾನಮ್ ।

ಆನುಪೂರ್ವಿ, ಶ್ರುತಿ, ತ್ರಯೀ ಎಂದು ವೇದಕ್ಕೆ ಬೇರೆ ಬೇರೆ ಹೆಸರುಗಳೆಂದು ಅಭಿಧಾನಗ್ರಂಥದಲ್ಲಿ ಹೇಳಿದೆ.

ಆದರಿಂದ 'ಆನುಪೂರ್ವ್ಯ' ಎಂದರೆ ವಿರುದ್ಧವಾದ 'ಅಸ್ಥೂಲಮನಣು' ಇತ್ಯಾದಿ ವೇದವಚನದಿಂದ ಸಹಿತವಾದ 'ವಿದ್ಯಾದಿ'ಗಳು. ಅಂದರೆ ವಿರುದ್ಧವಾದ ಪಂಚರಾತ್ರಾದಿ ಪೌರುಷೇಯಗ್ರಂಥವಚನಗಳು ಮತ್ತು ವಿರುದ್ಧವಾದ ಅಣುತ್ವ ಮಹತ್ವಾದಿ ವಿರುದ್ಧಗುಣಗಳು ಎಂದರ್ಥ.

## ಬ್ರಹ್ಮಾಕಾಶವೇ ವಿವಕ್ಷಿತ

**तत्वप्रदीपः – 'एष म आत्माऽन्तर्हृदयेऽणीयान् व्रीहेर्वा एष म आत्माऽन्तर्हृदये ज्यायान् पृथिव्याः'' इति हृदयस्थस्यैवाणुत्वमहत्त्वोक्तेश्चेत्यादि, 'दहरोऽस्मिन् अन्तराकाशः' इति च पूर्वोक्ताकाशस्य दहरत्वमुक्तम् । उत्तरस्य 'यावान्वाऽयमाकाशः' इत्यनन्तपरिमाणत्वम् । अतो ब्रह्माकाश एवोत्तरः ।**

'ಏಷ ಮ ಆತ್ಮಾಽಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ' ನನ್ನ ಹೃದಯದಲ್ಲಿ ಆತ್ಮನು ವ್ರೀಹಿಗಿಂತಲೂ ಅಣುವಾಗಿದ್ದಾನೆ. ನನ್ನ ಹೃದಯದಲ್ಲಿ ಆತ್ಮನು ಪೃಥಿವಿಗಿಂತ ಮಹತ್ತಾಗಿದ್ದಾನೆ ಎಂಬುದಾಗಿ ಹೃದಯದಲ್ಲಿರುವ ಆತ್ಮನಿಗೆ ಅಣುತ್ವ-ಮಹತ್ವವನ್ನು ಶ್ರುತಿಯು ಹೇಳುತ್ತಿದೆ. ಮತ್ತು 'ದಹರೋಽಸ್ಮಿನ್ನಂತರಾಕಾಶೇ' ಈ ಹೃದಯದಲ್ಲಿ ಸೂಕ್ಷ್ಮವಾದ ಆಕಾಶವಿದೆ ಎಂಬುದಾಗಿ ಪೂರ್ವೋಕ್ತ ಆಕಾಶದಲ್ಲಿ ದಹರತ್ವವನ್ನು ಶ್ರುತಿಯು ಹೇಳುತ್ತಿದೆ. ಮುಂದಿನ ವಾಕ್ಯದಲ್ಲಿ 'ಯಾವಾನ್ವಾಽಯಮಾಕಾಶಃ' ಎಂಬುದಾಗಿ ಅನಂತ ಪರಿಮಾಣತ್ವವನ್ನು ಆಕಾಶದಲ್ಲಿ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಇಲ್ಲಿ ಆಕಾಶವೆಂದರೆ ಬ್ರಹ್ಮಾಕಾಶವೆಂದು ವಿವಕ್ಷಿಸಬೇಕು. ಈ ಬ್ರಹ್ಮಾಕಾಶವೇ ಮುಂದಿನ ವಾಕ್ಯದಿಂದ ಹೇಳಲ್ಪಟ್ಟಿದೆ.

## ದಹರಾಕಾಶ ಎಂದರೆ ಬ್ರಹ್ಮ

**तत्वप्रदीपः – पूर्वोक्तस्याभूताकाशत्वे ''तस्मिन् यदन्तस्तदन्वेष्टव्यं तद्वाव विजिज्ञासितव्यम्'' ''तत्रापि दहं गगनं विशोकस्तस्मिन् यदन्तस्तदुपासितव्यम्'' ''सहस्रशीर्षं देवम्'' इत्यादि कथं युज्येत । नहि भगवदन्तःस्थितमेवान्यत् किञ्चिद्विजिज्ञास्यम् । तद्वावेत्यवधारणाच्चेत्यादि च सुविस्तृतम् ।।**

ಹಿಂದಿನ ವಾಕ್ಯದಲ್ಲಿ ಪ್ರತಿಪಾದ್ಯವಾದ ದಹರಾಕಾಶವೂ ಕೂಡ ಬ್ರಹ್ಮನೇ ಆಗಿದ್ದಾನೆ. ಒಂದು ವೇಳೆ ಹಿಂದಿನ ವಾಕ್ಯದಲ್ಲಿ ಭೂತಾಕಾಶವು ಪ್ರತಿಪಾದ್ಯವಾಗುವುದಾದರೆ 'ತಸ್ಮಿನ್ ಯದಂತಃ ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' 'ಒಳಗಿರುವುದನ್ನು ಅನ್ವೇಷಣೆ ಮಾಡಬೇಕು.

ಅದನ್ನೇ ಜಿಜ್ಞಾಸೆ ಮಾಡಬೇಕು' 'ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಃ ತದುಪಾಸಿತವ್ಯಮ್' 'ಅಲ್ಲೊಂದು ಪುಟ್ಟ ಆಕಾಶವಿದೆ. ಅದರಲ್ಲಿ ಯಾರು ನೆಲೆಸಿದ್ದಾನೋ, ಅವನನ್ನು ಉಪಾಸನೆ ಮಾಡಬೇಕು. 'ಸಹಸ್ರಶೀರ್ಷಂ ದೇವಮ್' 'ಅವನು ಸಾವಿರಾರು ಅವಯವಗಳುಳ್ಳವನು' ಇತ್ಯಾದಿಯಾಗಿ ಮುಂದಿನ ವಾಕ್ಯದಲ್ಲಿ ಹೇಳಿದ ವಿಚಾರಗಳೆಲ್ಲವೂ ಹೇಗೆ ಕೂಡುತ್ತವೆ ? ಹೃದಯದಲ್ಲಿರುವ ಭಗವಂತನ ಒಳಗಡೆ ಇರುವ ಬೇರೆ ಯಾವುದನ್ನು ಜಿಜ್ಞಾಸೆ ಮಾಡಬೇಕೆಂಬುದು ಯುಕ್ತವಲ್ಲವಷ್ಟೇ ? ಏಕೆಂದರೆ 'ತದ್ವಾವ' ಎಂಬುದಾಗಿ ಆ ಭಗವಂತನನ್ನೇ ಜಿಜ್ಞಾಸೆ ಮಾಡಬೇಕೆಂದು ಶ್ರುತಿಯು ಅವಧಾರಣಪುರಸ್ಸರವಾಗಿ ಹೇಳುತ್ತಿದೆ. ಇತ್ಯಾದಿಯಾದ ವಿವರಣೆಯನ್ನು ತಿಳಿಯಬೇಕು.

ವಿವರಣೆ - ಅಧಿಕರಣದ ಪೂರ್ವಪಕ್ಷವನ್ನು ಹೀಗೆ ಮಾಡಲಾಗಿತ್ತು - 'ಯಾವಾನ್ವಾऽಯಮಾಕಾಶಃ ತಾವಾನೇವ ಏಷಃ ಅಂತರ್ಹೃದಯೇ ಆಕಾಶಃ' ಹೊರಗೆ ಆಕಾಶವು ಎಷ್ಟು ವ್ಯಾಪ್ತವಾಗಿದೆಯೋ, ಅದೇ ಆಕಾಶವು ಹೃದಯದಲ್ಲೂ ಇದೆ ಎಂಬುದಾಗಿ ಉಪನಿಷತ್ತು ಹೇಳುತ್ತಿದೆ. ಇಲ್ಲಿರುವ ಆಕಾಶ ಎಂದರೇನು? ಎಂಬುದೇ ಬರುವ ಪ್ರಶ್ನೆ.

ಆಕಾಶ ಶಬ್ದಕ್ಕೆ ವಿಷ್ಣು ಎಂದು ಉತ್ತರಿಸಲಾಗದು. ಏಕೆಂದರೆ 'ಕಿಂ ತದತ್ರ ವಿದ್ಯತೇ ?' ಎಂಬುದಾಗಿ ಶಿಷ್ಯನು ಹೃದಯ ಕಮಲದಲ್ಲಿರುವ ಪುಟ್ಟ ಆಕಾಶದಲ್ಲಿ ಏನಿದೆ ? ಎಂಬುದಾಗಿ ಪ್ರಶ್ನಿಸುತ್ತಿದ್ದಾನೆ. ಆಕಾಶ ಶಬ್ದಕ್ಕೆ ಒಂದು ವೇಳೆ ವಿಷ್ಣುವೆಂದು ವಿವಕ್ಷಿಸುವುದಾದರೆ, ಬ್ರಹ್ಮ ವಿದ್ಯತೇ, ಅಥವಾ ವಿಷ್ಣು ವಿದ್ಯತೇ ಎಂಬುದಾಗಿ ಉತ್ತರವನ್ನು ಹೇಳಬೇಕಾಗಿತ್ತು. ಆದರೆ ಹಾಗೇ ಉತ್ತರಿಸುತ್ತಿಲ್ಲ. ಒಳಗಿನ ಆಕಾಶವು ಹೊರಗಿನ ಆಕಾಶದಷ್ಟೇ ವಿಶಾಲವಾಗಿದೆ ಎಂಬುದಾಗಿ ಉಪನಿಷತ್ತು ಉತ್ತರಿಸುತ್ತಿದೆ. ಆದ್ದರಿಂದ ಭೂತಾಕಾಶವೆಂದೇ ಆಕಾಶಶಬ್ದದ ಅರ್ಥವನ್ನು ವಿವಕ್ಷಿಸಬೇಕು. ಆಗ ಈ ಗೊಂದಲಕ್ಕೆ ಅವಕಾಶವಿಲ್ಲ. ಏಕೆಂದರೆ ಆಕಾಶದಲ್ಲಿ ಸ್ವರ್ಗಾದಿ ಲೋಕಗಳು, ಸೂರ್ಯ-ಚಂದ್ರಾದಿಗಳು ನೆಲೆಸಿದ್ದಾರೆಂದು ಮುಂದಿನ ವಾಕ್ಯದಲ್ಲಿ ಹೇಳಿದೆ. ಹೃದಯದಲ್ಲಿರುವ ಪುಟ್ಟ ಆಕಾಶದಲ್ಲಿ ಇರುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಹುಟ್ಟಿದರೆ, 'ಯಾವಾನ್ವಾऽಯಮಾಕಾಶಃ' ಎಂಬುದಾಗಿ ಆಕಾಶದ ಮಹಿಮೆಯನ್ನು ಉಪನಿಷತ್ತು ಬಣ್ಣಿಸುತ್ತಿದೆ. ಆದ್ದರಿಂದ ಹೃದಯ ಕಮಲದಲ್ಲಿ ನೆಲೆಸಿದ್ದು ಭೂತಾಕಾಶವೇ ಹೊರತು, ವಿಷ್ಣುವಲ್ಲ. ಇಂಥ ಭೂತಾಕಾಶವನ್ನು ಜಿಜ್ಞಾಸೆ ಮಾಡಬೇಕು, ಬ್ರಹ್ಮಜಿಜ್ಞಾಸೆ ಮಾಡಬಾರದು ಎಂದು ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲಾಗಿದೆ.

ಪೂರ್ವಪಕ್ಷದ ಪರಿಹಾರವನ್ನು ಹೀಗೆ ತಿಳಿಯಬೇಕು - ಹೃದಯಕಮಲದಲ್ಲಿ ಭೂತಾಕಾಶವಿದೆ. ಅದರಲ್ಲಿ ವಿಷ್ಣು ನೆಲೆಸಿದ್ದಾನೆಂದು ತಿಳಿಯಬೇಕು. ಮತ್ತು 'ತಸ್ಮಿನ್ ಯದಂತಃ ತದುಪಾಸಿತವ್ಯಮ್' ಎಂಬುದಾಗಿ ಆಕಾಶತತ್ವದ ಉಪಾಸನೆಯನ್ನು ಶ್ರುತಿಯು ಹೇಳುತ್ತಲೇ ಇಲ್ಲ. ಏಕೆಂದರೆ ಹೃದಯಕಮಲದಲ್ಲಿರುವ ದಹರಾಕಾಶದಲ್ಲಿ ನೆಲೆಸಿರುವ ಆತ್ಮನನ್ನು ಉಪನಿಷತ್ತು ಹೀಗೆ ವರ್ಣನೆ ಮಾಡಿದೆ- 'ಯ ಆತ್ಮಾಽಪಹತಪಾಪ್ಮಾ ವಿಜರಃ ವಿಮೃತ್ಯುಃ' ಇತ್ಯಾದಿಯಾಗಿ ಅಪಹತಪಾಪ್ಮತ್ವಾದಿಗುಣಗಳು ವಿಷ್ಣುವಿನದ್ದೇ ಆಗಿರುವುದರಿಂದ ಹೃದಯಾಕಾಶದಲ್ಲಿ ನೆಲೆಸಿರುವವನು ವಿಷ್ಣುವೇ ಆಗುತ್ತಾನೆ.

'ಕಿಂ ತದತ್ರ ವಿದ್ಯತೇ?' ಎಂಬ ಪ್ರಶ್ನೆಗೆ ಹೃದಯಕಮಲದಲ್ಲಿ ನೆಲೆಸಿರುವ ಬ್ರಹ್ಮನು ಯಾವ ಗುಣಗಳುಳ್ಳವನು ಎಂದೇ ಅಭಿಪ್ರಾಯ. ಹೊರತು, ಆಕಾಶದಲ್ಲಿ ಏನಿದೆ ? ಎಂದು ಅಭಿಪ್ರಾಯವಲ್ಲ. ಹೃದಯಕಮಲವನ್ನು ಬ್ರಹ್ಮಪುರ ಎಂದು ಹೇಳಿದ್ದರಿಂದಲೇ ಆ ಕಮಲದಲ್ಲಿ ಬ್ರಹ್ಮನಿದ್ದಾನೆಂಬುದನ್ನು ಶಿಷ್ಯನಾದವನು ತಿಳಿದು ಬಿಡುತ್ತಾನೆ. ಆದ್ದರಿಂದ 'ಅಲ್ಲಿ ನೆಲೆಸಿರುವ ವಿಷ್ಣು ಎಂಥವನು ?' ಎಂದು ಪ್ರಶ್ನಿಸಿದಾಗ 'ಯಾವಾನ್ವಾಽಯಮಾಕಾಶಃ' ಇತ್ಯಾದಿ ವಾಕ್ಯವು ಉತ್ತರವನ್ನು ನೀಡುತ್ತಿದೆ. ವಿಸ್ತಾರವಾದ ಈ ಆಕಾಶವೆಲ್ಲವೂ ಹೃದಯಕಮಲದಲ್ಲಿರುವ ವಿಷ್ಣುವಿನಲ್ಲಿ ನೆಲೆಸಿದೆ. ಸ್ವರ್ಗಲೋಕ, ಪೃಥಿವೀಲೋಕಗಳೂ ಕೂಡ ಅವನಲ್ಲೇ ನೆಲೆಸಿದೆ. ಇದೇ ಅವನ ಮಹಾಮಹಿಮೆ ಎಂಬುದು ಶ್ರುತಿಯ ಅಭಿಪ್ರಾಯ. ಹೀಗೆ ಉತ್ತರವನ್ನು ವಿವಕ್ಷಿಸಿದಾಗ 'ಕಿಂ' ಎಂಬ ಪ್ರಥಮಾಂತ ವಿಭಕ್ತಿಗೆ 'ಅಸ್ಮಿನ್' ಎಂಬುದಾಗಿ ಸಪ್ತಮ್ಯಂತವಾಗಿ ಉತ್ತರವನ್ನು ವಿವಕ್ಷಿಸಬೇಕು. ಅಥವಾ 'ಕಿಂ ತದತ್ರ ವಿದ್ಯತೇ ?' 'ಹೃದಯಾಕಾಶದಲ್ಲಿ ಏನಿದೆ ?' ಎಂಬುದಾಗಿ 'ಕಿಂ' ಶಬ್ದವನ್ನು ಪ್ರಥಮಾಂತವಾಗಿಯೂ ವಿವಕ್ಷಿಸಬಹುದು. ಆಗ 'ಅಯಮಾಕಾಶಃ' ಎಂಬುದಾಗಿ ಪ್ರಥಮಾಂತವಾಗಿ ಉತ್ತರವಾಕ್ಯವು ಯುಕ್ತವಾಗುತ್ತದೆ. ಹೃದಯದ ಹೊರಗೆ ಮಹಾವಿಷ್ಣು ಎಷ್ಟು ವ್ಯಾಪ್ತನಾಗಿದ್ದಾನೋ, ಒಳಗೂ ಕೂಡ ಹಾಗೆಯೇ ವ್ಯಾಪಿಸಿದ್ದಾನೆ. ಅಥವಾ ಹೃದಯದ ಹೊರಗೆ ಹೇಗೆ ಗುಣತಃ ವ್ಯಾಪ್ತನಾಗಿದ್ದಾನೋ, ಹೃದಯದ ಒಳಗೂ ಹಾಗೇ ವ್ಯಾಪ್ತನಾಗಿದ್ದಾನೆಂಬ ಅರ್ಥವನ್ನು ವಿವಕ್ಷಿಸಬೇಕು. ಅಷ್ಟೇ ಅಲ್ಲದೇ ದ್ಯಾವಾಪೃಥಿವ್ಯಾದಿಗಳೂ ಕೂಡ ಆಶ್ರಯವನ್ನು ಹೊಂದಿವೆ. ಆದ್ದರಿಂದ ಪ್ರಶ್ನೆಗೆ ಉತ್ತರವು ಯುಕ್ತವಾಗುವುದರಿಂದ ಭೂತಾಕಾಶವನ್ನು ಸರ್ವಥಾ ವಿವಕ್ಷಿಸಬಾರದು. ಮಹಾವಿಷ್ಣುವನ್ನೇ ದಹರಾಕಾಶದಲ್ಲಿ ನೆಲೆಸಿರುವವನೆಂದು ವಿವಕ್ಷಿಸಬೇಕು.

ವಿಶೇಷವಿಚಾರ - (ಸಂಗ್ರಹ) ಪಂಡಿತಾಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ ವಾಕ್ಯಗಳನ್ನು ಇಲ್ಲಿಯ ತನಕ ಅನುವಾದ ಮಾಡಿದರು. ಇತ್ಯಾದಿ ಚ ಸುವಿಸ್ಪಷ್ಟಮ್' ಇತ್ಯಾದಿಯಾಗಿ ಛಾಂದೋಗ್ಯಭಾಷ್ಯದಲ್ಲಿ ಶ್ರೀಮದಾಚಾರ್ಯರು

ವಿಸ್ತಾರವಾಗಿ ಹೇಳಿರುತ್ತಾರೆಂದು ತಿಳಿಸಿರುವರು. ಆದ್ದರಿಂದ ಈ ಪ್ರಕರಣದಲ್ಲಿರುವ ಛಾಂದೋಗ್ಯಭಾಷ್ಯದ ಪ್ರಕರಣ ಹೀಗಿದೆ -

ಉಪನಿಷತ್ತು - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ । ದಹರೋऽಸ್ಮಿನ್ನಂತರಾಕಾಶಃ । ತಸ್ಮಿನ್ ಯದಂತಃ ತದನ್ವೇಷ್ಟವ್ಯಮ್ । ತದ್ವಾವ ವಿಜಿಜ್ಞಾಸಿತವ್ಯಂ' ಇತಿ।

ಗುರುವು ಶಿಷ್ಯರಿಗೆ ಹೀಗೆ ಹೇಳಬೇಕು - ಈ ಶರೀರದಲ್ಲಿ ವ್ಯಾಪಿಸಿರುವ ಪೂರ್ಣಗುಣನೂ, ಪೂರ್ಣಕಾಮನೂ ಆಗಿರುವ ಪರಮಾತ್ಮನಲ್ಲಿ ಹೃದಯಕಮಲರೂಪವಾದ ಸಣ್ಣ ಮನೆಯು ಆಶ್ರಿತವಾಗಿದೆ. ಈ ಮನೆಯಲ್ಲಿ ಸಣ್ಣ ಆಕಾಶವಿದೆ. ಅದರ ಒಳಗೆ ಏನು ಇದೆಯೋ ಅದನ್ನೇ ಹುಡುಕಬೇಕು ಅಂದರೆ ಮನನ ಮಾಡಬೇಕು ಎಂದು.

ಭಾಷ್ಯ - 'ಯದಿದಮಸ್ಮಿನ್ ಬ್ರಹ್ಮಪುರ' ಇತಿ ಬ್ರಹ್ಮಪುರಶಬ್ದೇನ ಬ್ರಹ್ಮಾಖ್ಯಂ ಪುರಂ, ಪೂರ್ಣತ್ವಾತ್ ಪುರಮಿತಿ ಪರಂ ಬ್ರಹ್ಮ, ಬ್ರಹ್ಮಣಃ ಪುರಮಿತಿ ಶರೀರಂ ಚೋಭಯಂ ವಿವಕ್ಷಿತಮ್ ।

'ಪ್ರಾಪ್ತೋऽವಧ್ಯಂ ಬ್ರಹ್ಮಪುರಂ ರಾಜೇವ ನಿವಸಾಮ್ಯಹಮ್ ।'
'ಅಸ್ಮಿಂಶ್ಚೇದ್ಯದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಮ್ ॥'

'ಯದ್ಯೇನಂ ಜರಾऽವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋऽತಿ ಶಿಷ್ಯತೇ ಇತಿ । ಸ ಬ್ರೂಯಾತ್ ನಾಸ್ಯ ಜರಯೈತತ್ ಜೀರ್ಯತಿ ನ ವಧೇನಾಸ್ಯ ಹನ್ಯತೇ । ಏತತ್ ಸತ್ಯಂ ಬ್ರಹ್ಮಪುರಮ್ । ಅಸ್ಮಿನ್ ಕಾಮಾಃ ಸಮಾಹಿತಾಃ । ಏಷ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುಃ' ಇತಿ ವಾಕ್ಯಶೇಷಾತ್ ಭಗವದ್ವಚನನಾಚ್ಚ ಬ್ರಹ್ಮಪುರ ಶಬ್ದೇನ ಪರಂ ಬ್ರಹ್ಮೋಚ್ಯತೇ ಇತ್ಯವಸೀಯತೇ । 'ಯತ್ ಪುಂಡರೀಕಂ ಪುರಮಧ್ಯಸಂಸ್ಥಂ' 'ಯದಿದಂ ಶರೀರಂ ತದೇತದಾದ್ಯಂ ಬ್ರಹ್ಮ ಸದನಂ' ಇತ್ಯಾದೇಃ ಶರೀರಂ ಚ॥

ಯದಿದಮಸ್ಮಿನ್ ಬ್ರಹ್ಮಪುರೇ ಎಂಬ ಮಂತ್ರದಲ್ಲಿರುವ ಬ್ರಹ್ಮಪುರ ಶಬ್ದದಿಂದ ಬ್ರಹ್ಮ ಎಂಬ ಪುರ ಅಂದರೆ ಪೂರ್ಣವಾದ ವಸ್ತು ಮತ್ತು ಪರಬ್ರಹ್ಮನು ವಾಸಮಾಡುವ ಈ ಶರೀರ ಎಂಬ ಎರಡು ಅರ್ಥಗಳೂ ಅಭಿಪ್ರೇತವಾಗಿವೆ.

'ಸಂಹರಿಸಲು ಅಶಕ್ಯವಾದ ಬ್ರಹ್ಮಪುರವನ್ನು ಹೊಂದಿ ನಾನು ರಾಜನಂತೆ ವಾಸಿಸುತ್ತಿರುವೆನು. ಈ ಬ್ರಹ್ಮಪುರದಲ್ಲಿ ಎಲ್ಲವೂ ಆಶ್ರಯಹೊಂದಿದೆ' ಎಂದು ಮುಂತಾದ

ಪರಮಾತ್ಮನ ವಚನಗಳಿಂದಲೂ, 'ಶರೀರವನ್ನು ಯಾವಾಗ ಮುದಿತನವು ವ್ಯಾಪಿಸಿ ನಾಶಗೊಳಿಸುವುದೋ ಆಗ ಏನು ತಾನೇ ಉಳಿಯುತ್ತದೆ? ಏನೂ ಉಳಿಯದು, ಎಂದು ಶಿಷ್ಯನು ಕೇಳಿದರೆ, ಗುರುಗಳು 'ಈ ಶರೀರದ ಮುಪ್ಪಿನಿಂದ ಮುದಿತನವನ್ನು ಹೊಂದದವನು. ಈ ಶರೀರದ ನಾಶದಿಂದ ನಶಿಸದವನು ಬ್ರಹ್ಮಪುರ ಎನಿಸಿರುವ ಪರಮಾತ್ಮ. ಅವನು ನಿತ್ಯನಾಗಿರುವನು. ಇವನಲ್ಲಿ ಎಲ್ಲಾ ಕಾಮನೆಗಳು ಪೂರೈಸಿವೆ. ಸರ್ವವ್ಯಾಪ್ತನಾದ ಈ ಪರಮಾತ್ಮನು ಪಾಪರಹಿತನೂ, ಮುಪ್ಪಿಲ್ಲದವನೂ, ನಾಶರಹಿತನೂ ಆಗಿರುವನು ಎಂದು ಉತ್ತರಿಸುತ್ತಾರೆ' ಎಂದು ಮುಂತಾದ ವಾಕ್ಯಶೇಷದಿಂದಲೂ ಬ್ರಹ್ಮಪುರಶಬ್ದದಿಂದ ನಾಶರಹಿತನಾದ ಸರ್ವಾಶ್ರಯನಾದ ಪರಬ್ರಹ್ಮನು ಹೇಳಲ್ಪಡುತ್ತಿದ್ದಾನೆ ಎಂದು ಸಿದ್ಧಿಸುತ್ತದೆ. 'ಬ್ರಹ್ಮಪುರದ ಮಧ್ಯದಲ್ಲಿ ಯಾವ ಕಮಲವಿದೆಯೋ' ಎಂಬ ತೈತ್ತಿರೀಯ ವಾಕ್ಯದ ಸಂವಾದದಿಂದಲೂ, 'ಯಾವ ಈ ಶರೀರವಿದೆಯೋ ಅದು ಬ್ರಹ್ಮಪರ ಎನಿಸಿದೆ' ಎಂಬ ಶ್ರುತಿವಾಕ್ಯದ ಸಂವಾದದಿಂದಲೂ ಬ್ರಹ್ಮಪುರಶಬ್ದದಿಂದ ಶರೀರವೂ ಹೇಳಲ್ಪಡುತ್ತದೆಂದು ಸಿದ್ಧಿಸುತ್ತದೆ.

'ಯದ್ವೈತತ್ ಬ್ರಹ್ಮೇತೀದಂ ವಾವ ತದ್ ಯೋಽಯಂ ಬಹಿರ್ಧಾ ಪುರುಷಾದಾಕಾಶಃ।' 'ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ।' ಇತ್ಯಾದಿನಾ ಪರಬ್ರಹ್ಮಣ್ಯೇವ ಚ ಹೃದಯಂ ಸ್ಥಿತಮ್ ।

ಜೀವನಿಗಿಂತ ಹೊರಗೆ ದೇಹದಲ್ಲಿ ವ್ಯಾಪಿಸಿಕೊಂಡಿದ್ದು ಚೆನ್ನಾಗಿ ಪ್ರಕಾಶಿಸುತ್ತಿರುವುದರಿಂದ ಆಕಾಶನೆನಿಸಿರುವುದು ಸರ್ವತ್ರವ್ಯಾಪ್ತನಾದ ಬ್ರಹ್ಮನೆ. 'ಯಾರು ಎಲ್ಲಾ ಜಂತುಗಳನ್ನು ಪರಮಾತ್ಮನಲ್ಲಿ ಆಶ್ರಯಿಸಿಕೊಂಡು ಇರುವವೆಂದು ಅರಿತುಕೊಳ್ಳುವನೋ' ಎಂದು ಮುಂತಾದ ವಾಕ್ಯಗಳಿಂದ ಪರಮಾತ್ಮನಲ್ಲೇ ಹೃದಯವು ಆಶ್ರಿತವಾಗಿದೆ ಎಂದು ಸಿದ್ಧಿಸುತ್ತದೆ.

ಬ್ರಹ್ಮಪುರ ಶಬ್ದಕ್ಕೆ ಪೂರ್ಣಕಾಮನಾದ ಪರಬ್ರಹ್ಮನೆಂದು ಅರ್ಥೈಸಿದಾಗ 'ಬ್ರಹ್ಮಪುರೇ ದಹರಂ ಪುಂಡರೀಕಂ' ಪರಬ್ರಹ್ಮನಲ್ಲಿ ಅಲ್ಪವಾದ ಹೃದಯ ಕಮಲವು ಆಶ್ರಿತವಾಗಿದೆ' ಎನ್ನುವುದು ಯುಕ್ತವಾಗಲಾರದು. ಹೃದಯವಿರುವುದು ಶರೀರದಲ್ಲಿ. ಶರೀರವು ಅದಕ್ಕೆ ಆಶ್ರಯವಾದೀತೇ ಹೊರತು ಪರಬ್ರಹ್ಮನಲ್ಲ. ಇಷ್ಟೇ ಅಲ್ಲದೆ ಬ್ರಹ್ಮನಿಗೇನೇ ಹೃದಯವು ಆಶ್ರಯ. ಹೃದಯಕ್ಕೆ ಬ್ರಹ್ಮನು ಹೇಗೆ ಆಶ್ರಯನೆನಿಸಲು ಸಾಧ್ಯ ಎಂಬ ಆಕ್ಷೇಪಕ್ಕೆ ಆಚಾರ್ಯರು ಇಲ್ಲಿ ಉತ್ತರಿಸುತ್ತಿದ್ದಾರೆ - 'ಯದ್ವೈತತ್' ಎಂಬ ಪ್ರಮಾಣವಾಕ್ಯವು ಹೃದಯದ ಒಳಗಿರುವ ಪರಮಾತ್ಮನ ರೂಪಕ್ಕಿಂತ ಬೇರೆಯಾದ ಇನ್ನೊಂದು ರೂಪವು ಹೊರಗೆ ದೇಹಕ್ಕೆ ಧಾರಕವಾಗಿದೆ ಎಂದು ಸಾರುತ್ತಿರುವುದರಿಂದ, ದೇಹಾಂತರ್ಗತವಾದ ಹೃದಯಕ್ಕೆ ಅದು ಧಾರಕವಾಗಬಹುದು.

'ಯಸ್ತು ಸರ್ವಾಣಿ ಭೂತಾನಿ' ಎಂಬ ಪ್ರಮಾಣ ವಾಕ್ಯವು ಎಲ್ಲ ವಸ್ತುಗಳಿಗೂ ಪರಬ್ರಹ್ಮನೇ ಆಶ್ರಯ ಎಂದು ಸಾರುತ್ತಿರುವುದರಿಂದ ಹೃದಯಕ್ಕೂ ಅವನೇ ಆಶ್ರಯ.

'ದಹರೋऽಸ್ಮಿನ್ನಂತಾರಾಕಾಶಃ ತಸ್ಮಿನ್ ಯದಂತಃ ತದನ್ವೇಷ್ಟವ್ಯಂ' 'ದಹರೋऽಸ್ಮಿನ್ನಂತರಾಕಾಶಃ ಕಿಂ ತದತ್ರ ವಿದ್ಯತೇ' ಇತ್ಯಾಕಾಶ ಶಬ್ದೇನ ಭೂತಾಕಾಶೋ ವಿವಕ್ಷಿತಃ । ಕಿಂ ತದ್ರತ ವಿದ್ಯೇತೇ ಇತ್ಯಸ್ಯಾಯಂ ಪರಿಹಾರಃ - ಅಸ್ಮಿನ್ ಭೂತಾಕಾಶೇ ಪರಬ್ರಹ್ಮಾಖ್ಯ ಆಕಾಶೋ ವಿದ್ಯತೇ । ಆ ಸಮಂತಾತ್ ಕಾಶನಾತ್ ಆಕಾಶಃ । ಆ ಸಮಂತಾತ್ ಕಂ ಅಶ್ನಾತೀತಿ ವಾ । 'ಅಸ್ಮಿನ್ ಕಾಮಾಃ ಸಮಾಹಿತಾಃ' ಇತಿ ವಾಕ್ಯಶೇಷಾತ್ ಆ ಸಮಂತಾತ್ ಕಾಮಾನ್ ಅಶ್ನಾತೀತಿ ವಾ । ಸ ಚ ಯಾವಾನ್ ಬಹಿಃ ಪರಮಾತ್ಮಾ ವ್ಯಾಪ್ತೋऽಸ್ತಿ ತಾವಾನೇವ ವಿದ್ಯತೇ ಗುಣತಃ। ಪೂರ್ಣಗುಣತ್ವಾತ್ । ಅಲ್ಪಪರಿಮಾಣಸ್ಯಾಪಿ ಮಹತ್ ಪರಿಮಾಣತ್ವಂ ಚ ಯುಜ್ಯತೇ। ಅಚಿಂತ್ಯಶಕ್ತಿತ್ವಾತ್ ।

'ಯಸ್ಮಿನ್ ವಿರುದ್ಧಗತಯೋऽಪ್ಯನಿಶಂ ಪತಂತಿ
ವಿದ್ಯಾದಯೋ ವಿವಿಧ ಶಕ್ತಯ ಆನುಪೂರ್ವ್ಯಾ' ಇತಿ ವಚನಾತ್ ।
ಆನುಪೂರ್ವ್ಯೇತಿ ಶ್ರುತಿಪ್ರಮಾಣಾದಿತ್ಯರ್ಥಃ।
'ಆನುಪೂರ್ವೀ ಶ್ರುತಿರ್ವೇದ ಆಮ್ನಾಯಶ್ಚೇತಿ ಕಥ್ಯತೇ' ।
ಇತ್ಯಭಿಧಾನಾತ್ । ಅನ್ಯಥಾऽನಿಶಮಿತ್ಯುಕ್ತಿವಿರೋಧಾತ್ ।

'ಈ ಮನೆಯಲ್ಲಿ ಸಣ್ಣ ಆಕಾಶವಿದೆ. ಅದರಲ್ಲಿ ಏನಿದೆಯೋ ಅದನ್ನು ಹುಡುಕಬೇಕು.' 'ಈ ಮನೆಯಲ್ಲಿ ಸಣ್ಣ ಆಕಾಶವಿದೆ ಎಂದಿರಿ. ಅದರಲ್ಲಿ ಹುಡುಕಬೇಕಾದುದು ಏನಿದೆ?' ಎಂಬಲ್ಲಿ ಆಕಾಶಶಬ್ದವು ಭೂತಾಕಾಶಪರ. 'ಅದರಲ್ಲಿ ಏನಿದೆ?' ಎಂಬ ಪ್ರಶ್ನೆಗೆ 'ಈ ಭೂತಾಕಾಶದಲ್ಲಿ ಪರಬ್ರಹ್ಮನೆಂಬ ಆಕಾಶವಿದೆ' ಎಂದು ಸಮಾಧಾನ. 'ಪರಬ್ರಹ್ಮನು ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸುತ್ತಾನೆ.' ಅಥವಾ 'ಪೂರ್ಣಸುಖವನ್ನು ಅನುಭವಿಸುವುದರಿಂದ ಆಕಾಶನೆನಿಸುತ್ತಾನೆ' ಅಥವಾ 'ಈ ಪರಬ್ರಹ್ಮನಲ್ಲಿ ಎಲ್ಲ ಬಯಕೆಗಳೂ ಪೂರೈಸಿರುತ್ತವೆ' ಎಂದು ಮುಂದೆ ಹೇಳಿರುವುದರಿಂದ ಎಲ್ಲ ಬಯಿಸಿದ ಪದಾರ್ಥಗಳನ್ನೂ ಭೋಗಿಸುತ್ತಾನೆ ಎಂಬ ಅರ್ಥದಲ್ಲಿ ಆಕಾಶನೆನಿಸುತ್ತಾನೆ. ಹೃದಯದ ಹೊರಗಡೆ ಇರುವ ಆಕಾಶನಾಮಕನಾದ ಆ ಪರಬ್ರಹ್ಮನು ಹಾಗೆಯೇ ಹೃದಯಾಕಾಶದೊಳಗಿರುವ ಪರಬ್ರಹ್ಮನೂ ಗುಣದಿಂದ ವ್ಯಾಪಿಸಿಕೊಂಡಿರುವನು. ಈ ಎರಡೂ ರೂಪಗಳೂ ಅನಂತಗುಣಪೂರ್ಣವೇ

ಆಗಿವೆ. ಆದುದರಿಂದ ಈ ಎರಡೂ ರೂಪಗಳೂ ಪರಸ್ಪರ ಅಭಿನ್ನ. ಹೃದಯದ ಹೊರಗಡೆ ಹಾಗೂ ಒಳಗಡೆ ಇರುವ ಅವನ ರೂಪಗಳು ಅತ್ಯಂತ ಅಭಿನ್ನವಾಗಿದ್ದು ಒಂದೇ ಆಗಿದ್ದರೂ ಅಘಟಿತಘಟನಾತ್ಮಕವಾದ ಅಚಿಂತ್ಯಶಕ್ತಿಯು ಆ ಪರಬ್ರಹ್ಮನಿಗೆ ಇರುವುದರಿಂದ ಪರಸ್ಪರ ವಿರುದ್ಧವಾದ ಅಲ್ಪಪರಿಮಾಣ ಹಾಗೂ ಮಹತ್ ಪರಿಮಾಣಗಳು ಆ ಒಬ್ಬನೇ ಪರಬ್ರಹ್ಮನಲ್ಲಿ ಸರಿಹೊಂದುತ್ತವೆ.

'ವಿದ್ಯೆಯೇ ಮೊದಲಾದ ನಾನಾವಿಧ ಶಕ್ತಿಗಳು ಈ ಪರಬ್ರಹ್ಮನಲ್ಲಿವೆ. ಲೋಕದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಬೇರೆ ವಸ್ತುಗಳನ್ನು ಆಶ್ರಯಿಸಿಕೊಂಡಿರುವುದರಿಂದ ಪರಸ್ಪರ ವಿರುದ್ಧವೆನಿಸಿಕೊಂಡಿರುವ ಅಣುತ್ವ ಮಹತ್ವಾದಿ ಧರ್ಮಗಳೂ ತಮ್ಮ ತಮ್ಮ ವಿರೋಧವನ್ನು ಪರಿಹರಿಸಿಕೊಂಡ, ಈ ಶ್ರೀಹರಿಯಲ್ಲಿ ಯಾವತ್ತೂ ಒಟ್ಟಿಗೇನೇ ಇರುತ್ತವೆ. ಈ ವಿಷಯವು ವೇದರೂಪಪ್ರಮಾಣದಿಂದ ಸಿದ್ಧವಾಗಿದೆ' ಎಂದು ಪ್ರಮಾಣವಚನವಿದೆ. ಆದುದರಿಂದ ಅಚಿಂತ್ಯಶಕ್ತಿವಶಾತ್ ಒಬ್ಬನೇ ಪರಬ್ರಹ್ಮನಲ್ಲಿ ಅಣುತ್ವ ಹಾಗೂ ಮಹತ್ವಗಳು ಲೋಕದಲ್ಲಿ ವಿರುದ್ಧವಾಗಿದ್ದರೂ ಪರಸ್ಪರ ಹೊಂದಿಕೊಂಡಿವೆ ಎಂದು ಹೇಳಿದ್ದು ಯುಕ್ತವೆನಿಸುತ್ತದೆ.

'ಆನುಪೂರ್ವೀ, ಶ್ರುತಿ, ವೇದ, ಆಮ್ನಾಯ ಎಂಬೀ ಶಬ್ದಗಳೆಲ್ಲ ಸಮಾನಾರ್ಥಕವಾಗಿವೆ' ಎಂದು ಶಬ್ದಾನುಶಾಸನವಿರುವುದರಿಂದ 'ಯಸ್ಮಿನ್ ವಿರುದ್ಧಗತಯೋ' ಎಂಬ ಈ ಪ್ರಮಾಣವಾಕ್ಯದಲ್ಲಿರುವ 'ಆನುಪೂರ್ವ್ಯಾ' ಎಂಬ ಪದಕ್ಕೆ ವೇದರೂಪ ಪ್ರಮಾಣದಿಂದ ಎಂದು ವ್ಯಾಖ್ಯಾನಿಸಬೇಕು. ಇದಕ್ಕೆ ಹೊರತಾಗಿ ಅನುಕ್ರಮವಾಗಿ, ಭಿನ್ನ ಭಿನ್ನ ಕಾಲಗಳಲ್ಲಿ ಎಂದು ವ್ಯಾಖ್ಯಾನಿಸಿದರೆ, ಅಣುತ್ವ ಮಹತ್ವಾದಿ ವಿರುದ್ಧ ಧರ್ಮಗಳು ಬೇರೆ ಬೇರೆ ಕಾಲಗಳಲ್ಲಿ ಪರಬ್ರಹ್ಮನಲ್ಲಿ ಸೇರಿಕೊಳ್ಳುತ್ತವೆ. ಒಂದೇ ಕಾಲದಲ್ಲಿ ಅವು ಒಟ್ಟು ಸೇರುವುದಿಲ್ಲ ಎಂಬ ಅಭಿಪ್ರಾಯ ಉಂಟಾಗುವುದು. ಒಂದೇ ಕಾಲದಲ್ಲಿ ಅವು ಒಟ್ಟು ಸೇರುತ್ತವೆ' ಎಂಬ ಅಭಿಪ್ರಾಯದಲ್ಲಿರುವ ಅನಿಶಂ (ಯಾವತ್ತೂ) ಎಂಬ ಶಬ್ದದ ವಿರೋಧವಿರುವುದರಿಂದ ಆ ಅಭಿಪ್ರಾಯವನ್ನು ಇಟ್ಟುಕೊಳ್ಳುವಂತಿಲ್ಲ. ಆದುದರಿಂದ 'ಆನುಪೂರ್ವ್ಯಾ' ಎಂಬ ಪದಕ್ಕೆ 'ವೇದರೂಪ ಪ್ರಮಾಣದಿಂದ' ಎಂದೇ ಅರ್ಥ ಹೊರತು 'ಅನುಕ್ರಮವಾಗಿ' ಎಂದಲ್ಲ.

'ಏಷ ಮ ಆತ್ಮಾಽತರ್ಹೃದಯೇಽಣೀಯಾನ್ ವ್ರೀಹೇರ್ವಾ' ಏಷ ಮ
ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ' ಇತಿ
ಹೃದಯಸ್ಥಸ್ಯೈವಾಣುತ್ವಮಹತ್ವೋಕ್ತೇಶ್ಚ ।
ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ
ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।

ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ
ಶ್ರುತಾಶ್ಚನಾಜ್ಞೈರ್ಹಿ ತಥಾ ಪ್ರತೀತಾಃ ॥ ಇತಿ ಚ ಶ್ರುತಿಃ ॥
ಸುವಿರುದ್ಧಾ ಅಶ್ರುತಾಶ್ಚ ಗುಣಾಃ ಸಂತ್ಯೇವ ಸರ್ವಶಃ ।
ದೋಷಾಃ ಕೇಽಪಿ ನ ಸಂತ್ಯೇವ ಶ್ರುತಾ ಅಪಿ ತು ಸರ್ವಶಃ ॥

ಇತಿ ಗಾರುಡೇ ॥

ನನ್ನ ಹೃದಯದ ಒಳಗಿರುವ ಈ ಪರಮಾತ್ಮನು ವ್ರೀಹಿ ಎಂಬ ಧಾನ್ಯಕ್ಕಿಂತಲೂ ಅಣುವಾಗಿರುವನು. 'ನನ್ನ ಹೃದಯದೊಳಗಿರುವ ಈ ಪರಮಾತ್ಮನು ಭೂಮಿಗಿಂತಲೂ ಮಹತ್‌ಪರಿಮಾಣವುಳ್ಳವನಾಗಿರುವನು' ಎಂದು ಶ್ರುತಿಯೇ ಹೃದಯದಲ್ಲಿರುವ ಪರಮಾತ್ಮನ ಸ್ವರೂಪಕ್ಕೇನೇ ಅಣುತ್ವ ಹಾಗೂ ಮಹತ್ವಗಳಿವೆ ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಪರಮಾತ್ಮನ ಒಂದೇ ರೂಪದಲ್ಲಿ ಅಣುತ್ವ ಮಹತ್ವಗಳು ಅಚಿಂತ್ಯಶಕ್ತಿ ಮಹಿಮೆಯಿಂದಾಗಿ ವಿರೋಧವನ್ನು ಪರಿಹರಿಸಿಕೊಂಡು ಇವೆ ಎಂದು ಸಿದ್ಧಿಸುತ್ತದೆ.

'ಲೋಕದಲ್ಲಿ ಪರಸ್ಪರ ವಿರುದ್ಧವೆನಿಸಿರುವ ಗುಣಗಳೂ ಪರಮಾತ್ಮನಲ್ಲಿ ಶ್ರುತಿಸಿದ್ಧವಾದವುಗಳಾಗಿ, ವಿರೋಧವನ್ನು ಪರಿಹರಿಸಿಕೊಂಡು ಆಶ್ರಿತವಾಗಿವೆ. ಕೆಲವು ಗುಣಗಳು 'ಪರಮಾತ್ಮನಲ್ಲಿವೆ' ಎಂದು ವೇದಾದಿ ಪ್ರಮಾಣ ಗ್ರಂಥಗಳಲ್ಲಿ ನಿರೂಪಿತವಾಗದಿದ್ದರೂ ಅವನಲ್ಲಿ ಇದ್ದೇ ಇವೆ. ವೇದಾದಿಗಳಲ್ಲಿ ಹೇಳಿಲ್ಲವೆಂದು ಅಂತಹ ಗುಣಗಳನ್ನು ಅವನಲ್ಲಿ ಅಂಗೀಕರಿಸದೇ ಇರುವುದು ಸರಿಯಲ್ಲ. ಈ ವಿಷಯದಲ್ಲಿ ಸಂಶಯವೇ ಬೇಡ. ಪರಮಾತ್ಮನಲ್ಲಿರುವ ಗುಣಗಳಲ್ಲಿ ಕೆಲವು ಲಕ್ಷ್ಮ್ಯಾದಿಗಳ ಚಿಂತನೆಗೆ ಗೋಚರವಾದರೆ, ಕೆಲವು ಅಗೋಚರವಾಗಿವೆ. ಪರಮಾತ್ಮನಲ್ಲಿ ಕೆಲವು ದೋಷಗಳಿವೆ ಎಂದು ವೇದದಲ್ಲಿ ನಿರೂಪಿತವಾದಂತೆ ಕಂಡರೂ ವಾಸ್ತವಿಕವಾಗಿ ಅವು ಅವನಲ್ಲಿ ಇಲ್ಲವೇ ಇಲ್ಲ. ಅಂತಹ ವೇದವಾಕ್ಯಗಳ ತಾತ್ಪರ್ಯವನ್ನು ಅರಿಯದೆ ಇರುವ ಅಜ್ಞಾನಿಗಳಿಗೆ ಮಾತ್ರ ಆ ದೋಷಗಳು ಪರಮಾತ್ಮನಲ್ಲಿವೆ ಎಂದು ತೋರುತ್ತಿರಬಹುದು. ತಾತ್ಪರ್ಯಜ್ಞಾನಿಗಳಿಗೆ ಅವು ಇಲ್ಲವೆಂದು ಖಚಿತವಾಗಿವೆ' ಎಂದು ಕೂಡ ಶ್ರುತಿಯು ಸಾರುತ್ತಿದೆ.

''ಲೋಕದಲ್ಲಿ ಸ್ಪಷ್ಟವಾಗಿ ಪರಸ್ಪರ ವಿರುದ್ಧವಾಗಿರುವ ಗುಣಗಳೂ ವಿರೋಧವನ್ನು ಪರಿಹರಿಸಿಕೊಂಡು ಪರಮಾತ್ಮನಲ್ಲಿ ಜೊತೆ ಸೇರಿಕೊಂಡಿವೆ. 'ಪರಮ್ಮಾನಲ್ಲಿ ಇವೆ' ಎಂದು ವೇದದಲ್ಲಿ ಶ್ರುತವಾಗಿರದ ಗುಣಗಳೂ ಅವನಲ್ಲಿವೆ. ವೇದದಲ್ಲಿ 'ಪರಮಾತ್ಮನಲ್ಲಿ ಇವೆ' ಎಂದು ಹೇಳಿದಂತೆ ಆಪಾತತಃ ತೋರುತ್ತಿದ್ದರೂ ವಾಸ್ತವಿಕವಾಗಿ ಅವನಲ್ಲಿ ಯಾವ ದೋಷಗಳೂ ಇಲ್ಲ'' ಎಂದು ಗಾರುಡಪುರಾಣದಲ್ಲಿ ನಿರೂಪಿತವಾಗಿದೆ. ಆದುದರಿಂದ ವೇದವು ಸಾರುತ್ತಿದೆ

ಎಂದಿಷ್ಟರಿಂದಲೇನೇ ಪರಸ್ಪರ ವಿರುದ್ಧವಾದ ಗುಣಗಳನ್ನು ಕಣ್ಣುಮುಚ್ಚಿಕೊಂಡು ಪರಮಾತ್ಮನಲ್ಲಿ ಒಪ್ಪುವುದಾದರೆ 'ಜನಿತೋತ ವಿಷ್ಣೋಃ' ಎಂಬಿತ್ಯಾದಿ ವೇದವಾಕ್ಯಗಳು ಪರಮಾತ್ಮನಲ್ಲಿ ಉತ್ಪತ್ತಿ ಮೊದಲಾದ ದೋಷಗಳನ್ನು ಹೇಳುತ್ತಿರುವುದರಿಂದ ಅವನ್ನೂ ಒಪ್ಪೋಣ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

'ಕಿಂ ತದತ್ರ ವಿದ್ಯತೇ' ಇತಿ ಪೃಷ್ಟತ್ವಾತ್ ಹೃದ್ಗತ ಆಕಾಶೋ ಹೃದಯ ಶಬ್ದೇನೋಚ್ಯತೇ। ಹೃದ್ಯಯನಾತ್ । ತಸ್ಮಿನ್ ಹೃದಯಾಖ್ಯ ಆಕಾಶೇ ಬ್ರಹ್ಮಾಖ್ಯ ಆಕಾಶೋ ವಿದ್ಯತೇ ಇತ್ಯರ್ಥಃ ।। ಅನ್ಯಥಾ ಕಥಂ ಭೂತಾಕಾಶಸ್ಯ ದಹರಸ್ಯ ದಹರಾಕಾಶಸ್ಥಮತ್ವಂ ? 'ದಹರೋಽಸ್ಮಿನ್ನಂತರಾಕಾಶಃ' ಇತಿ ಚ ಪೂರ್ವೋಕ್ತಾಕಾಶಸ್ಯ ದಹರತ್ವಮುಕ್ತಮ್ । ಉತ್ತರಸ್ಯ ತು 'ಯಾವಾನ್ವಾ ಅಯಮಾಕಾಶ' ಇತ್ಯಂತ ಪರಿಮಾಣತ್ವಮ್ । ಅತೋ ಬ್ರಹ್ಮಾಕಾಶ ಏವೋತ್ತರಃ।

'ಬ್ರಹ್ಮನ ಪುರವೆನಿಸಿರುವ ಈ ಶರೀರದಲ್ಲಿ ಯಾವ ಕಮಲಾಕಾರದ ಹೃದಯವೆಂಬ ಮನೆಯಿದೆಯೋ, ಆ ಮನೆಯೊಳಗೆ ಯಾವ ಭೂತಾಕಾಶವಿದೆಯೋ, ಆ ಭೂತಾಕಾಶ-ದಲ್ಲಿರುವ, ಶ್ರವಣ ಮನನ ಧ್ಯಾನಗಳ ಮೂಲಕ ತಿಳಿದುಕೊಳ್ಳಲೇಬೇಕಾದ ವಸ್ತು ಯಾವುದು?' ಎಂದು ಶಿಷ್ಯರು ಕೇಳಿರುವ ಪ್ರಶ್ನೆಗೆ ಉತ್ತರವಾಗಿ ಹೊರಟಿರುವ ವಾಕ್ಯದಲ್ಲಿ, ಅಂಥ ಭೂತಾಕಾಶದಲ್ಲಿರುವ ವಸ್ತುವನ್ನೇ ಹೇಳಬೇಕು ವಿನಹ ಹೃದಯದಲ್ಲಿರುವ ವಸ್ತುವನ್ನಲ್ಲ. ಹಾಗಿದ್ದಲ್ಲಿ ಪ್ರಶ್ನೆ ಹಾಗೂ ಉತ್ತರಗಳು ಪರಸ್ಪರ ಅಸಂಗತವೆನಿಸಿಯಾವು. ಆದುದರಿಂದ 'ಅಂತರ್ಹೃದಯ ಆಕಾಶಃ' ಎಂಬ ಉತ್ತರವಾಕ್ಯದಲ್ಲಿರುವ ಹೃದಯಶಬ್ದದಿಂದ ಅಂತಃಕರಣದಲ್ಲಿರುವ ಭೂತಾಕಾಶವು ಹೇಳಲ್ಪಡುತ್ತಿದೆ ಹೊರತು ಅಂತಃಕರಣವಷ್ಟೇ ಅಲ್ಲ. 'ಹೃದಿ ಅಯನಾತ್ ಹೃದಯಂ' ಅಂತಃಕರಣದಲ್ಲಿ ಇರುವುದರಿಂದ ಹೃದಯವೆನಿಸಿದೆ ಎಂಬ ವ್ಯುತ್ಪತ್ತಿಯನ್ನು ಇಟ್ಟುಕೊಂಡಾಗ ಹೃದಯಶಬ್ದವು ಅಂತಃಕರಣದ ಒಳಗಿರುವ ಭೂತಾಕಾಶಕ್ಕೆ ವಾಚಕವೂ ಆಗುವುದರಿಂದ ಆ ಹೃದಯಶಬ್ದದಿಂದ ಭೂತಾಕಾಶವನ್ನಿಟ್ಟುಕೊಳ್ಳಲು ಯಾವ ಬಾಧಕವೂ ಇಲ್ಲ. ಹೀಗೆ ಅಂತರ್ಹೃದಯ ಆಕಾಶಃ ಎಂಬ ಉತ್ತರವಾಕ್ಯಕ್ಕೆ 'ಅಂತಃ ಕರಣದ ಒಳಗಿರುವ ಭೂತಾಕಾಶದೊಳಗೆ ಬ್ರಹ್ಮನೆಂಬ ಆಕಾಶವಿದೆ' ಎಂದೇ ಅಭಿಪ್ರಾಯ ಹೊರತು ಹೃದಯ (ಅಂತಃಕರಣ)ದೊಳಗೆ ಭೂತಾಕಾಶವಿದೆ' ಎಂದಲ್ಲ. ಇದಕ್ಕೆ ಹೊರತಾಗಿ ಹೃದಯದ ಒಳಗೆ ಭೂತಾಕಾಶವಿದೆ ಎಂದೇ ಅದರ ಅಭಿಪ್ರಾಯವೆಂದು ಹೇಳುವುದಾದರೆ ಹೃದಯದೊಳಗಿದೆ ಎಂದು ಮೊದಲೇ ಹೇಳಲ್ಪಟ್ಟಿರುವ ಆ ಭೂತಾಕಾಶವು

'ದಹರೋऽಸ್ಮಿನ್ನಂತರಾಕಾಶಃ' ಎಂದು ಹೇಳಿರುವಂತೆ ಅಣುಪರಿಮಾಣವುಳ್ಳದ್ದಾದುದರಿಂದ ಅದಕ್ಕೆ ಮಹತ್ ಪರಿಮಾಣವುಳ್ಳ ಬಾಹ್ಯಾಕಾಶದ ಸಮಾನತೆಯನ್ನು ಹೇಳಿದ್ದು ಹೇಗೆ ತಾನೇ ಸರಿಹೊಂದೀತು ? 'ಅಂತರ್ಹೃದಯ ಆಕಾಶಃ' ಎಂಬ ಉತ್ತರ ವಾಕ್ಯದಲ್ಲಿ ಹೇಳಲ್ಪಟ್ಟಿರುವ ಆಕಾಶವು ಭೂತಾಕಾಶವಾಗಿರದೆ ಬ್ರಹ್ಮನೇ ಆಗಿರುವನು ಎಂದು ಅಂಗೀಕರಿಸದೆ ಬೇರೆ ಗತಿಯೇ ಇಲ್ಲ.

ಪೂರ್ವೋಕ್ತಾಕಾಶಸ್ಯಾಭೂತಕಾಶತ್ವೇ 'ತಸ್ಮಿನ್ ಯದಂತಃ ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ' 'ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಃ ತದುಪಾಸಿತವ್ಯಂ' 'ಸಹಸ್ರಶೀರ್ಷಂ ದೇವಂ' ಇತ್ಯಾದಿ ಕಥಂ ಯುಜ್ಯತೇ । ನಹಿ ಭಗವದಂತಸ್ಥಿಸ್ಯೇವಾನ್ಯತ್ ಕಿಂಚಿತ್ ವಿಜಿಜ್ಞಾಸಿತವ್ಯಮ್ । 'ತದ್ವಾವ' ಇತ್ಯವಧಾರಣಾಚ್ಚ।

'ಒಂದೇ ಪ್ರಕರಣದಲ್ಲಿ ಬರುವ ಎರಡು ಆಕಾಶ ಶಬ್ದಗಳಿಗೆ ಬೇರೆ ಬೇರೆ ಅರ್ಥ ಸರಿಯಲ್ಲ. ಆದ್ದರಿಂದ ಮೊದಲು ಹೇಳಿದ ದಹರಾಕಾಶವೂ ಭೂತಾಕಾಶವಲ್ಲ. ಪರಬ್ರಹ್ಮನೆ, ಅಚಿಂತ್ಯಶಕ್ತಿಯಿಂದ ಮಹತ್ತಾದ ಬ್ರಹ್ಮನೂ ಸಣ್ಣ ಆಕಾಶವೆನಿಸಬಹುದು. ಹೀಗೆ ಎರಡೂ ಆಕಾಶಗಳೂ ಪರಬ್ರಹ್ಮ' ಎಂದು ಹೇಳಿದರೆ, 'ಆ ಆಕಾಶದೊಳಗೆ ಯಾವುದಿದೆಯೋ ಅದರ ಅನ್ವೇಷಣೆಯನ್ನು ಮಾಡಬೇಕು', 'ಹೃದಯಕಮಲದಲ್ಲಿ ಸಣ್ಣ ಆಕಾಶವಿದೆ. ಅದರೊಳಗಿರುವ ಶೋಕರಹಿತವಾದ ವಸ್ತು ಏನಿದೆಯೋ ಅದನ್ನು ಆರಾಧಿಸಬೇಕು' 'ಆ ದೇವನು ಸಾವಿರ ತಲೆಗಳುಳ್ಳವನು' ಎಂದು ಮುಂತಾಗಿ, ಆಕಾಶದ ಒಳಗಿರುವ ವಸ್ತುವೇ ಜ್ಞೇಯ, ಆರಾಧ್ಯ ಎನ್ನುವುದು ಹೇಗೆ ಯುಕ್ತವಾದೀತು ? ಆಕಾಶವನ್ನು ಪರಬ್ರಹ್ಮನೆಂದಿಟ್ಟುಕೊಂಡಲ್ಲಿ ಪರಬ್ರಹ್ಮನೊಳಗೆ ಇರುವ ಬೇರೆ ಯಾವುದೋ ಒಂದು ಆರಾಧ್ಯವೆನಿಸಲಾರದಷ್ಟೇ ? 'ತದ್ವಾವ ವಿಜಿಜ್ಞಾಸಿತವ್ಯಂ', ಆಕಾಶದೊಳಗಿರುವ ವಸ್ತುವೇ ಜ್ಞೇಯ. ಬೇರೆ ವಸ್ತುವು ಜ್ಞೇಯವಲ್ಲ ಎಂದೂ ಇಲ್ಲಿ ಹೇಳಿದೆ. ಭಗವಂತನು ಜ್ಞೇಯನೆಂಬುದು ಸರ್ವಸಮ್ಮತವಾಗಿರುವಾಗ ಭಗವಂತನೊಳಗಿರುವ ಬೇರೆ ಯಾವುದನ್ನೋ ಆರಾಧಿಸಬೇಕು. ಭಗವಂತನನ್ನಲ್ಲ ಎನ್ನುವುದು ಸಮಂಜಸವಾಗದು. ಆದ್ದರಿಂದ ದಹರಾಕಾಶವನ್ನು ಭೂತಾಕಾಶವೆಂದಿಟ್ಟುಕೊಳ್ಳಬೇಕು. ಆಗ ಅದರೊಳಗಿರುವ ಪರಬ್ರಹ್ಮನನ್ನೇ ಆರಾಧಿಸಬೇಕೆನ್ನುವುದು ಯುಕ್ತವಾಗುತ್ತದೆ.

ಉತ್ತರಸ್ಯಾಪರಬ್ರಹ್ಮತ್ವೇ ಚ ಸರ್ವಾಧಾರತ್ವಂ 'ನಾಸ್ಯ ಜರಯೈತತ್ ಜೀರ್ಯತಿ, ನ ವಧೇನಾಸ್ಯ ಹನ್ಯತೇ, ಏತತ್ ಸತ್ಯಂ ಬ್ರಹ್ಮಪುರಂ, ಅಸ್ಮಿನ್ ಕಾಮಾಃ ಸಮಾಹಿತಾಃ, ಏಷ ಆತ್ಮಾऽಪಹತಪಾಪ್ಮಾ' ಇತ್ಯಾದಿ ನ ಯುಜ್ಯತೇ।

'ದಹರೋಽಸ್ಮಿನ್ನಂತರಾಕಾಶಃ' ಎಂದು ಮೊದಲು ಹೇಳಿರುವ ಆಕಾಶ ಶಬ್ದವು ಭೂತಾಕಾಶವೆನ್ನುವುದಾದರೆ 'ಏಷೋಽಂತರ್ಹೃದಯ ಆಕಾಶಃ' ಎಂದು ಮುಂದೆ ಹೇಳುವ ಆಕಾಶವೂ ಭೂತಾಕಾಶವೇ ಆಗಲಿ, ಪರಬ್ರಹ್ಮನಲ್ಲ ಎಂದು ಆಕ್ಷೇಪಿಸುವುದೂ ಸರಿಯಲ್ಲ. ಈ ಆಕಾಶವೂ ಭೂತಾಕಾಶವಾದರೆ 'ಉಭೇ ಅಸ್ಮಿನ್ ದ್ಯಾವಾಪೃಥಿವೀ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ' ಎಂದು ಹೇಳಿರುವ ಸರ್ವಾಧಾರತ್ವವೂ, 'ನಾಸ್ಯ ಜರಯೈತತ್ ಜೀರ್ಯತಿ' ಎಂದಿರುವ ಅಜರತ್ವವೂ, 'ನ ವಧೇನಾಸ್ಯ ಹನ್ಯತೇ' ಎಂದಿರುವ ನಾಶರಾಹಿತ್ಯವೂ, 'ಏತತ್ ಸತ್ಯಂ ಬ್ರಹ್ಮಪುರಂ, ಅಸ್ಮಿನ್ ಕಾಮಾಃ ಸಮಾಹಿತಾಃ' ಎಂದು ಹೇಳಲ್ಪಟ್ಟಿರುವ ನಿತ್ಯತ್ವ ಪೂರ್ಣಕಾಮತ್ವಗಳೂ, 'ಏಷ ಆತ್ಮಾಽಪಹತಪಾಪ್ಮಾ' ಎಂದು ನಿರೂಪಿತವಾದ ಪಾಪರಾಹಿತ್ಯವೂ ಸರಿಹೊಂದಲಾರದು. ಇವೆಲ್ಲವೂ ಪರಬ್ರಹ್ಮನ ಅಸಾಧಾರಣ ಮಹಿಮೆಗಳು.

'ಒಂದೇ ಪ್ರಕರಣದಲ್ಲಿ ಬರುವ ಎರಡು ಆಕಾಶಶಬ್ದಗಳೂ ಪರಬ್ರಹ್ಮ-ವಾಚಕವೆಂದಿಟ್ಟುಕೊಳ್ಳೋಣ. 'ಅಸ್ಮಿನ್ ದ್ಯಾವಾಪೃಥಿವೀ' ಎಂದು ಆಕಾಶನಾಮಕ ಬ್ರಹ್ಮನಲ್ಲಿ ದ್ಯಾವಾಪೃಥಿವ್ಯಾದಿ ವಸ್ತುಗಳೇ ಜಿಜ್ಞಾಸ್ಯವಾಗಿ ನಿರೂಪಿತವಾಗಿವೆ. ಮಹತ್ತಾದ ಜಿಜ್ಞಾಸ್ಯವಸ್ತುಗಳು, ಅಲ್ಪನಾದ ಆಕಾಶನಾಮಕ ಪರಬ್ರಹ್ಮನ ಒಳಗಿರಲು ಹೇಗೆ ಶಕ್ಯ ? ಎಂಬ ಆಕ್ಷೇಪವು ಉಂಟಾಗದಿರಲೆಂದು ಪ್ರಾಸಂಗಿಕವಾಗಿ ಈ ಆಕಾಶನಲ್ಲಿ 'ಯಾವಾನ್ವಾ ಅಯಮಾಕಾಶಃ ತಾವಾನೇಷಃ' ಎಂದು ಬಾಹ್ಯಾಕಾಶದ ಸಮಾನತೆಯನ್ನು ಹೇಳಲಾಗಿದೆ ಹೊರತು ಸ್ವತಂತ್ರವಾಗಿ ಆಕಾಶದ ಮಹಿಮೆಯನ್ನು ಹೇಳುವ ಉದ್ದೇಶದಿಂದಲ್ಲ. ಹೀಗೆ ''ದ್ಯಾವಾಪೃಥಿವ್ಯಾದಿಗಳೇ ಜಿಜ್ಞಾಸ್ಯವಾದರೆ, 'ಯಾವಾನ್ವಾ ಅಯಮಾಕಾಶಃ ತಾವಾನೇಷಃ' ಎಂಬ ರೀತಿಯಲ್ಲಿ ಆಕಾಶದ ಮಹಿಮೆಯನ್ನು ಹೇಳಿರುವುದು ವ್ಯರ್ಥ'' ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ ಎಂಬ ಶಂಕೆಗೆ ಇಲ್ಲಿ ಸಮಾಧಾನ ನೀಡಲಾಗಿದೆ.

'ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಂ' ಇತ್ಯಸ್ಯ 'ಯ ಏಷೋಽಂತರ್ಹೃದಯ ಆಕಾಶಃ' ಇತ್ಯೇವ ಪರಿಹಾರಃ । ನ ತು 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿ । ತತ್ತು ವಿಜಿಜ್ಞಾಸಿತವ್ಯತ್ವೇ ಹೇತುತ್ವೇನ ಸಾಮರ್ಥ್ಯಕಥನಮೇವ । ನಹಿ ದ್ಯಾವಾಪೃಥಿವ್ಯಾದೇರೇವ ವಿಜಿಜ್ಞಾಸ್ಯತ್ವಮ್ । 'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ' ಇತಿ ಹಿ ಶ್ರುತಿಃ ।

ಹೃದಯದೊಳಗಿರುವ ಈ ಅಲ್ಪಾಕಾಶದಲ್ಲಿ ಶ್ರವಣ ಮನನ ಧ್ಯಾನಗಳ ಮೂಲಕ ಹುಡುಕಬೇಕಾದ ವಸ್ತು ಏನಿದೆ ? ಎಂಬ ಪ್ರಶ್ನೆಗೆ 'ಹೃತ್ಕಮಲದೊಳಗಿನ ಆಕಾಶದೊಳಗಿರುವ

ಈ ಆಕಾಶನಾಮಕ ಪರಬ್ರಹ್ಮನು' ಎಂಬುದೇ ಉತ್ತರ ಹೊರತು 'ಇಲ್ಲಿ ಎರಡುವಿಧ ಸ್ವರ್ಗ ಭೂಮಿಗಳ ಅಭಿಮಾನಿಗಳು' ಎಂದು ಮುಂತಾಗಿ ಅಲ್ಲ. ಅದು ಆಕಾಶನಾಮಕ ಬ್ರಹ್ಮನನ್ನು ಯಾಕೆ ಅರಿತುಕೊಳ್ಳಲೇ ಬೇಕು, ಅವನಲ್ಲಿ ಅಂತಹ ಮಹತ್ವವೇನು ? ಎಂಬ ಪ್ರಶ್ನೆಗೆ ಉತ್ತರವಾಗಿ, ಸ್ವರ್ಗ ಭೂಮಿ ಮುಂತಾದವುಗಳಿಗೆ ಆಶ್ರಯ ನೀಡುವ ಸಾಮರ್ಥ್ಯ ನಿರೂಪಣೆ ಮಾತ್ರವೇ ಆಗಿದೆ. ಏಕೆಂದರೆ ಸ್ವರ್ಗ ಭೂಮಿ ಮುಂತಾದವುಗಳೇ ಶ್ರವಣ ಮನನಾದಿ ಯೋಗ್ಯವೆನ್ನಲಾಗದು. 'ನೀವು ಆ ಪರಮಾತ್ಮನೊಬ್ಬನನ್ನೇ ಅರಿತುಕೊಳ್ಳಿ ಇತರ ಪ್ರಪಂಚದ ಜಿಜ್ಞಾಸೆ ಬಿಟ್ಟುಬಿಡಿ' ಎನ್ನುತ್ತಿದೆ, ಶ್ರುತಿ.

'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದ್ಯುಭಯಶಬ್ದೋ ಮುಕ್ತಾಮುಕ್ತ-ರಾಶಿವ್ಯಪೇಕ್ಷಯಾ । 'ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ' ಇತಿ ವಾಕ್ಯಶೇಷಾತ್ । 'ಅಸ್ಯ' ಇತಿ ಸಂಸಾರಿಣಃ। ನ ಹಿ ಸಂಸಾರಿಣೋ ಮುಕ್ತಾ ಉಪಕಾರಕಾಃ। ಯದಸ್ಯ ನೋಪಕಾರಕಂ ತತ್ ತಸ್ಯ ನಾಸ್ತೀತ್ಯುಚ್ಯತೇಽನ್ಯಸ್ಯ ಸತ್ತ್ವೇಽಪಿ। ಯಥಾ ವಿತ್ತಾದಿ।

'ಎರಡು ಬಗೆಯ ಸ್ವರ್ಗ ಭೂಮಿಗಳು ಈ ಪರಬ್ರಹ್ಮನಲ್ಲಿವೆ' ಎಂಬಲ್ಲಿ ಎರಡು ಬಗೆ ಎಂದು ಹೇಳಿದುದು ಮುಕ್ತ ಅಮುಕ್ತ ಎಂದು ಎರಡು ಬಗೆಯ ಅಭಿಮಾನಿದೇವತೆಗಳೆಂಬ ಅಭಿಪ್ರಾಯದಿಂದ. ಏಕೆಂದರೆ ಈ ವಾಕ್ಯದ ಕೊನೆಯಲ್ಲಿ 'ಯಾವುದು ಇವನ ಪಾಲಿಗೆ ಇಲ್ಲಿ ಇದೆಯೋ ಯಾವುದು ಇಲ್ಲವೋ' ಎಂದಿದೆ. ಇಲ್ಲಿ 'ಅಸ್ಯ' ಎಂದರೆ 'ಸಂಸಾರಿ ಜೀವನ ಪಾಲಿಗೆ' ಎಂದರ್ಥ, ಸಂಸಾರಿ ಜೀವನಿಗೆ ಮುಕ್ತರು ಉಪಕಾರಕರಲ್ಲ. ಯಾವುದು ಅವನಿಗೆ ಉಪಕಾರಕವಾಗುವುದಿಲ್ಲವೋ ಅದು ಅವನ ಪಾಲಿಗೆ ಇಲ್ಲವೆಂದೇ ಹೇಳುವುದುಂಟು. ಇದ್ದೂ ಉಪಯೋಗಕ್ಕೆ ಬಾರದಿರುವ ಹಣ ಮುಂತಾದವುಗಳಂತೆ. (ಸಂಗ್ರಹ)

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಹೃತ್ಪದ್ಮಸ್ಥಿತತ್ವವು ವಿಷ್ಣು, ಆಕಾಶ, ಜೀವ ಮೂವರಲ್ಲೂ ಸಮಾನ

**तत्वप्रकाशिका – ।। दहर उत्तरेभ्यः ।। १४ ।।**

**अत्र 'यो वेद निहितं गुहायाम्' । 'तस्यान्ते सुषिरं सूक्ष्मम्' । 'हृदि ह्येष आत्मा' इत्यादिश्रुतिभिः ब्रह्माकाशजीवेषु साधारणस्य हृत्पद्मस्थत्वलिङ्गस्य भगवति समन्वयप्रतिपादनादस्ति शास्त्रादिसङ्गतिः ।**

ಸಂಗತಿ ವಿಚಾರ - 'ಯೋ ವೇದ ನಿಹಿತಂ ಗುಹಾಯಾಮ್', 'ಯಾರು ಹೃದಯದಲ್ಲಿರುವವನನ್ನು ತಿಳಿದಿದ್ದಾನೋ', 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್', 'ಹೃತ್ಪದ್ಮದಲ್ಲಿ ಅತಿಸೂಕ್ಷ್ಮವಾದ ಆಕಾಶ ಇದೆ', 'ಹೃದಿ ಹ್ಯೇಷ' 'ಹೃದಯದಲ್ಲಿ ಆತ್ಮ ಇದ್ದಾನೆ'.

ಇವೇ ಮೊದಲಾದ ಶ್ರುತಿಗಳ ಬಲದಿಂದ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವು, ವಿಷ್ಣು, ಆಕಾಶ, ಜೀವ ಮೂವರಲ್ಲೂ ಸಾಧಾರಣವಾಗಿದೆ. ಹೀಗೆ ಉಭಯತ್ರ ಸಾಧಾರಣವಾದ ಹೃತ್ಪದ್ಮಸ್ಥತ್ವ ಲಿಂಗದ ಸಮನ್ವಯವನ್ನು ಭಗವಂತನಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ, ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಹಾಗೂ ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು.

ಯುಕ್ತಿಬದ್ಧವಾದ ಪೂರ್ವಪಕ್ಷ

**तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं सूचयति – चन्द्रेति ।।**

ಶ್ರುತಿಸಂಗತಿ, ಅಧಿಕರಣಸಂಗತಿ ಹಾಗೂ ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುತ್ತಾ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಸೂಚನೆ ಮಾಡುತ್ತಿದ್ದಾರೆ 'ಚಂದ್ರ' ಇತ್ಯಾದಿ ವಾಕ್ಯದಿಂದ.

## ಹೃತ್ಪದ್ಮಸ್ಥನಲ್ಲಿ ಚಂದ್ರಾದ್ಯಾಧಾರತ್ವ

**तत्वप्रकाशिका – 'एतस्य वाऽक्षरस्य' इत्यादिना विष्णोश्चन्द्रादित्याधारत्वमुक्तं तच्छन्दोगश्रुतौ हृत्पद्मस्थस्योच्यते ।**

'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ಶ್ರುತಿಯಿಂದ ವಿಷ್ಣುವೇ ಚಂದ್ರ, ಆದಿತ್ಯ ಮೊದಲಾದವರಿಗೆ ಆಧಾರನಾಗಿದ್ದಾನೆಂದು ಅಕ್ಷರಾಧಿಕರಣದಲ್ಲಿ ಸಮರ್ಥಿಸಲಾಯಿತು, ಆದರೆ ಅದೇ ಚಂದ್ರಾದ್ಯಾಧಾರತ್ವವು ಛಾಂದೋಗ್ಯಶ್ರುತಿಯಲ್ಲಿ ಹೃತ್ಪದ್ಮಸ್ಥನಿಗೆ ಶ್ರುತವಾಗಿದೆ.

## ಅಧಿಕರಣದ ಸಂಪೂರ್ಣ ವಿಷಯವಾಕ್ಯ

**तत्वप्रकाशिका –'एतस्मिन्ब्रह्मपुरे दहरं पुण्डरीकं वेश्म दहरोऽस्मिन्नन्तर आकाशस्तस्मिन् यदन्तस्तदन्वेष्टव्यं तद्वाव विजिज्ञासितव्यमिति । तं चेद् ब्रूयुः किं तदत्र विद्यते यदन्वेष्टव्यं यद्वाव विजिज्ञासितव्यमिति । स ब्रूयाद्यावान् वा अयमाकाशस्तावानेषोऽन्तर्हृदय आकाश उभे अस्मिन् द्यावापृथिवी' इत्यादिना ।**

ಅದು ಹೀಗೆ - 'ಏತಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೇಽಸ್ಮಿನ್ನಂತರಃ ಆಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ । ತಂ ಚೇದ್ ಬ್ರೂಯುಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ । ಸ ಬ್ರೂಯಾದ್ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್‌ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ',

'ಬ್ರಹ್ಮನ ಆವಾಸಸ್ಥಾನವಾದ ಈ ಶರೀರದಲ್ಲಿ ಚಿಕ್ಕ ಹೃದಯಕಮಲವಿದೆ. ಅದರಲ್ಲಿ ಅತ್ಯಂತ ಅಲ್ಪವಾದ ಆಕಾಶವಿದೆ, ಅದರಲ್ಲಿ ಏನು ಇದೆಯೋ ಅದನ್ನು ಹುಡುಕಬೇಕು, ಅಂದರೆ ಜಿಜ್ಞಾಸೆ ಮಾಡಬೇಕು. ಅದರಲ್ಲಿ ಏನನ್ನು ಹುಡುಕಬೇಕು ? ಏನನ್ನು ಜಿಜ್ಞಾಸೆ ಮಾಡಬೇಕು? ಈ ಪ್ರಶ್ನೆಗಳಿಗೆ ಗುರುಗಳು ಉತ್ತರಿಸುತ್ತಾರೆ. ಶರೀರದಲ್ಲಿ ಹೃತ್ಕಮಲವಿದೆ, ಅದರಲ್ಲಿ ಆಕಾಶವಿದೆ, ಆಕಾಶದಲ್ಲಿ ಬ್ರಹ್ಮನಿದ್ದಾನೆ, ಹೊರಗೆ ಎಷ್ಟು ವಿಶಾಲವಾದ ಆಕಾಶವಿದೆಯೋ, ಅವನ ಹೃದಯದಲ್ಲಿ ಅಷ್ಟುವಿಶಾಲವಾದ ಆಕಾಶವಿದೆ. ಇವನು ಸಮಗ್ರ ದ್ಯುಲೋಕ,

ಭೂಲೋಕಗಳಿಗೆಲ್ಲಾ ಆಧಾರನಾಗಿದ್ದಾನೆ' ಇತ್ಯಾದಿಯಾಗಿ ಛಾಂದೋಗ್ಯದ ಎಂಟನೇ ಅಧ್ಯಾಯವು ಪ್ರಾರಂಭವಾಗುತ್ತದೆ.

ಹೃತ್ಪದ್ಮಸ್ಥನಾದವನು ಯಾರು ?

**तत्वप्रकाशिका – तस्य च विष्णोरन्यत्वेऽक्षरस्य विष्णुत्वसाधकसर्वाधारत्वं चान्यस्य प्रसज्येतेत्यवश्यं निर्णेयता ।**

ಇಲ್ಲಿರುವ ಹೃತ್ಪದ್ಮಸ್ಥನಾದವನು ವಿಷ್ಣುವಿಗಿಂತ ಭಿನ್ನನಾದರೆ ಅಕ್ಷರನಿಗೆ ವಿಷ್ಣುತ್ವಸಾಧಕವಾದ ಸರ್ವಾಧಾರತ್ವವು ಬೇರೆಯವರಲ್ಲಿ ಬರುತ್ತದೆಂದು ಹೇಳಿದಂತಾಯಿತು. ಆದ್ದರಿಂದ ಹೃತ್ಪದ್ಮಸ್ಥನಾದವನನ್ನು ಯಾರೆಂದು ಅವಶ್ಯವಾಗಿ ನಿರ್ಣಯ ಮಾಡಬೇಕು.

ಅಧಿಕರಣದ ಸಂದೇಹ, ಸಂದೇಹಬೀಜಗಳು

**तत्वप्रकाशिका – तद्धृदयपद्मस्थत्वं विषयः । किं विष्णोरथाकाशस्योत जीवस्येति संशयः । उक्तसाधारण्यं सन्देहबीजम् ।**

ಅಂತಹ ಹೃದಯಪದ್ಮಸ್ಥತ್ವವೇ ವಿಷಯ. ಹೃತ್ಪದ್ಮಸ್ಥನಾದವನು, ವಿಷ್ಣುವೋ, ಆಕಾಶವೋ, ಅಥವಾ ಜೀವನೋ? ಎಂದು ಸಂಶಯ. ಶ್ರುತಿಗಳು ಮೂವರಲ್ಲೂ ಸಾಧಾರಣವಾಗಿರುವುದೇ ಸಂದೇಹಬೀಜ.

ಹೃತ್ಪದ್ಮಸ್ಥವಾದದ್ದು ಭೂತಾಕಾಶವೆಂದು ಪೂರ್ವಪಕ್ಷ

**तत्वप्रकाशिका – सर्वाधारतया हृत्पद्मस्थत्वमाकाशस्येति तावत् पूर्वःपक्षः । 'दहरेऽस्मिन्नन्तर आकाशः' इति हृत्पद्मे दहराकाशस्थितिश्रवणात् तस्यैव 'उभे अस्मिन्' इति सर्वाधारत्वोक्तेरित्यर्थः ।**

ಹೃತ್ಪದ್ಮಸ್ಥವಾದದ್ದು ಭೂತಾಕಾಶವೇ ಆಗಿದೆ. ಸಕಲಕ್ಕೂ ಆಧಾರವಾಗಿದೆ ಎಂದು ಪೂರ್ವಪಕ್ಷ. 'ದಹರೋऽಸ್ಮಿನ್ನಂತರ ಆಕಾಶಃ' ಎಂಬುದಾಗಿ ಹೃತ್ಪದ್ಮದಲ್ಲಿ ಸಣ್ಣದಾದ ಆಕಾಶದ ಸ್ಥಿತಿಯೂ ಶ್ರುತವಾಗಿದೆ. ಅಂತಹ ಆಕಾಶವೇ 'ಉಭೇ ಅಸ್ಮಿನ್' ಇತ್ಯಾದಿ ಶ್ರುತಿಬಲದಿಂದ ಸಕಲಕ್ಕೂ ಆಧಾರವಾಗಿದೆ ಎಂದೂ ಕೂಡ ತಿಳಿಯುತ್ತಿದೆ.

ಆಕಾಶಸ್ತಲ್ಲಿಂಗಾತ್ ಎಂಬ ಸೂತ್ರದಲ್ಲಿ ನಿರ್ಣಯವಾಗಿದೆ ಅಲ್ಲವೇ?

**तत्वप्रकाशिका – नन्वस्त्वाकाशस्य सर्वाधारतया हृदयपद्मस्थत्वम् । तस्य चाऽऽकाशस्तल्लिङ्गादिति न्यायेन विष्णुत्वे तस्यैव हृत्पद्मस्थत्वसिद्धिरित्यत आह – स चेति ।।**

ಆಕಾಶವು ಸಕಲಕ್ಕೂ ಆಧಾರವಾದ್ದರಿಂದ ಹೃತ್ಪದ್ಮಸ್ಥವಾಗಿದೆ ಎಂದು ಒಪ್ಪೋಣ, ಆದರೆ 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದ ಸೂತ್ರದಂತೆ ವಿಷ್ಣುವೇ ಆಕಾಶ ಶಬ್ದಪ್ರತಿಪಾದ್ಯನಾಗಿದ್ದಾನೆ, ಅಂತಹ ವಿಷ್ಣುವಿಗೇ ಹೃತ್ಪದ್ಮಸ್ಥತ್ವವೂ ಕೂಡ ಸಿದ್ಧವಾಗುತ್ತದಲ್ಲವೆ? ಈ ಪ್ರಶ್ನೆಗೆ 'ಸಚ ಆಕಾಶಃ ನ ವಿಷ್ಣುಃ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

ನಾರಾಯಣೋಪನಿಷತ್ತಿನ ಸಮಾಖ್ಯಾನ

**तत्वप्रकाशिका – नात्रोक्ताऽऽकाशो विष्णुः । 'तस्यान्ते सुषिरम्' इति प्रसिद्धाकाशस्यैव सर्वाधारतया हृत्पद्मस्थत्वोक्तेः तत्समाख्यानादित्यर्थः ।**

ಛಾಂದೋಗ್ಯದ ಈ ಪ್ರಕರಣದಲ್ಲಿ ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ. 'ತಸ್ಯಾಂತೇ ಸುಷಿರಮ್' ಎಂಬ ಶ್ರುತಿಯಿಂದ ಪ್ರಸಿದ್ಧವಾದ ಭೂತಾಕಾಶವೇ ಸಕಲಕ್ಕೂ ಆಧಾರವಾಗಿದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಇಂತಹ ಆಕಾಶವೇ ಹೃತ್ಪದ್ಮಸ್ಥವಾಗಿದೆ ಎಂದು ತಿಳಿಯುತ್ತದೆ. ಹೀಗೆ ನಾರಾಯಣೋಪನಿಷತ್ತಿನ ಸಮಾಖ್ಯಾನವಿರುವುದರಿಂದಲೂ, ಭೂತಾಕಾಶವೇ ಹೃತ್ಪದ್ಮಸ್ಥವಾಗುತ್ತದೆ.

ಸುಷಿರವು ಆಕಾಶಶಬ್ದವಾಚ್ಯವೆಂದು ಹೇಳಲು ಸಾಧ್ಯವಿಲ್ಲ

**तत्वप्रकाशिका – नच वाच्यम् अस्तु आकाशशब्देन सुषिरमेव । 'तस्मिन् यदन्तः' इति हृत्पद्मस्थाकाशगतो विष्णुः सर्वाधारतयोच्यते इति । तथा सति वाक्यान्वयानुपपत्तेः ।**

'ಆಕಾಶ' ಶಬ್ದದಿಂದ 'ಸುಷಿರವೇ' ಪ್ರತಿಪಾದ್ಯವಾಗಲಿ. ಆದರೆ 'ತಸ್ಮಿನ್' ಎಂಬ ವಾಕ್ಯದಿಂದ ಹೃತ್ಪದ್ಮಸ್ಥವಾದ ಆಕಾಶದಲ್ಲಿರುವ ವಿಷ್ಣು ಸಕಲಕ್ಕೂ ಆಧಾರನೆಂದು ಹೇಳಲಾಗಿದೆ. ಹೀಗೇಕೆ

ವ್ಯಾಖ್ಯಾನಿಸಬಾರದು? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವೇ ಕೂಡುವುದಿಲ್ಲ.

### ಹೃತ್ಪದ್ಮಸ್ಥವಾದ ಆಕಾಶದಲ್ಲಿ ವಿಷ್ಣುವಿದ್ದಾನೆಯೇ ?

**तत्वप्रकाशिका – तथा हि । तस्मिन्नित्यत्र विष्णुत्वाभिप्राये किं तदत्र विद्यते इति प्रश्नस्य ब्रह्म विद्यत इति परिहारं विना 'यावान्वा' इत्यादेरभिप्रायासङ्गतिः ।**

ಹೇಗೆಂದರೆ 'ತಸ್ಮಿನ್' ಎಂಬಲ್ಲಿ ಹೃತ್ಪದ್ಮಸ್ಥಿತವಾದ ಆಕಾಶದಲ್ಲಿ ವಿಷ್ಣುವಿದ್ದಾನೆಂದು ಅರ್ಥೈಸಿದರೆ ಮುಂದೆ 'ಕಿಂ ತದತ್ರ ವಿದ್ಯತೇ' ಹೃದಯಾಕಾಶದಲ್ಲಿ ಏನಿದೆ ಎಂದು ಪ್ರಶ್ನಿಸಲಾಗಿದೆ. ಅದಕ್ಕೆ ನಿಮ್ಮ ಪ್ರಕಾರ ಬ್ರಹ್ಮನಿದ್ದಾನೆಂದು ಉತ್ತರಿಸಬೇಕು. ಅದನ್ನು ಬಿಟ್ಟು ಹೊರಗಡೆ ಎಷ್ಟು ವಿಶಾಲವಾದ ಆಕಾಶವಿದೆಯೋ ಅಷ್ಟು ಆಕಾಶವಿದೆ ಎಂಬ 'ಯಾವಾನ್ವಾऽಯಮಾಕಾಶಃ' ಇತ್ಯಾದಿ ಉತ್ತರವು ಅಸಂಗತವಾಗುತ್ತದೆ.

### ಭೂತಾಕಾಶವನ್ನು ವಿವಕ್ಷಿಸಿದಾಗ ಬಾಧಕವಿಲ್ಲ

**तत्वप्रकाशिका – आकाशपक्षे त्वस्त्यन्वयः । हृदयाकाशस्थमुपास्यमित्युक्ते किं तत्र स्थितमिति प्रश्ने यावान्वा अयमाकाश इति प्रागुक्ताकाशमेव विशिष्योभे अस्मिन्नित्यादिपरिहारसंश्लेषात् ।**

ಆದರೆ ಭೂತಾಕಾಶವೇ ಹೃತ್ಪದ್ಮಸ್ಥಿತವೆಂದು ಒಪ್ಪಿದಾಗ, ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವು ಸ್ಪಷ್ಟವಾಗಿ ತಿಳಿಯುತ್ತದೆ -

ಹೇಗೆಂದರೆ ಹೃದಯಾಕಾಶದಲ್ಲಿರುವುದನ್ನು ಉಪಾಸನೆ ಮಾಡಬೇಕು ಎಂದು ಹೇಳಿದಾಗ ಅಲ್ಲಿ ಏನಿದೆ ? ಎಂಬ ಪ್ರಶ್ನೆ ಹುಟ್ಟುತ್ತದೆ. ಆವಾಗ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯಗಳಿಂದ ಹಿಂದೆ ಹೇಳಲ್ಪಟ್ಟ ಆಕಾಶವನ್ನೇ ಉಲ್ಲೇಖ ಮಾಡಿ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ, ಆ ಆಕಾಶವು ಸಕಲಕ್ಕೂ ಆಧಾರವಾಗಿದೆ ಎಂದು ಉತ್ತರಿಸಲಾಗಿದೆ. ಈ ಪ್ರಶ್ನೋತ್ತರಗಳು ಅತ್ಯಂತ ಸಂಗತವಾಗಿವೆ.

### ಯಾರು ಸರ್ವಾಧಾರ ?

**तत्वप्रकाशिका – नच यावानित्यादिनाऽऽकाशाख्यो विष्णुः सर्वाधारतया परिहारे कथ्यत इत्यन्वयोपपत्तिः ।**

'ಯಾವಾನ್' ಇತ್ಯಾದಿ ಶ್ರುತಿಯು ವಿಷ್ಣುವೇ ಸರ್ವಾಧಾರನಾಗಿದ್ದಾನೆಂಬ ಪರಿಹಾರವನ್ನು ಹೇಳುತ್ತಿಲ್ಲವೆಂದು ಅನ್ವಯ.

### ಸುಷಿರವೇ ಸಕಲಕ್ಕೂ ಆಧಾರ

**तत्वप्रकाशिका – तस्मिन् सर्वं प्रतिष्ठितमिति साक्षात्सुषिरस्यैव सर्वाधारत्वोक्तिविरोधात् । तस्मादाकाशस्यैव सर्वाधारतया हृत्पद्मस्थत्वम् ।**

'ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬುದಾಗಿ ಹೃದಯದಲ್ಲಿರುವ ಸುಷಿರವೇ ಸಕಲಕ್ಕೂ ಆಧಾರವಾಗಿದೆ ಎಂದು ಕೇಳಿಬರುತ್ತಿದೆ. ಬ್ರಹ್ಮನನ್ನು ಸಕಲಾಧಾರನೆಂದು ಹೇಳಿದರೆ, ಈ ಶ್ರುತಿಯ ವಿರೋಧವೂ ಕೂಡ ಬರುತ್ತದೆ. ಆದ್ದರಿಂದ ಆಕಾಶವೇ ಸಕಲಕ್ಕೂ ಆಧಾರವಾಗಿದೆ. ಹಾಗೂ ಅದೇ ಹೃತ್ಪದ್ಮಸ್ಥವಾಗಿದೆ ಎಂದು ಹೇಳಿದಂತಾಯಿತು.

### ಹೃತ್ಪದ್ಮಸ್ಥನಾದವನು ಜೀವನೆಂದು ಎರಡನೆಯ ಪೂರ್ವಪಕ್ಷ

**तत्वप्रकाशिका – जीवस्य वैतद्भवेत् । उत्तरत्र 'परंज्योतिरुपसम्पद्य स्वेन रूपेणाभिनिष्पद्यत एष आत्मेति होवाच' इति जीवस्य 'य आत्माऽपहतपाप्मा' इत्युक्तहृत्पद्मस्यात्मतया परामर्शात् दहरस्थत्वलिङ्गाच ।**

ಅಥವಾ ಜೀವನೇ ಹೃತ್ಪದ್ಮಸ್ಥನಾಗುತ್ತಾನೆ, ಏಕೆಂದರೆ ಇದೇ ಛಾಂದೋಗ್ಯ ಉಪನಿಷತ್ತಿನ ಮುಂದಿನ ಖಂಡದಲ್ಲಿ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚ', 'ಯೋಗ್ಯನಾದ ಜೀವನು ಪ್ರಕಾಶ ಸ್ವರೂಪನಾಗಿ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿ ಸ್ವರೂಪಾವಿರ್ಭಾವವನ್ನು ಹೊಂದುತ್ತಾನೆ ಇವನೇ ಆತ್ಮನು'. ಈ ವಾಕ್ಯದಲ್ಲಿ 'ಯ ಆತ್ಮಾ ಅಪಹತಪಾಪ್ಮಾ', ಎಂದು ಯಾವ ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶೆ

ಮಾಡಲಾಗಿದೆಯೋ ಅವನೇ ಜೀವನು. ಹಾಗೂ 'ಅಲ್ಪಸ್ಥಾನಸ್ಥಿತತ್ವ' ಎಂಬ ಲಿಂಗವೂ ಕೂಡ ಜೀವನಲ್ಲೇ ಯುಕ್ತವಾಗುತ್ತದೆ.

ವ್ಯಾಪ್ತನಾದ ಪರಮಾತ್ಮನು ಅಣುರೂಪನಾಗಲಾರ

**तत्वप्रकाशिका – तद्धि अणोर्जीवस्यैव युक्तं न सर्वगतस्य हरेः ।**

ಹೃದಯಪುಂಡರೀಕದಲ್ಲಿರುವ ಆಕಾಶವು ಅತ್ಯಂತ ಅಣುರೂಪವಾಗಿದೆ. ಇಂತಹ ಅಣುಪ್ರದೇಶದಲ್ಲಿ, ಅಣುಸ್ವರೂಪನಾದ ಜೀವನೇ ಇರಲು ಅರ್ಹ; ಹೊರತು ವ್ಯಾಪ್ತನಾದ ಪರಮಾತ್ಮನಲ್ಲ.

ಇಬ್ಬರಲ್ಲಿ ಸಮಾನವಾದ ದೋಷ ದೋಷವೇ ಅಲ್ಲ

**तत्वप्रकाशिका – न चान्वयाभावदोषः । विष्णुपक्षेऽपि साम्यात् । अतो भगवदितरदेव चन्द्रादित्याद्याधाराक्षरमिति ।**

ಹಿಂದೆ ಹೇಳಿದ ಅನ್ವಯಾಭಾವದೋಷವು ಜೀವಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಹೃತ್ಪದ್ಮಸ್ಥನಾಗಿದ್ದವನು ವಿಷ್ಣುವೆಂದು ಹೇಳಿದರೂ ಈ ದೋಷವು ಸಮಾನವಾಗಿದೆ. ಯಾವ ದೋಷವು ಇಬ್ಬರಿಗೂ ಸಮಾನವಾಗಿರುತ್ತದೋ ಅದು ದೋಷವೇ ಅಲ್ಲ. ಆದ್ದರಿಂದ ಭೂತಾಕಾಶ ಅಥವಾ ಜೀವರುಗಳೇ, ಹೃತ್ಪದ್ಮಸ್ಥರಾಗುತ್ತಾರೆ, ಚಂದ್ರಾದಿತ್ಯ ಮೊದಲಾದವರಿಗೂ ಆಶ್ರಯರಾಗುತ್ತಾರೆ. ಅಕ್ಷರಶಬ್ದದಿಂದ ಪ್ರತಿಪಾದ್ಯರೂ ಆಗುತ್ತಾರೆ ಹೊರತು, ಅಕ್ಷರನೂ, ಹೃತ್ಪದ್ಮಸ್ಥನೂ ವಿಷ್ಣುವಲ್ಲ ಎಂದು ಪೂರ್ವಪಕ್ಷ.

ದಹರಾಕಾಶದಲ್ಲಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। दहरपद्मस्थो विष्णुरेव भवेत् । य आत्माऽपहतपाप्मेत्यादिनोत्तरवाक्ये हृत्पद्मस्थस्यापहत- पाप्मत्वादिगुणश्रवणादिति भावः ।**

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಾ ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಉಲ್ಲೇಖಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ. ಸೂಕ್ಷ್ಮವಾದ ಹೃದಯಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆ. 'ಯ ಆತ್ಮಾ ಅಪಹತಪಾಪ್ಮಾ' ಮೊದಲಾದ ಮುಂದಿನ ವಾಕ್ಯದಿಂದ ಹೃತ್ಪದ್ಮಸ್ಥನಲ್ಲಿ ಅಪಹತಪಾಪ್ಮತ್ವ ಮೊದಲಾದ ಗುಣಗಳು ಶ್ರುತವಾಗಿರುವುದರಿಂದ.

### ಅಪಹತಪಾಪ್ಮತ್ವವು ವಿಷ್ಣುತ್ವ ನಿಶ್ಚಾಯಕ

**तत्वप्रकाशिका – अपहतपाप्मत्वादिकं कथं विष्णुत्वनिश्चायकमित्यत आह – य इति ।।**

'ಅಪಹತಪಾಪ್ಮತ್ವ' ಮುಂತಾದವು ವಿಷ್ಣುತ್ವಕ್ಕೆ ನಿಶ್ಚಾಯಕವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಯಃ' ಇತ್ಯಾದಿ ಶ್ರುತಿಯಿಂದ ಉತ್ತರಿಸಿದ್ದಾರೆ.

### ಶ್ರುತಿಯಲ್ಲಿರುವ 'ಅತ್ಯೇತಿ' ಎಂಬುದರ ವ್ಯಾಖ್ಯಾನ

**तत्वप्रकाशिका – अत्येति अतिक्रम्य वर्तते । न चाकाशस्यापि पापाद्यभावेनैते गुणा युक्ता इति वाच्यम् । तस्याचेतनस्य तत्प्राप्त्यभावेन निषेधायोगात् ।**

ಶ್ರುತಿಯಲ್ಲಿರುವ 'ಅತ್ಯೇತಿ' ಎಂಬ ಶಬ್ದಕ್ಕೆ ಅತಿಕ್ರಮಣ ಮಾಡಿ ಇರುತ್ತಾನೆಂದರ್ಥ. ಭೂತಾಕಾಶವು ಜಡವಾದ್ದರಿಂದ ಪಾಪಗಳು ಅದರಲ್ಲಿಯೂ ಇಲ್ಲವಲ್ಲವೇ? ಆದ್ದರಿಂದ ಭೂತಾಕಾಶದ ಗುಣವನ್ನೇ ಶ್ರುತಿಯು ವರ್ಣಿಸುತ್ತದೆ ಎಂದು ಏಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. ಅಚೇತನವಾದ ಆಕಾಶದಲ್ಲಿ ಪಾಪವಿರಲು ಪ್ರಸಕ್ತಿಯೇ ಇಲ್ಲ. ಹೀಗಿರುವಾಗ ಅದನ್ನು ನಿಷೇಧ ಮಾಡುವುದು, ಅಪ್ರಸ್ತುತವೆನಿಸುತ್ತದೆ.

### ಸತ್ಯಕಾಮತ್ವಾದಿಗಳು ಭೂತಾಕಾಶದಲ್ಲಿ ಅತ್ಯಂತ ಅಸಂಭಾವಿತ

**तत्वप्रकाशिका – विष्णोश्चेतनत्वादस्ति प्राप्तिः । सत्यकामत्वाद्ययोगाच्च।**

ವಿಷ್ಣುವಾದರೂ ಸಹ ಚೇತನನಾದುದರಿಂದ ಪಾಪ ಇರಲು ಪ್ರಸಕ್ತಿ ಇದೆ. ಅದರ ನಿಷೇಧವು ಯುಕ್ತವಾಗುತ್ತದೆ. ಮತ್ತು ಭೂತಾಕಾಶದಲ್ಲಿ ಸತ್ಯಕಾಮತ್ವಾದಿ ಗುಣಗಳು ಅತ್ಯಂತ ಅಸಂಭಾವಿತವಾಗಿದೆ.

ಸತ್ಯಕಾಮ ಇತ್ಯಾದಿ ಭಾಷ್ಯದ ವ್ಯಾಖ್ಯಾನ

**तत्वप्रकाशिका – तथापि नैते गुणा विष्णोरेव रमादिष्वपि सम्भवादित्यत आह – नित्येति ।। ननु यथाकथञ्चिदपि तेऽन्यत्र गुणाः सन्त्येव अतः कथं तैर्विष्णुत्वनिश्चय इत्यत आह – सापेक्षेति ।। अपहतपाप्मत्वादीनां कथञ्चिदन्यत्र वृत्तावपि न कथञ्चिदन्यत्र सत्यकामत्वादि इत्याशयेनाऽऽह – सत्यकाम इति ।।**

ಆದರೂ ಸಹ ಸತ್ಯಕಾಮತ್ವಾದಿ ಗುಣಗಳು, ವಿಷ್ಣುವಿನಲ್ಲಿರುವಂತೆ, ಲಕ್ಷ್ಮೀ ಮೊದಲಾದವರಲ್ಲಿಯೂ ಇರುತ್ತವೆ. ಹೀಗಿರುವಾಗ ವಿಷ್ಣುವಿನ ಅಸಾಧಾರಣಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ನಿತ್ಯ' ಇತ್ಯಾದಿ ಪ್ರಮಾಣದಿಂದ ಉತ್ತರಿಸಿದ್ದಾರೆ. ವಿಷ್ಣುವಿನ ಅನುಗ್ರಹದಿಂದ ಅಸ್ವತಂತ್ರವಾಗಿ ರಮಾದಿಗಳಲ್ಲಿ, ಸತ್ಯಕಾಮತ್ವಾದಿ ಗುಣಗಳು ಇದ್ದೇ ಇರುತ್ತವೆ. ಹೇಗಾದರೂ ಇರಲಿ ವಿಷ್ಣುವಿನಂತೆ ಬೇರೆಯವರಲ್ಲೂ ಇರುವಾಗ ಅಸಾಧಾರಣಧರ್ಮವೆಂದು ಹೇಗೆ ಪರಿಗಣಿಸುತ್ತೀರಿ? ಇವುಗಳು ಹೇಗೆ ವಿಷ್ಣುತ್ವನಿಶ್ಚಾಯಕ-ವಾಗುತ್ತವೆ? ಎಂಬ ಪ್ರಶ್ನೆಗೆ 'ಸಾಪೇಕ್ಷ' ಎಂಬುದರಿಂದ ಉತ್ತರಿಸಿದ್ದಾರೆ. ಅಪಹತಪಾಪ್ಮತ್ವಾದಿ-ಗುಣಗಳು ಲಕ್ಷ್ಮೀದೇವಿ ಮೊದಲಾದವರಲ್ಲಿ, ಹೇಗಾದರೂ ಬರಬಹುದು. ಆದರೆ ಸತ್ಯಕಾಮತ್ವಾದಿಗುಣಗಳಂತೂ ಕಥಂಚಿದಪಿ ಬರುವುದಿಲ್ಲವೆಂದು ತಿಳಿಸುವುದಕ್ಕಾಗಿ 'ಸತ್ಯಕಾಮಃ' ಇತ್ಯಾದಿ ಭಾಷ್ಯವು ಹೊರಟಿದೆ.

ಭೂತಾಕಾಶದಲ್ಲಿ ಅಪಹತಪಾಪ್ಮತ್ವಾದಿಗಳು ಸರ್ವಥಾ ಇಲ್ಲ

**तत्वप्रकाशिका – अनेनाऽऽकाशाभिमानिविषयतयाऽपहतपाप्मत्वाद्युपपत्तिरिति परास्तम् ।। १४ ।।**

ಹೀಗೆ ಹೇಳಿದ್ದರಿಂದ ಭೂತಾಕಾಶಕ್ಕೆ ಅಭಿಮಾನಿದೇವತೆಯಾದ್ದರಿಂದ ಲಕ್ಷ್ಮೀದೇವಿಯಲ್ಲಿ ಅಪಹತಪಾಪ್ಮತ್ವಾದಿಗುಣಗಳು ಬರುವಂತೆ ಭೂತಾಕಾಶದಲ್ಲಿಯೂ ಬರುತ್ತದೆಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಹೇಗೆಂದರೆ ಲಕ್ಷ್ಮೀದೇವಿಯಲ್ಲಿರುವಂತಹ ಅಪಹತಪಾಪ್ಮತ್ವಾದಿ-ಗುಣಗಳು ಅಸ್ವತಂತ್ರವಾಗಿವೆ, ಸತ್ಯಕಾಮತ್ವಾದಿಗುಣಗಳಂತೂ ಕಥಂಚಿದಪಿ ಬರುವುದಿಲ್ಲವೆಂದು.

ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

## ಭಾವದೀಪ

ವಿಷಯವಾಕ್ಯವನ್ನೇಕೆ ನ್ಯಾಯವಿವರಣದಲ್ಲಿ ಉದಾಹರಿಸಿಲ್ಲ

**भावदीपः – दहर उत्तरेभ्यः ।।**

**अत्र न्यायविवरणे स्पष्टत्वात् श्रुतीरनुदाहृत्य हृत्पद्मस्थितत्वं साधारणमित्युक्तम्। तदुदाहरणपूर्वकं साधारण्यं व्यञ्जयन्नस्य पादान्तर्भावमाह – अत्र यो वेदेति ।।**

ಈ ಅಧಿಕರಣದ ನ್ಯಾಯವಿವರಣದಲ್ಲಿ ಸ್ಪಷ್ಟವಾದ್ದರಿಂದ ಶ್ರುತಿಗಳನ್ನು ಉದಾಹರಿಸದೆ ಹೃತ್ಪದ್ಮಸ್ಥಿತ್ವವು ಉಭಯಸಾಧಾರಣವೆಂದು ಹೇಳಿದ್ದಾರೆ. ಪ್ರಕೃತ ಟೀಕೆಯಲ್ಲಿ ಆ ಶ್ರುತಿಗಳನ್ನು ಉದಾಹರಿಸುತ್ತಾ ಉಭಯಸಾಧಾರಣ್ಯವನ್ನು ಸ್ಪಷ್ಟವಾಗಿ ತೋರಿಸುತ್ತಾ ಪಾದಾಂತರ್ಭಾವಸಂಗತಿಯನ್ನು ಸಮರ್ಥಿಸುತ್ತಿದ್ದಾರೆ ''ಅತ್ರ ಯೋ ವೇದ'' ಇತ್ಯಾದಿ ವಾಕ್ಯದಿಂದ.

ವಿಶೇಷವಿಚಾರ - ಪೂರ್ವಪಕ್ಷ ಹೀಗಿದೆ - ಹೃತ್ಪದ್ಮಸ್ಥತ್ವವನ್ನು ಭೂತಾಕಾಶದಲ್ಲೇ ಹೇಳಬೇಕು ಹೊರತು, ಬ್ರಹ್ಮನಲ್ಲಲ್ಲ. ಬ್ರಹ್ಮನಲ್ಲಿ ಹೇಳುವುದಾದರೆ ಹೃತ್ಪದ್ಮಸ್ಥವಾದ ದಹರಾಕಾಶವನ್ನೇ ಬ್ರಹ್ಮನೆಂದು ಹೇಳುತ್ತಿರೋ, ಅಥವಾ ದಹರಾಕಾಶಾದಲ್ಲಿ ಅನ್ವೇಷಣೀಯ-ನಾದವನು ಬ್ರಹ್ಮನೆಂದು ಹೇಳುತ್ತಿರೋ? ಈ ಪ್ರಶ್ನೆಗೆ ಉತ್ತರಿಸಬೇಕು.

ಪ್ರಥಮಪಕ್ಷವನ್ನು 'ಆಕಾಶಸ್ಯ ಪ್ರತೀಯತೇ' ಇತ್ಯಾದಿ ಭಾಷ್ಯದ ಮಾತಿನಿಂದ ಮತ್ತು ಭಾಷ್ಯದ ಈ ಮಾತನ್ನು ವ್ಯಾಖ್ಯಾನ ಮಾಡುವ 'ದಹರೋऽಸ್ಮಿನ್ನಂತರಾಕಾಶಃ' ಇತ್ಯಾದಿ ಟೀಕಾವಾಕ್ಯಗಳಿಂದಲೂ ದೂಷಣೆ ಮಾಡಿದ್ದಾಗಿದೆ.

ಇಷ್ಟು ಅಭಿಪ್ರಾಯ. 'ದಹರೋऽಸ್ಮಿನ್ನಂತರಾಕಾಶಃ' ಇತ್ಯಾದಿ ಹೃತ್ಪದ್ಮಸ್ಥವಾಕ್ಯದಲ್ಲಿ ಮತ್ತು ಮುಂದಿರುವ 'ತಾವಾನೇಷೋऽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿಯಾದ ಸರ್ವಾಧಾರವಾಕ್ಯದಲ್ಲಿಯೂ ಕೂಡ ಗಗನದಲ್ಲಿ ಪ್ರಸಿದ್ಧವಾದ ಆಕಾಶಶಬ್ದವೇ ಶ್ರುತವಾಗುತ್ತಿದೆ.ಆದ್ದರಿಂದ ಬ್ರಹ್ಮನನ್ನು ದಹರಾಕಾಶನೆಂದು ಹೇಳಲು ಸಾಧ್ಯವಿಲ್ಲ.

'ಆಕಾಶಾಸ್ತಲ್ಲಿಂಗಾತ್' ಎಂಬ ಪ್ರಥಮ ಪಾದದ ಸೂತ್ರದಂತೆ ಅಪಹತಪಾಪ್ಮತ್ವವೇ ಮೊದಲಾದ ಬ್ರಹ್ಮನ ಲಿಂಗಗಳು ಇಲ್ಲಿ ಶ್ರುತವಾದ್ದರಿಂದ ಬ್ರಹ್ಮನನ್ನು ಆಕಾಶಶಬ್ದ ಪ್ರತಿಪಾದ್ಯನೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

'ಪದ್ಮಕೋಶಪ್ರತೀಕಾಶಂ ಹೃದಯಮ್' ಇತ್ಯಾದಿ ವಾಕ್ಯದಿಂದ ಪ್ರಕೃತವಾದ ಹೃತ್ಪದ್ಮವನ್ನು ಪರಾಮರ್ಶ ಮಾಡಿ, 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬುದಾಗಿ ನಾರಾಯಣ ಶ್ರುತಿಯಲ್ಲಿ ಸುಷಿರಕ್ಕೆ ಹೃತ್ಪದ್ಮಸ್ಥತ್ವವನ್ನು ಮತ್ತು ಸಕಲ ಪದಾರ್ಥಗಳಿಗೆ ಆಶ್ರಯವಾಗಿರುವಿಕೆಯನ್ನು ಹೇಳಲಾಗಿದೆ.

ನಾರಾಯಣೋಪನಿಷತ್ತಿನಲ್ಲಿರುವ ಸುಷಿರ ಶಬ್ದವು ಬ್ರಹ್ಮಪರವೆಂದು ಹೇಳುತ್ತೇವೆ. ಆವಾಗ ಹೃತ್ಪದ್ಮಸ್ಥತ್ವ ಮತ್ತು ಸರ್ವಾಧಾರತ್ವ ಎರಡನ್ನೂ ಕೂಡ ಬ್ರಹ್ಮನಲ್ಲೇ ಹೇಳಿದಂತಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

"ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಾ ।
ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ'

ಎಂಬುದಾಗಿ ಹೃದಯಪದ್ಮದಲ್ಲಿ ಸುಷಿರವಿದೆ. ಆ ಸುಷಿರದಲ್ಲಿ ಸಣ್ಣದಾದ ತೇಜಸ್ಸಿದೆ, ಅದರ ಮಧ್ಯದಲ್ಲಿ ಪರಮಾತ್ಮನಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಸುಷಿರದಲ್ಲಿರುವ ತೇಜಸ್ಸಿನ ಮಧ್ಯದಲ್ಲಿ ಪರಮಾತ್ಮನಿದ್ದಾನೆಂದು ಶ್ರುತಿಯು ಹೇಳುತ್ತಿರುವಾಗ ಸುಷಿರವನ್ನೇ ಪರಮಾತ್ಮನೆಂದು ಹೇಳುವುದು ತಪ್ಪಾಗುತ್ತದೆ.

ಮತ್ತು ದಹರಾಕಾಶವನ್ನೇ ಬ್ರಹ್ಮನೆಂದು ಹೇಳಿದರೆ, 'ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್' ಎಂಬುದಾಗಿ ದಹರಾಕಾಶದ ಒಳಗೆ ಇರುವವನನ್ನು ಅನ್ವೇಷಣೆ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಈ ಅನ್ವೇಷಣೆಗೆ ವಿಷಯನಾದವನು ಬ್ರಹ್ಮನಾಗದೇ ಇರಬೇಕಾದೀತು. ಆದ್ದರಿಂದ ಜಿಜ್ಞಾಸೆಗೆ ವಿಷಯನಾದವನೇ ಬೇರೆ ಎಂದಾಗಿ ದಹರಾಕಾಶನು ಮಾತ್ರ ಪರಮಾತ್ಮನೆಂದಾಗಬೇಕಾದೀತು. ಆವಾಗ ಬ್ರಹ್ಮಜಿಜ್ಞಾಸೆ ಮಾಡಬೇಕೆಂದು ಹೇಳಿದ್ದೇ ತಪ್ಪಾಗುತ್ತದೆ.

ದಹರಾಕಾಶನು ಬ್ರಹ್ಮನಲ್ಲ. ದಹರಾಕಾಶದಲ್ಲಿ ಅನ್ವೇಷಣೆಗೆ ವಿಷಯನಾದವನನ್ನು ಬ್ರಹ್ಮನೆಂದು ಎರಡನೆಯ ಪಕ್ಷವನ್ನೂ ಕೂಡ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ 'ದಹ 'ರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯ-ದಂತಸ್ತದನ್ವೇಷ್ಟವ್ಯಮ್' ಇತ್ಯನೇನ 'ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ' ಇತ್ಯಸ್ಯಾನ್ವಯಾಭಾವಾತ್' ಎಂಬ ನ್ಯಾಯವಿವರಣ ವಾಕ್ಯದಲ್ಲಿ ಮತ್ತು ಈ ವಾಕ್ಯವನ್ನು ವ್ಯಾಖ್ಯಾನ ಮಾಡುವ 'ವಾಕ್ಯಾನ್ವಯಾನುಪಪತ್ತೇಃ' ಇತ್ಯಾದಿಯಾದ ನ್ಯಾಯವಿವರಣದ ಟೀಕಾವಾಕ್ಯದಲ್ಲಿ ಈ ಪಕ್ಷವನ್ನು ನಿರಾಕರಣೆ ಮಾಡಿದ್ದಾರೆ.

ಈ ಟೀಕಾಭಿಪ್ರಾಯವನ್ನು ಹೀಗೆ ತಿಳಿಯಬೇಕು - 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದವು ಪ್ರಸಿದ್ಧವಾದ ಭೂತಾಕಾಶವನ್ನು ಹೇಳುತ್ತಿದೆಯೋ? ಅಥವಾ ಬ್ರಹ್ಮನನ್ನು ಹೇಳುತ್ತಿದೆಯೋ? ಎಂಬ ಪ್ರಶ್ನೆಗೆ ನೀವು ಉತ್ತರಿಸಬೇಕು.

ಮೊದಲನೆಯ ಪಕ್ಷ ತಪ್ಪು. ಏಕೆಂದರೆ 'ತಸ್ಮಿನ್ ಯದಂತಃ' ಎಂಬಲ್ಲಿ ಅನ್ವೇಷಣೆಗೆ ವಿಷಯನಾದವನೆಂದು ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ದಹರಾಕಾಶಸ್ಥನಾದವನನ್ನು ಬ್ರಹ್ಮನೆಂದು ಹೇಳಿದರೆ 'ಕಿಂ ತದತ್ರ ವಿದ್ಯತೇ' 'ಅಲ್ಲಿ ಏನಿದೆ?' ಎಂಬ ಪ್ರಶ್ನೆಗೆ ಬ್ರಹ್ಮನಿದ್ದಾನೆಂದು ಉತ್ತರಿಸಬೇಕು. ಅದನ್ನು ಬಿಟ್ಟು 'ಯಾವಾನ್ವಾ ಅಯಮಾಕಾಶಃ' ಇತ್ಯಾದಿಯಾಗಿ ಪ್ರಸಿದ್ಧವಾದ ಆಕಾಶಕ್ಕೆ ಅನ್ವೇಷಣಾವಿಷಯತ್ವವನ್ನು ಹೇಳಿದರೆ ಅಸಂಗತವಾಗುತ್ತದೆ. ಹೀಗೆ ಅನನ್ವಯವೆಂಬ ಬಾಧಕವಿರುವ ಪ್ರಯುಕ್ತ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶಶಬ್ದವು ಪ್ರಸಿದ್ಧಾಕಾಶಪರವೆಂಬುದು ತಪ್ಪಾಗುತ್ತದೆ.

ಆಕಾಶದ ಬಗ್ಗೆ ಉತ್ತರಿಸುವುದು ಅಸಂಗತವಾಗುವುದಿಲ್ಲ. ಏಕೆಂದರೆ ಅನ್ವೇಷಣಕ್ಕೆ ವಿಷಯನಾದವನು ಬ್ರಹ್ಮನೇ ಆಗಿದ್ದಾನೆ. ಅಂತಹ ಬ್ರಹ್ಮನಿಗೆ ಆಕಾಶವು ಆಧಾರವಾಗಿದೆಯೆಂಬ ದೃಷ್ಟಿಯಿಂದ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯವು ಹೊರಟಿರುತ್ತದೆ. ಹೀಗೆ ಹೇಳಿದಾಗ ಅಸಂಗತವಾಗಲು ಹೇಗೆ ಸಾಧ್ಯ ?

ಏಕೆಂದರೆ 'ತಸ್ಮಿನ್ ಯದಂತಃ' ಇತ್ಯಾದಿಯಾಗಿ ಈ ಹಿಂದೆಯೇ ಆಧಾರದ ಬಗ್ಗೆ ಹೇಳಿದ್ದಾಗಿದೆ. ಈಗ 'ಕಿಂ ತದತ್ರ ವಿದ್ಯತೇ' ಎಂಬುದಾಗಿ ಆಧೇಯದ ಬಗ್ಗೆ ಪ್ರಶ್ನೆಯನ್ನು ಮಾಡಿದ್ದರಿಂದ, ಅದಕ್ಕನುಸಾರಿಯಾಗಿ ಆಧೇಯದ ವಿವರಣೆಯನ್ನು ಮಾಡಬೇಕು ಹೊರತು, ಪುನಃ ಆಧಾರದ ಬಗ್ಗೆ ಉತ್ತರಿಸಿದರೆ ಆಕಾಂಕ್ಷಾವಿಲ್ಲದ ಪ್ರಯುಕ್ತ ಅನನ್ವಯ ದೋಷವು ಬಂದೇ ಬರುತ್ತದೆ. ಮತ್ತು ಆಧೇಯವಾದದ್ದು ದ್ಯಾವ್ಯಾಪೃಥಿವೀಗಳೆಂದು ಹೇಳಿದ್ದರಿಂದ,

ದ್ಯಾವ್ಯಾಪೃಥಿವ್ಯಾದಿಗಳೇ ಅನ್ವೇಷಣಕ್ಕೆ ವಿಷಯವಾಗಬೇಕಾದ ಪ್ರಸಂಗವೂ ಬರುತ್ತದೆ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಆಧಾರತ್ವ ವಚನವು ಅನನ್ವಿತವಾಗಿದೆ ಎಂಬುದನ್ನು ನಿಮಗೆ ಪರಿಹರಿಸಲಾಗದು.

ಹೃತ್ಪದ್ಮಸ್ಥವಾದದ್ದು ಭೂತಾಕಾಶವೆಂದು ಹೇಳಿದಾಗ ಈ ಯಾವ ಅನನ್ವಯ ದೋಷಕ್ಕೂ ಅವಕಾಶವಿಲ್ಲ. ಹಾಗೂ ಅನ್ವಯವೇ ಇರುತ್ತದೆ. ಏಕೆಂದರೆ ದಹರ ವಾಕ್ಯದಲ್ಲಿ ಆಕಾಶಕ್ಕೆ ಹೃತ್ಪದ್ಮಸ್ಥತ್ವವನ್ನು ಹೇಳಿದ ಮೇಲೆ ಅನ್ವೇಷ್ಟವ್ಯ ವಾಕ್ಯದಲ್ಲಿ ದಹರಾಕಾಶದಲ್ಲಿರುವ ವಸ್ತುವನ್ನು ಅನ್ವೇಷಣ ಮಾಡಬೇಕೆಂದು ಹೇಳಲಾಗಿದೆ. ಆವಾಗ 'ಕಿಂ ತದತ್ರ ವಿದ್ಯತೇ' ಎಂದು ಅನ್ವೇಷ್ಟವ್ಯವಾದ ಆಧೇಯದ ಬಗ್ಗೆ ಪ್ರಶ್ನೆಯು ಸಂಗತವಾಗುತ್ತದೆ. ಅದಕ್ಕೆ 'ಯಾವಾನ್ವಾ' ಇತ್ಯಾದಿ ವಾಕ್ಯದಿಂದ ಹಿಂದೆ ಆಧಾರವಾಗಿ ಹೇಳಲ್ಪಟ್ಟ ಆಕಾಶವನ್ನು ಅನುವಾದ ಮಾಡಿ, ಅದರಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆಂದು ಉತ್ತರಿಸಲಾಗಿದೆ. ಸಣ್ಣದಾದ ಹೃದಯಾಕಾಶದಲ್ಲಿ ಬೃಹತ್ತಾದ ದ್ಯಾವಾಪೃಥಿವ್ಯಾದಿಗಳು ಇರಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಬಾಹ್ಯಾಕಾಶವು ಹೇಗೆ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವಾಗಿದೆಯೋ, ಅದರಂತೆ ದಹರಾಕಾಶವೂ ಕೂಡ ಸಮಾನಯೋಗಕ್ಷೇಮದಿಂದ ಸಕಲಕ್ಕೂ ಆಧಾರವಾಗಿದೆ ಎಂಬುದಾಗಿ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸಲಾಗಿದೆ. ಹೀಗೆ ದ್ಯಾವಾಪೃಥಿವ್ಯಾದಿಗಳನ್ನು ಅನ್ವೇಷಣೆ ಮಾಡಬೇಕೆಂದು ಹೇಳಿರುವುದು ಅತ್ಯಂತ ಸಂಗತವಾಗುತ್ತದೆ.

ಆದ್ದರಿಂದ ದ್ಯಾವಾಪೃಥಿವಿಗಳ ಬಗ್ಗೆ ಜಿಜ್ಞಾಸ್ಯತ್ವವನ್ನು ಹೇಳಿದಂತಾಯಿತು. ಹೀಗಿರುವಾಗ ಪ್ರಥಮಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆ ಮಾಡಬೇಕೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ. ಹೀಗೆ ಜಿಜ್ಞಾಸಾಸೂತ್ರವನ್ನೂ ಆಕ್ಷೇಪ ಮಾಡಿದಂತಾಗುತ್ತದೆ. ಆದ್ದರಿಂದಲೇ 'ಮುಖ್ಯತಃ ಪೃಥಿವ್ಯಾದೀನಾಮನುಪಾಸ್ಯತ್ವಾತ್' ಎಂಬ ಸಿದ್ಧಾಂತದ ಟೀಕೆಯಲ್ಲಿ ಪೃಥಿವ್ಯಾದಿಗಳ ಜಿಜ್ಞಾಸ್ಯತ್ವವನ್ನು ಪ್ರತಿಷೇಧ ಮಾಡಿದ್ದಾರೆ. ಇದರಿಂದ ಪೂರ್ವಪಕ್ಷ ಸಂದರ್ಭದಲ್ಲಿ ಪೃಥಿವ್ಯಾದಿಗಳ ಜಿಜ್ಞಾಸೆಯೇ ಪೂರ್ವಪಕ್ಷಿಗೆ ಅಭಿಮತವಾಗಿದೆಯೆಂದು ತಿಳಿಯುತ್ತದೆ.

### 'ಯೋ ವೇದ' ಎಂಬ ಶ್ರುತ್ಯರ್ಥವು ಆನಂದಮಯಾಧಿಕರಣದಲ್ಲಿ

**ಭಾವದೀಪः – एतच्चानन्दमयनये ब्रह्मपरत्वेन निर्णीतम् ।**

''ಯೋ ವೇದ ನಿಹಿತಾಂ ಗುಹಾಯಾಂ'' ಎಂಬ ಶ್ರುತಿಯು ಬ್ರಹ್ಮಪರವಾಗಿದೆ ಎಂಬ ವಿಚಾರವನ್ನು ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ.

ಮಂದಿರೇ ಮಣಿಮಾಲಾನ್ಯಾಯದಿಂದ ಗುಹಾಸ್ಥತ್ವವನ್ನು ಹೇಳಿರುತ್ತಾರೆ

**भावदीपः** – यद्यपि 'परमे व्योमन्' इति हृदयगुहास्थाकाशस्थत्वमेव तत्रोक्तम्, मन्दिरे मणिमालेतिवत् सामान्येन गुहास्थत्वमविरुद्धम् । अत एव गुहायामित्याधारसप्तमीति भावः ।। **तस्येति** ।।

ವಸ್ತುತಃ "ಪರಮೇ ವ್ಯೋಮನ್" ಎಂಬುದಾಗಿ ಹೃದಯಗುಹೆಯಲ್ಲಿರುವ ಆಕಾಶದಲ್ಲಿರುವಿಕೆಯನ್ನು ಶ್ರುತಿಯು ಹೇಳಿದೆ. ಆದರೆ ಟೀಕೆಯಲ್ಲಿ "ಮಂದಿರೇ ಮಣಿಮಾಲಾ" ನ್ಯಾಯದಿಂದ ಸಾಮಾನ್ಯವಾಗಿ ಹೃದಯಗುಹಾಸ್ಥತ್ವವನ್ನು ಹೇಳಿದ್ದಾರೆ; ಇದು ವಿರುದ್ಧವಲ್ಲ. ಮನೆಯಲ್ಲಿ 'ಮಣಿಮಾಲೆ ಇದೆ' ಎಂದರೆ 'ಮನೆಯಲ್ಲಿರುವ ಆಭರಣದ ಪೆಟ್ಟಿಗೆಯಲ್ಲಿ ಮಣಿಮಾಲೆ ಇದೆ' ಎಂದರ್ಥ. ಅದರಂತೆ ಹೃದಯಗುಹೆಯಲ್ಲಿ ಪರಮಾತ್ಮನು ಇದ್ದಾನೆಂದರೆ ಹೃದಯಗುಹೆಯಲ್ಲಿರುವ ಆಕಾಶದಲ್ಲಿ ಪರಮಾತ್ಮನು ಇದ್ದಾನೆಂದರ್ಥ. ಆದ್ದರಿಂದ ವಿರೋಧವಿಲ್ಲ. ಆದ್ದರಿಂದಲೇ ಶ್ರುತಿಯಲ್ಲಿ "ಗುಹಾಯಾಂ" ಎಂಬುದಾಗಿ ಆಧಾರಾರ್ಥಕವಾದ ಸಪ್ತಮೀವಿಭಕ್ತಿಯ ಪ್ರಯೋಗವಿರುತ್ತದೆ.

ತೈತ್ತಿರೀಯದಲ್ಲಿ ಹೃದಯಗುಹಾಸ್ಥತ್ವ ವಿಚಾರ

**भावदीपः** – 'तैत्तिरीये पद्मकोशप्रतीकाशं हृदयं चाप्यधोमुखम् । अधोनिष्ट्या वितस्त्यान्ते नाभ्यामुपरि तिष्ठति । ज्वालमालाकुलं भाति विश्वस्यायतनं महत् । सन्ततꣳशिलाभिस्तुलम्बत्याकोशसन्निभम् । तस्यान्ते' इति प्रकृतहृत्पद्मं तस्येति परामृश्य तदन्तस्थत्वमाकाशस्योच्यते – **हृदीति** ।।

ತೈತ್ತಿರೀಯೋಪನಿಷತ್ತಿನಲ್ಲಿ ಆಕಾಶವೇ ಹೃದಯಗುಹೆಯಲ್ಲಿದೆ ಎಂದು ಹೇಳಿದಂತೆ ಇದೆ. ತೈತ್ತಿರೀಯಪ್ರಕರಣ ಹೀಗಿದೆ - 'ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಮ್ । ಅಧೋನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿ ತಿಷ್ಠತಿ । ಜ್ವಾಲಮಾಲಾಕುಲಂ ಭಾತಿ ವಿಶ್ವಸ್ಯಾಯತನಂ ಮಹತ್ । ಸಂತತಂಶಿಲಾಭಿಸ್ತುಲಂಬತ್ಯಾಕೋಶಸನ್ನಿಭಮ್ । ತಸ್ಯಾಂತೇ' ಎಂದು. ಹಿಂದೆ ಪ್ರಕೃತವಾದ ಹೃತ್ಪದ್ಮವನ್ನೇ 'ತಸ್ಯ' ಎಂಬ 'ತತ್' ಪದದಿಂದ ಪರಾಮರ್ಶ ಮಾಡಿ ಹೃದಯಪದ್ಮದಲ್ಲಿ ಆಕಾಶವಿದೆ ಯೆಂದು ಈ ಶ್ರುತಿಯು ಹೇಳಿದೆ.

### ಷಟ್‌ಪ್ರಶ್ನದಲ್ಲಿ ಹೃದಯಗುಹಾಸ್ಥತ್ವ ವಿಚಾರ

**भावदीपः** – षट्प्रश्ने 'मध्ये तु समानः एष ह्येतद्धुतमन्नं समं नयति । तस्मादेताः सप्तार्चिषो भवन्ति' इति पूर्वत्र तस्मात्समानेनान्नस्य समीकरणात् 'एताः सप्तार्चिषो भवन्ति' इत्युक्तौ आत्मैव विषयसंसर्गेणताननुभविष्यति किमिन्द्रियवृत्तिभिरिति शङ्कायाम् अणुत्वात्तस्य नैवं युक्तमिति भावेन हृदि ह्येष आत्मा जीवः स्वरूपेण वर्तत इत्युक्तेः ।

ಷಟ್‌ಪ್ರಶ್ನೋಪನಿಷತ್ತಿನಲ್ಲಿರುವ ವಾಕ್ಯವನ್ನು ನೋಡಿದಾಗ ಜೀವನು ಹೃದಯದಲ್ಲಿ ಇದ್ದಾನೆಂದು ಕಾಣಿಸುತ್ತಿದೆ. ಷಟ್‌ಪ್ರಶ್ನೋಪತ್ತಿನ ಪ್ರಕರಣ ಹೀಗಿದೆ - 'ಮಧ್ಯೇ ತು ಸಮಾನಃ ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ'' ಎಂದು. ಅಂದರೆ ಸಮಾನ ನಾಮಕನಾದ ವಾಯು ಅನ್ನವನ್ನು ಎಲ್ಲಾ ಇಂದ್ರಿಯಗಳಿಗೆ ಸಮಾನವಾಗಿ ಕೊಂಡೊಯ್ಯುವುದರಿಂದ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳು ತಮ್ಮ ಕಾರ್ಯಗಳನ್ನು ನಿರ್ವಹಿಸಲು ಸಮರ್ಥಗಳಾಗಿವೆ. ಹೀಗೆ ಹೇಳಿದಾಗ ಆತ್ಮನೇ ನೇರವಾಗಿ ವಿಷಯಸಂಪರ್ಕಗಳನ್ನು ಪಡೆಲು ಸಮರ್ಥನಾಗಿದ್ದಾನೆ, ಇಂದ್ರಿಯಗಳ ಸಹಕಾರಗಳೇಕೆ ? ಎಂಬ ಆಶಂಕೆಯು ಪ್ರಾಪ್ತವಾದರೆ ಆತ್ಮನು ಅಣುರೂಪನಾಗಿ ಹೃದಯ ಪ್ರದೇಶದಲ್ಲಿರುತ್ತಾನೆ. ಆದ್ದರಿಂದ ಅವನಿಗೆ ನೇರವಾಗಿ ವಿಷಯಗಳನ್ನು ಅನುಭವಿಸಲು ಸಾಧ್ಯವಿಲ್ಲ ಎಂಬ ಅಭಿಪ್ರಾಯದಿಂದ 'ಹೃದಿ ಹ್ಯೇಷ ಆತ್ಮಾ' ಎಂಬ ಮಾತು ಹೊರಟಿದೆ. ಇದರಿಂದ ಜೀವನೇ ಹೃದಯದಲ್ಲಿದ್ದಾನೆಂದು ಸ್ಪಷ್ಟವಾಗುತ್ತದೆ.

### 'ಅವಸ್ಥಿತಿವೈಶೇಷ್ಯಾತ್' ಎಂಬ ಸೂತ್ರದಲ್ಲಿ ಹೃದಯಗುಹಾಸ್ಥತ್ವ ವಿಚಾರ

**भावदीपः** – 'अवस्थितिवैशेष्यादिति चेन्नाभ्युपगमाद्धृदि हि' इति सूत्रकृता जीवपरत्वेन वक्ष्यमाणत्वाच्चेति भावः ।।

'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ' ಎಂಬ ಸೂತ್ರದಲ್ಲಿ ಜೀವನು ಹೃದಯದಲ್ಲಿದ್ದಾನೆ ಎಂದು ಸಮರ್ಥಿಸುವವರಿದ್ದಾರೆ.

ಹೃದಯಪದ್ಮಸ್ಥತ್ವ ಎಂದರೇನು ?

**भावदीपः – हृत्पद्मस्थत्वेति ।।** साक्षात्परम्परासाधारणहृत्पद्मगतत्वलिङ्गस्येत्यर्थः। आकाशस्येति भाष्यं तु पूर्वपक्षहेत्वभिप्रायम्, नतु समन्वेतव्यनामाशयमिति भावः ।

ಟೀಕೆಯಲ್ಲಿ 'ಹೃತ್ಪದ್ಮಸ್ಥತ್ವ' ಎಂದು ಇದೆ. ಅಂದರೆ ಹೃದಯಪದ್ಮದಲ್ಲಿ ಸಾಕ್ಷಾತ್ತಾಗಿ ಇರುತ್ತಾನೆಂದು ಅಥವಾ ಹೃತ್ಪದ್ಮದಲ್ಲಿರುವ ಆಕಾಶದಲ್ಲಿರುತ್ತಾನೆಂದು ತಿಳಿಯಬಹುದು. ಹೀಗೆ ಸಾಕ್ಷಾತ್ಪರಂಪರಾ-ಸಾಧಾರಣವಾದ 'ಹೃತ್ಪದ್ಮಗತತ್ವ' ಎಂಬ ಲಿಂಗವನ್ನು ಎಂದು ಇದರ ಅರ್ಥ. 'ಆಕಾಶಸ್ಯ' ಎಂಬ ಭಾಷ್ಯವಾಕ್ಯವು ಪೂರ್ವಪಕ್ಷದ ಹೇತುಪರವಾಗಿದೆ; ಹೊರತು ಆಕಾಶವೆಂಬ ನಾಮಾತ್ಮಕಶಬ್ದದ ಸಮನ್ವಯಗೋಸ್ಕರ ಹೇಳಿದ್ದಲ್ಲವೆಂದು ತಿಳಿಯಬೇಕು. ಏಕೆಂದರೆ ಈ ಅಧಿಕರಣದಲ್ಲಿ ಹೃತ್ಪದ್ಮಸ್ಥಿತತ್ವವೆಂಬ ಲಿಂಗದ ಸಮನ್ವಯವೇ ವಿವಕ್ಷಿತ ಹೊರತು, ಅದ್ವೈತಿಗಳು ಹೇಳುವಂತೆ ಆಕಾಶಶಬ್ದದ ಸಮನ್ವಯವು ವಿವಕ್ಷಿತವಲ್ಲ.

ಸಂಗತಿಪರ ಭಾಷ್ಯದ ವ್ಯಾಖ್ಯಾನ

**भावदीपः –** इत्यन्तभाष्यं सङ्गतिसूचकत्वेन व्याकुर्वन्नुक्तमित्यन्तं व्याचष्टे **– एतस्य वा इति ।।** उक्तमक्षरनय इत्यर्थः ।

'ಇತಿ' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನ ಮಾಡುತ್ತಾ, 'ಉಕ್ತಂ' ಎಂಬಲ್ಲಿಯ ತನಕದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಏತಸ್ಯ ವಾ' ಇತ್ಯಾದಿ ಟೀಕೆಯಿಂದ. ಅಕ್ಷರಾಧಿಕರಣದಲ್ಲಿ ಅಕ್ಷರನಿಗೆ ಸೂರ್ಯಚಂದ್ರಾದ್ಯಾಧಾರತ್ವವನ್ನು ಹೇಳಲಾಗಿದೆಯೆಂದರ್ಥ.

ಛಾಂದೋಗ್ಯಶ್ರುತಿಯ ಎಂಟನೆಯ ಅಧ್ಯಾಯದಲ್ಲಿ ಹೇಳಿದ ವಿಚಾರ

**भावदीपः –** आकाशस्य प्रतीयत इत्यत्र हृत्पद्मस्थस्येत्याकाशविशेषणमुपेत्य तात्पर्यमाह **– तच्छन्दोगश्रुताविति ।।** उच्यते अष्टम इत्यर्थः ।

'ಆಕಾಶಸ್ಯ ಪ್ರತೀಯತೇ' ಎಂಬಲ್ಲಿ ಹೃತ್ಪದ್ಮದಲ್ಲಿರುವ ಆಕಾಶದಲ್ಲಿರುವಿಕೆಯು ಕಾಣಿಸುತ್ತಿದೆ ಎಂಬರ್ಥವನ್ನು ಒಪ್ಪಿ ತಾತ್ಪರ್ಯವನ್ನು ಹೇಳುತ್ತಿದ್ದಾರೆ 'ತಚ್ಛಂದೋಗಶ್ರುತೌ' ಇತ್ಯಾದಿಯಾಗಿ. 'ಉಚ್ಯತೇ' ಎಂದರೆ ಛಾಂದೋಗ್ಯಶ್ರುತಿಯ ಎಂಟನೇ ಅಧ್ಯಾಯದಲ್ಲಿ ಹೇಳಲಾಗಿದೆ ಎಂದರ್ಥ.

ಪ್ರಕರಣದ ಸಂಪೂರ್ಣ ವಾಕ್ಯ

**भावदीपः** – केनेत्यत एतस्मिन्नित्यादिभाष्यमिति भावेन भाष्ये पूर्वपक्षयुक्तिद्योतनाय समग्रानुक्तावपि वक्ष्यमाणानन्वययुक्तिसौकर्याय तद्वाक्यं समग्रं पठति – **एतस्मिन्निति** ।।

ಯಾರಿಂದ ಹೇಳಲ್ಪಟ್ಟಿದೆ ? ಎಂಬ ಪ್ರಶ್ನೆಗೆ 'ಏತಸ್ಮಿನ್' ಇತ್ಯಾದಿ ಭಾಷ್ಯವು ಹೊರಟಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ಪೂರ್ವಪಕ್ಷದ ಯುಕ್ತಿಯನ್ನು ತಿಳಿಸಲು ಸಮಗ್ರವಾಕ್ಯವನ್ನು ಪಠಿಸದಿದ್ದರೂ ಟೀಕಾರಾಯರು ಆಕಾಶಪಕ್ಷದಲ್ಲಿ ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವು ಕೂಡುವುದಿಲ್ಲ ಎಂಬುದನ್ನು ಮುಂದೆ ತೋರಿಸುವುದಕ್ಕಾಗಿ ಪ್ರಕರಣದ ಸಂಪೂರ್ಣ ವಾಕ್ಯವನ್ನು ಪಠಿಸುತ್ತಿದ್ದಾರೆ 'ಏತಸ್ಮಿನ್' ಇತ್ಯಾದಿಯಾಗಿ.

ಹೃದಯಕಮಲದ ಆಕಾಶದಲ್ಲಿ ಏನಿದೆ ?

**भावदीपः** – ब्रह्मपुरे देहे । दहरं दभ्रमल्पमित्यर्थः । अस्मिन् पुण्डरीके। तस्मिन्नाकाशे । कथं तस्यान्वेषणमित्यत उक्तम् – **विजिज्ञासितव्यमिति** ।। तमेवमुक्तवन्तं गुरुं शिष्याश्चेद् ब्रूयुः । किं तदाह – **किं तदत्रेति** ।।

'ಬ್ರಹ್ಮಪುರೇ' ಎಂದರೆ ದೇಹದಲ್ಲಿ ಎಂದರ್ಥ. 'ದಹರಂ' ಎಂಬ ಪದಕ್ಕೆ ಅಣುರೂಪವಾದದ್ದು ಎಂದರ್ಥ. 'ಅಸ್ಮಿನ್' ಹೃದಯಕಮಲದಲ್ಲಿ, 'ತಸ್ಮಿನ್' ಆಕಾಶದಲ್ಲಿ, ಹುಡುಕುವುದು ಹೇಗೆ ? ಎಂಬ ಪ್ರಶ್ನೆಗೆ 'ವಿಜಿಜ್ಞಾಸಿತವ್ಯಂ' ಜಿಜ್ಞಾಸೆ ಮಾಡಬೇಕೆಂದು ಹೇಳಲಾಗಿದೆ. ಹೀಗೆ ಹೇಳಲ್ಪಟ್ಟ ಗುರುವನ್ನು ಶಿಷ್ಯರು ಪುನಃ ಪ್ರಶ್ನಿಸುತ್ತಾರೆ - 'ಹೃದಯಕಮಲದ ಆಕಾಶದಲ್ಲಿ ಏನಿದೆ?' ಎಂದು. ಇದನ್ನೇ 'ಕಿಂ ತದತ್ರ' ಇತ್ಯಾದಿ ವಾಕ್ಯಗಳಿಂದ ಹೇಳಿರುತ್ತಾರೆ.

ಯಾವ ಕಾರಣಕ್ಕಾಗಿ ಹೀಗೆ ಜಿಜ್ಞಾಸೆ ಮಾಡಬೇಕು ?

**भावदीपः** – यदन्वेष्टत्वादिनोक्तं तदत्र किं विद्यते? कुतश्च तदन्वेष्टव्यम्? कीदृशं च तद् विद्यते? इति प्रश्नार्थः । स गुरुः शिष्यान् प्रति ब्रूयात् । किं तदाह – **यावानिति** ।।

ಜಿಜ್ಞಾಸೆ ಮಾಡಬೇಕೆಂದು ಹೇಳಲಾಯಿತು. ಆದರೆ ಹೃದಯಾಕಾಶದಲ್ಲಿ ಏನಿದೆ? ಯಾವ ಕಾರಣಕ್ಕಾಗಿ ಅದನ್ನು ಜಿಜ್ಞಾಸೆ ಮಾಡಬೇಕು? ಇರುವ ವಸ್ತುವು ಎಂತಹ ಧರ್ಮಗಳಿಂದ ಉಪಪನ್ನವಾಗಿದೆ ? ಎಂಬುದು ಪ್ರಶ್ನೆಯ ಅಭಿಪ್ರಾಯ. ಆವಾಗ ಗುರುಗಳು ಶಿಷ್ಯರನ್ನು ಕುರಿತು ಉತ್ತರಿಸುತ್ತಾರೆ. ಅದೇನೆಂಬುದನ್ನು 'ಯಾವಾನ್' ಎಂಬ ಶ್ರುತಿಯು ಹೇಳುತ್ತಿದೆ.

### ಹೃದಯಶಬ್ದದ ನಿಷ್ಪತ್ತಿ

**भावदीपः** – हृद्ययत इति हृदये हृत्स्थदहराकाशे । आकाशः आकाशनाम ब्रह्म विद्यते । अयं बाह्याकाशः आकाशनामा विष्णुर्यावान् व्यास्या, तावानिति किमत्यस्य । अस्मिन् द्यावाभूम्यादि सर्वं समाहितं यतोऽतो द्यावापृथिव्याद्याधारत्वाज्जिज्ञास्यमिति कुतश्चेति प्रश्नस्योत्तरम् ।

'ಹೃದಯೇ' ಎಂದರೆ 'ಹೃದಿ ಅಯತೇ ಇತಿ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿದಾಗ ಹೃದಯದಲ್ಲಿರುವ ದಹರಾಕಾಶದಲ್ಲಿ ಎಂಬ ಅರ್ಥವು ಪ್ರಾಪ್ತವಾಗುತ್ತದೆ. ಅದರಲ್ಲಿ ಆಕಾಶನಾಮಕಬ್ರಹ್ಮನು ಇರುತ್ತಾನೆ. 'ಅಯಂ' ಎಂದರೆ ಬಾಹ್ಯಾಕಾಶ ಎಂದರ್ಥ. ಆಕಾಶನಾಮಕನಾದ ವಿಷ್ಣು ಎಷ್ಟು ವ್ಯಾಪ್ತನಾಗಿದ್ದಾನೆಯೋ ಅಷ್ಟೇ ವ್ಯಾಪ್ತಿಯು ಹೃದಯಾಕಾಶದಲ್ಲಿರುವ ವಿಷ್ಣುವಿನಲ್ಲಿಯೂ ಇರುತ್ತದೆ. ಇದು 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ ಉತ್ತರವೆಂದು ತಿಳಿಯಬೇಕು.

ಈ ದ್ಯಾವಾಪೃಥಿವ್ಯಾದಿಗಳೆಲ್ಲವೂ ಹೃದಯಾಕಾಶದಲ್ಲಿರುವ ಪರಮಾತ್ಮನಲ್ಲಿಯೇ ಆಶ್ರಿತವಾಗಿವೆ. ಆದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಿತನಾಗಿರುವುದರಿಂದ ಜಿಜ್ಞಾಸೆ ಮಾಡಬೇಕೆಂದು ಉತ್ತರಿಸಲಾಗಿದೆ. ಇದು 'ಕುತಶ್ಚ' ಎಂಬ ಪ್ರಶ್ನೆಗೆ ಉತ್ತರವಾಗಿದೆ.

### ಹೃತ್ಪದ್ಮಸ್ಥನು ಯಾವ ಧರ್ಮ ವಿಶಿಷ್ಟನಾಗಿದ್ದಾನೆ ?

**भावदीपः** – कीदृशमित्यस्यापि तद् ब्रह्म कीदृशमस्तीति पृष्टम् । तस्य हृदये यावान् बाह्याकाशः तावान् द्यावाभूम्यादिकं च सर्वं विद्यते सर्वाधारभूतं तदिति इदमेवोत्तरमिति सिद्धान्तीयोऽर्थः ।

'ಕೀದೃಶಂ' ಯಾವ ಧರ್ಮಗಳಿಂದ ಉಪಪನ್ನನಾಗಿದ್ದಾನೆ? ಎಂಬ ಪ್ರಶ್ನೆಗೂ ಕೂಡ 'ಯಾವಾನ್ವಾ' ಎಂಬುದೇ ಉತ್ತರವಾಗಿದೆ. ಅಂದರೆ ಹೃದಯದಲ್ಲಿ ಎಷ್ಟು ಬಾಹ್ಯಾಕಾಶವಿದೆಯೋ ಅಷ್ಟು ವ್ಯಾಪ್ತಿಯು ವಿಷ್ಣುವಿನಲ್ಲಿ ಇರುತ್ತದೆ. ಮತ್ತು ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆ. ಹೀಗೆ ಹೃದಯಾಕಾಶದಲ್ಲಿರುವ ವಿಷ್ಣುವಿನಲ್ಲಿ ದ್ಯಾವಾಪೃಥಿವ್ಯಾದ್ಯಾಶ್ರಯತ್ವಧರ್ಮವು ಇರುತ್ತದೆ ಎಂದು ತಿಳಿಯಬೇಕು. ಉಪನಿಷತ್ತಿಗೆ ಇಲ್ಲಿಯತನಕ ವ್ಯಾಖ್ಯಾನ ಮಾಡಿದ್ದು ಸಿದ್ಧಾಂತಿಗಳ ಪ್ರಕಾರ.

## ಪೂರ್ವಪಕ್ಷಿಗಳ ಅಭಿಪ್ರಾಯ

**भावदीपः** – पूर्वपक्षीयस्तु हृदये आकाश इति प्रागुक्तदहराकाशमनूद्य यावानिति बाह्याकाशतुल्यतया तं विशेष्यान्वेष्टव्यतया तत्र द्यावाभूम्यादिकमुच्यत इत्यर्थः ।

ಆದರೆ ಪೂರ್ವಪಕ್ಷಿಗಳು 'ಹೃದಯೇ' ಎಂಬುದಕ್ಕೆ ಹಿಂದೆ ಹೇಳಲ್ಪಟ್ಟ ಹೃದಯಾಕಾಶವನ್ನು ಅನುವಾದ ಮಾಡಿ 'ಯಾವಾನ್' ಇತ್ಯಾದಿ ವಾಕ್ಯದಿಂದ ಬಾಹ್ಯಾಕಾಶದ ಸಾಮ್ಯವನ್ನು ಹೇಳುವ ಮೂಲಕ ಅದರಲ್ಲಿ ದ್ಯಾವಾಪೃಥಿವ್ಯಾದಿಗಳನ್ನು ಹೇಳುತ್ತಾರೆ.

## ಆಕಾಶಶ್ರುತಿಯು ಭೂತಾಕಾಶಪರವೆಂದು ಪೂರ್ವಪಕ್ಷ

**भावदीपः** – आकाशस्येत्यादेर्भावः – **तस्य चेति** ।। चन्द्राद्याधार-हृत्पद्मस्थस्येत्यर्थः।। **अन्यत्व इति** ।। सुषिरश्रुतिसमाख्यासहिताकाशश्रुत्या आकाशत्वे वक्ष्यमाणदिशा जीवत्वे वेत्यर्थः ।

'ಆಕಾಶಸ್ಯ' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು 'ತಸ್ಯಚ' ಎಂಬುದರಿಂದ ಹೇಳಿದ್ದಾರೆ. ಅಂದರೆ ಚಂದ್ರಾದಿಗಳಿಗೆ ಆಧಾರವಾದ ಹೃತ್ಪದ್ಮದಲ್ಲಿರುವ ಎಂದರ್ಥ. 'ಅನ್ಯತ್ವ' ಎಂದರೆ ಸುಷಿರಶ್ರುತಿಸಮಾಖ್ಯಾ-ಪ್ರಮಾಣದಿಂದ ಕೂಡಿರುವ ಆಕಾಶಶ್ರುತಿಯು ಭೂತಾಕಾಶಪರವಾದರೆ ಅಥವಾ ಮುಂದೆ ಹೇಳುವ ಜೀವಪರವಾದರೆ ಎಂದರ್ಥ.

ಪರಿಗಣಿಸಲಾಗಿದೆ. ಆದರೆ ಅದ್ವೈತಿಗಳಾದ ನೀವು 'ಪ್ರಾಣಬಂಧನಂ ಹಿ ಸೋಮ್ಯ ಮನಃ ಇತಿ ವಾಕ್ಯಂ ಬ್ರಹ್ಮಪ್ರಕರಣಸ್ಥತ್ವೇನಾಸಂದಿಗ್ಧತ್ವಾನ್ನ ವಿಷಯಃ। ಕಿಂತು ಪ್ರಾಣ ಇತಿ ಹೋವಾಚ' ಇತಿ ವಾಕ್ಯಮೇವ' ಎಂದು 'ಪ್ರಾಣಬಂಧನಂ ಹಿ ಸೋಮ್ಯ ಮನಃ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿ ಸಂದಿಗ್ಧವೇ ಆಗಿಲ್ಲ. ಹಾಗಾಗಿ ಇದನ್ನು ವಿಷಯವೆಂದು ಪರಿಗಣಿಸದೇ 'ಪ್ರಾಣ ಇತಿ ಹೋವಾಚ' ಎಂಬ ವಾಕ್ಯವನ್ನೇ ವಿಷಯವೆನ್ನಬೇಕೆಂದು ಪ್ರಾಣಾಧಿಕರಣದಲ್ಲಿ ಅದ್ವೈತಿಗಳಾದ ನೀವು ಸಮರ್ಥನೆ ಮಾಡಿದ್ದೀರಿ. ಇದು ಅಯುಕ್ತವಾಗಬೇಕಾದೀತು. ಏಕೆಂದರೆ 'ಪ್ರಾಣಬಂಧನಂ ಹಿ ಸೋಮ್ಯ ಮನಃ' ಎಂಬ ವಾಕ್ಯವನ್ನು ಬ್ರಹ್ಮಪ್ರಕರಣದಲ್ಲಿ ಇಲ್ಲವೆಂದು ಕೃತ್ವಾಚಿಂತೆಯನ್ನು ಮಾಡಿಯೇ ವಿಷಯವೆಂದು ಪರಿಗಣಿಸಬಹುದು. ಆದರೂ ಕೂಡ ನೀವು ಹಾಗೇ ಮಾಡದೇ ಬೇರೆಗತಿಯನ್ನು ತೋರಿಸಿದ್ದೀರಿ. ಅದರಂತೆ ಇಲ್ಲಿಯೂ ಕೂಡ ಕಾಠಕವಾಕ್ಯವೆಂಬ ಗತ್ಯಂತರವಿರುವಾಗ ಅಥರ್ವಣೋಪನಿಷತ್ತಿನಲ್ಲಿರುವ ವಾಕ್ಯವನ್ನು ಕೃತ್ವಾಚಿಂತೆಯ ಮೂಲಕ ವಿಷಯವೆಂದು ಪ್ರತಿಪಾದಿಸುವುದು ತಪ್ಪಾಗುತ್ತದೆ.

ಮತ್ತು ನೀವು ವಿಷಯವಾಕ್ಯವೆಂದು ಪರಿಗಣಿಸುವ ಆಥರ್ವರ್ಣೋಪನಿಷತ್ತಿನ ವಾಕ್ಯದ ಹಿಂದಿನ ವಾಕ್ಯದಲ್ಲಿ 'ವಿರಜಂ ಬ್ರಹ್ಮ ನಿಷ್ಕಲಮ್' ಎಂಬ ವಾಕ್ಯವಿದೆ. ಮುಂದೆ 'ಬ್ರಹ್ಮೈವೇದಮಮೃತಂ ಪುರಸ್ತಾತ್' ಎಂದಿದೆ. ಹೀಗೆ ಬ್ರಹ್ಮಶ್ರುತಿಲಿಂಗಗಳೆಲ್ಲವೂ ಹಿಂದಿನ-ಮುಂದಿನ ವಾಕ್ಯಗಳಲ್ಲಿ ಅತ್ಯಂತ ಸ್ಪಷ್ಟವಾಗಿರುವಾಗ ನಮ್ಮ ಪಕ್ಷದಂತೆ ದೃಢವಾದ ಪೂರ್ವಪಕ್ಷಕ್ಕೆ ಕಾರಣವನ್ನೇ ನಿಮಗೆ ಸಮರ್ಥಿಸಲಾಗದು. ಆದ್ದರಿಂದ ಆಥರ್ವರ್ಣೋಪನಿಷತ್ತಿನ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವನ್ನು ನೋಡಿದಾಗ ಸಂಶಯವೇ ಹುಟ್ಟುವುದಿಲ್ಲ. ಆದ್ದರಿಂದ ವಿಷಯವಾಕ್ಯವೂ ಕೂಡ ಆಗುವುದಿಲ್ಲ.

ಮತ್ತು ಅದ್ವೈತಿಗಳ ಮತದಲ್ಲಿ ಬ್ರಹ್ಮನು ಜ್ಞಾನಸ್ವರೂಪನಾಗಿದ್ದಾನೆ. ಭಾನರೂಪನಾದ ಬ್ರಹ್ಮನಲ್ಲಿ 'ಭಾಂತಮ್' ಎಂಬ ಶತೃಂತ ಶಬ್ದಪ್ರಯೋಗವೇ ತಪ್ಪಾಗುತ್ತದೆ. ಏಕೆಂದರೆ ಕರ್ತ್ರರ್ಥದಲ್ಲಿ ಶತೃ ಪ್ರತ್ಯಯವು ಬಂದು 'ಭಾಂತಮ್' ಎಂಬ ರೂಪವು ಸಿದ್ಧವಾಗಿದೆ. ಭಾನಸ್ವರೂಪನಾದ ಬ್ರಹ್ಮನು ಭಾನಕರ್ತೃವಾಗಲು ಸಾಧ್ಯವಿಲ್ಲ. ಮತ್ತು 'ತಸ್ಯಭಾಸಾ' ಎಂಬ ಷಷ್ಠೀಪ್ರಯೋಗವೂ ಕೂಡ ತಪ್ಪಾಗುತ್ತದೆ. ಭಾನಸ್ವರೂಪನಾದ ಬ್ರಹ್ಮನನ್ನು ಕುರಿತು ಅವನ ಕಾಂತಿಯಿಂದ ಎಂದು ಅರ್ಥವನ್ನು ಹೇಳಲಾಗದು.

ಮತ್ತು 'ಧಾವಂತಮನುಧಾವತಿ' ಎಂದು ಹೇಳಿದಾಗ ಓಡುವಂತಹ ಕಳ್ಳನನ್ನು ಅನುಸರಿಸಿ, ಆರಕ್ಷಕನು ಹಿಂದೆ ಓಡುತ್ತಾನೆ ಎಂಬ ಪ್ರಯೋಗವಿದೆ. ಹೀಗೆ ಎಲ್ಲಿ 'ಅನು' ಎಂಬ ಉಪಸರ್ಗ ಇರುತ್ತದೋ, ಅಲ್ಲಿ ಕ್ರಿಯಾಭೇದವು ನಿಯಮೇನ ಇದ್ದೇ ಇರುತ್ತದೆ. ಅಂದರೆ ಇಬ್ಬರು ಓಡುವವರಿದ್ದು, ಇಬ್ಬರ ಕ್ರಿಯೆಯೂ ಭಿನ್ನವಾಗಿರುತ್ತದೆ. ಅದರಂತೆ ಪ್ರಕೃತದಲ್ಲಿ 'ಭಾಂತಮ್ ಅನುಭಾತಿ' ಎಂಬ ಶ್ರುತಿಯಲ್ಲಿ 'ಅನು' ಎಂಬ ಉಪಸರ್ಗ ಮೂಲಕವಾಗಿ ಭಾನಕ್ರಿಯೆಯನ್ನು ಹೇಳಲಾಗಿದೆ. ಅಂದರೆ ಎರಡು ಪ್ರಕಾಶಗಳಿದ್ದಲ್ಲಿ ಮಾತ್ರ ಈ ಪ್ರಯೋಗವು ಸಾಧುವಾಗುತ್ತದೆ ಹೊರತು, ಒಂದೇ ಪ್ರಕಾಶವಿದ್ದರೆ ಸಾಧುವಾಗುವುದಿಲ್ಲ. ಬ್ರಹ್ಮನ ಪ್ರಕಾಶವೇ ಬೇರೆ, ಸೂರ್ಯಾದಿಗಳ ಪ್ರಕಾಶವೇ ಬೇರೆಯಾಗಿದ್ದಲ್ಲಿ, ಪ್ರಯೋಗವನ್ನು ಕೂಡಿಸಬಹುದು. ಆದರೆ ನಿಮ್ಮ ಪ್ರಕಾರ ಬ್ರಹ್ಮಭಾನಕ್ಕಿಂತ ಅತಿರಿಕ್ತವಾದ ಭಾನವೇ ಇಲ್ಲದ ಕಾರಣ 'ಅನು' ಶಬ್ದವು ಅಯುಕ್ತವಾಗುತ್ತದೆ.

ವಸ್ತುತಃ ಬ್ರಹ್ಮಭಾನಕ್ಕಿಂತ ಜಗತ್ತಿನಭಾನವು ಭಿನ್ನವಲ್ಲ. ಆದರೂ ಸಹ ಆರೋಪಿತವಾದ ಭೇದದಿಂದ 'ಅನು' ಎಂಬ ಶಬ್ದವನ್ನು ಪ್ರಯೋಗ ಮಾಡಬಹುದಲ್ಲವೇ? ಉದಾ : 'ವಹ್ನಿಂ ದಹಂತಮಯೋऽನುದಹತಿ' ಸುಡುವ ಬೆಂಕಿಯನ್ನು ಅನುಸರಿಸಿ, ಕಬ್ಬಿಣವು ಸುಡುತ್ತದೆ ಎಂಬ ಪ್ರಯೋಗವಿದೆ. ಇಲ್ಲಿ ಸುಡುವಿಕೆಯು ಬೆಂಕಿಯಲ್ಲಿ ಮಾತ್ರವಿದ್ದರೂ 'ಅಯಃ ಅನುದಹತಿ' ಎಂದು 'ಅನು' ಶಬ್ದದ ಪ್ರಯೋಗವಿದೆ. ಇಲ್ಲಿ ಅಯಸ್ಸಿನಲ್ಲಿರುವ ದಾಹಕ್ಕೂ, ಬೆಂಕಿಯಲ್ಲಿರುವ ದಾಹಕ್ಕೂ ಭೇದವಿಲ್ಲದಿದ್ದರೂ ಆರೋಪಿತವಾದ ಭೇದವನ್ನು ವಿವಕ್ಷಿಸಿ, 'ಅನುದಹತಿ' ಎಂಬ ಪ್ರಯೋಗ ಮಾಡುವಂತೆ ಪ್ರಕೃತಿಯಲ್ಲಿಯೂ 'ಭಾಂತಮ್ ಅನುಭಾತಿ' ಎಂಬ ಶ್ರೌತ ಪ್ರಯೋಗವನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಸಿದ್ಧವಾದ ಪ್ರಯೋಗವನ್ನು ಆರೋಪಿತ ವಿಷಯಕವೆಂದು ಹೇಳಬಾರದು. ಹಾಗೇ ಹೇಳಿದರೆ ಶ್ರುತಿಗೆ ಅಪ್ರಾಮಾಣ್ಯ ದೋಷವನ್ನು ಒಪ್ಪಿದಂತಾಗುತ್ತದೆ.

ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ 'ನ ತದ್ಭಾಸಯತೇ ಸೂರ್ಯಃ' ಎಂದು, ಮತ್ತು 'ಯದಾದಿತ್ಯಗತಮ್ ತೇಜಃ' ಎಂಬ ಗೀತಾವಾಕ್ಯಗಳನ್ನು ವಿಷಯವೆಂದು ನೀವೂ ಕೂಡ ಹೇಳುತ್ತೀರಿ. 'ನ ತದ್ಭಾಸಯತೇ ಸೂರ್ಯಃ' ಎಂಬ ಗೀತಾವಾಕ್ಯದಲ್ಲಿ ಬ್ರಹ್ಮನಿಗೆ ಸೂರ್ಯಾದ್ಯಭಾಸ್ಯತ್ವವು ಹೇಳಲ್ಪಟ್ಟಿದೆ. 'ಯದಾದಿತ್ಯಗತಂ ತೇಜಃ' ಎಂಬ ವಾಕ್ಯದಲ್ಲಿ

ಸೂರ್ಯಾದಿ ತೇಜಸ್ಸುಗಳಿಗೆ ಭಗವದಧೀನತ್ವವು ಹೇಳಲ್ಪಟ್ಟಿದೆ. ಆದರೆ ನೀನು ವ್ಯಾಖ್ಯಾನ ಮಾಡುವಂತೆ ಬ್ರಹ್ಮನು ಜ್ಞಾನಾಂತರದಿಂದ ವೇದ್ಯವಲ್ಲವೆಂದಾಗಲೀ, ಅಥವಾ ಅಸ್ಮದಾದಿ ಸಂಬಂಧಿಯಾದ ಘಟಾದಿ ಜ್ಞಾನವು ಬ್ರಹ್ಮರೂಪವಾಗಿದೆಯೆಂದಾಗಲೀ, ಈ ವಾಕ್ಯದಲ್ಲಿ ಹೇಳುತ್ತಿಲ್ಲ. ಆದ್ದರಿಂದ ಯಾವ ಉದ್ದೇಶಕ್ಕೋಸ್ಕರ ಗೀತಾವಾಕ್ಯಗಳನ್ನು ವಿಷಯವೆಂದು ಹೇಳುತ್ತಿದ್ದೀರೋ, ಅದು ವ್ಯಧಿಕರಣವಾಗಿದೆ.

ರಾಮಾನುಜರ ವ್ಯಾಖ್ಯಾನ ಹೀಗಿದೆ - ಇವರು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಿಂದ ಪ್ರತ್ಯೇಕ ಅಧಿಕರಣವೆಂದು ಹೇಳದೆ, ಹಿಂದಿನ ಸೂತ್ರಕ್ಕೆ ಶೇಷವೆಂದು ಹೇಳುತ್ತಾರೆ. ಛಾಂದೋಗ್ಯದ ಮುಂದಿನ ಪ್ರಜಾಪತಿ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿ ರೂಪದಿಂದ, ಜೀವನನ್ನು ಪ್ರತಿಪಾದನೆ ಮಾಡಲಾಗಿದೆ. ಏಕೆಂದರೆ ಆ ವಾಕ್ಯದಲ್ಲಿ ಕರ್ಮಾದಿಗಳಿಂದ ತಿರೋಹಿತವಾದ ಅಪಹತಪಾಪ್ಮತ್ವಾದಿ ಗುಣಗಳ ಆವಿರ್ಭಾವವನ್ನು ಹೇಳಿದ್ದರಿಂದ ಜೀವನೇ ಮುಂದಿನ ಪ್ರಜಾಪತಿ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆ.

ಹಿಂದಿನ 'ದಹರ' ವಾಕ್ಯದಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ ಆ ವಾಕ್ಯದಲ್ಲಿ ಅತಿರೋಹಿತವಾದ ಸ್ವಾಭಾವಿಕವಾದ ಅಪಹತಪಾಪ್ಮತ್ವಾದಿ ಗುಣಗಳನ್ನು ಹೇಳಲಾಗಿದೆ. ಸ್ವಾಭಾವಿಕವಾದ ಗುಣಗಳು ಬ್ರಹ್ಮನಲ್ಲಿ ಮಾತ್ರ ಬರುವುದರಿಂದ, 'ದಹರ' ವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗುತ್ತಾನೆ.

ಹೀಗೆ 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವ ರಾಮಾನುಜರು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವನ್ನು ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರವನ್ನು ಅದಕ್ಕೆ ಪೂರಕವಾಗಿಯೇ ವ್ಯಾಖ್ಯಾನಿಸುತ್ತಾರೆ. ಅಂದರೆ ಬ್ರಹ್ಮನ ಅನುಕರಣದ ಸಾದೃಶ್ಯದಿಂದ ಮತ್ತು ''ಮಮ ಸಾಧರ್ಮ್ಯಮಾಗತಾಃ'' ಎಂಬ ಸ್ಮೃತಿ ಪ್ರಮಾಣದಿಂದ ಪ್ರಜಾಪತಿ ವಾಕ್ಯಪ್ರತಿಪಾದ್ಯನಾದವನು ಜೀವನಾಗಿದ್ದಾನೆ. ಹಾಗೂ 'ದಹರ' ವಾಕ್ಯಪ್ರತಿಪಾದ್ಯನಾದವನು ಬ್ರಹ್ಮನಾಗಿದ್ದಾನೆಂದು ಹಿಂದಿನ ದಹರಾಧಿಕರಣಕ್ಕೆ ಅಂಗಭೂತವಾಗಿ ಈ ಸೂತ್ರಗಳನ್ನು ವ್ಯಾಖ್ಯಾನಿಸಿದ್ದಾರೆ.

ರಾಮಾನುಜರ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ದಹರವಾಕ್ಯದಲ್ಲಿ 'ಯ ಆತ್ಮಾsಪಹತಪಾಪ್ಮಾ' 'ವಿಜರೋ ವಿಮೃತ್ಯುಃ' ಇತ್ಯಾದಿ ವಾಕ್ಯಗಳು ಹೇಗಿವೆಯೋ, ಅದೇ

ತರಹ ಪ್ರಜಾಪತಿವಾಕ್ಯದಲ್ಲಿಯೂ ಕೂಡ ಅಪಹತಪಾಪ್ಮತ್ವಾದಿ ವಾಕ್ಯಗಳು ಶ್ರುತವಾಗಿವೆ. ಹೊರತು, ನೀವು ಹೇಳುವಂತೆ ಅಪಹತಪಾಪ್ಮತ್ವಾದಿಗಳ ಪ್ರಾದುರ್ಭಾವವನ್ನು ಹೇಳಿಯೇ ಇಲ್ಲ. 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯಶೇಷದಿಂದ ಅಪಹತಪಾಪ್ಮತ್ವಾದಿಗಳ ಆವಿರ್ಭಾವವು ಪ್ರಜಾಪತಿವಾಕ್ಯದಲ್ಲಿ ಇದೆಯಲ್ಲವೇ? ಎಂದರೆ, ಇದೇ ತರಹದ ವಾಕ್ಯವು 'ದಹರ' ವಾಕ್ಯದಲ್ಲಿಯೂ ಇರುತ್ತದೆ. ಆದ್ದರಿಂದ ದಹರವಾಕ್ಯಕ್ಕಿಂತ ವೈಲಕ್ಷಣ್ಯವನ್ನು ತೋರಿಸಲು ಸಾಧ್ಯವಿಲ್ಲ.

ದಹರವಾಕ್ಯವು ಹೇಳಲ್ಪಟ್ಟ ಜೀವಸ್ವರೂಪವನ್ನು ಬ್ರಹ್ಮನು ಅಭಿನಿಷ್ಪಾದನೆ ಮಾಡುತ್ತಾನೆಂದು ಹೇಳುವುದರಲ್ಲಿ ತಾತ್ಪರ್ಯವನ್ನು ಹೊಂದಿದೆ. ಇದರಿಂದ ಬ್ರಹ್ಮನ ಗುಣವನ್ನು ಹೇಳುವುದಕ್ಕಾಗಿಯೇ ಜೀವಸ್ವರೂಪದ ಆವಿರ್ಭಾವವನ್ನು ದಹರವಾಕ್ಯವು ಹೇಳುತ್ತಿದೆಯೆಂದು ಉತ್ತರಿಸಿದರೆ; ಪ್ರಜಾಪತಿವಾಕ್ಯದಲ್ಲಿಯೂ ಇದು ಸಮಾನ. ಅಲ್ಲಿಯೂ ಕೂಡ ಜೀವಸ್ವರೂಪದ ಅಭಿನಿಷ್ಪಾದಕತ್ವ ಧರ್ಮವನ್ನು ಬ್ರಹ್ಮನಲ್ಲಿ ಹೇಳುವುದಕ್ಕಾಗಿಯೇ ಆವಿರ್ಭಾವವನ್ನು ಹೇಳಿದ್ದಾರೆಂದು ವ್ಯಾಖ್ಯಾನಿಸಬಹುದು. ಹೀಗಿರುವಾಗ ಯಾವ ವೈಷಮ್ಯವನ್ನು ವಿವಕ್ಷಿಸಿ ದಹರವಾಕ್ಯವು ಬ್ರಹ್ಮಪರವೆಂದು, ಪ್ರಜಾಪತಿ ವಾಕ್ಯವು ಜೀವಪರವೆಂದು ನೀವು ವ್ಯಾಖ್ಯಾನಿಸುತ್ತೀರಿ.

ದಹರ ವಾಕ್ಯದಿಂದ ಪ್ರತಿಪಾದ್ಯನಾದ ಬ್ರಹ್ಮನೇ ಪ್ರಜಾಪತಿವಾಕ್ಯದಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆನ್ನಲು ಮತ್ತೊಂದು ಕಾರಣ ಹೀಗಿದೆ - ಅಪಹತಪಾಪ್ಮತ್ವಾದಿ ಗುಣವುಳ್ಳ ಆತ್ಮನ ಬಗ್ಗೆ ಇಂದ್ರ ದೇವರು ಪುನಃ ಪುನಃ ಪ್ರಶ್ನಿಸುತ್ತಾರೆ. ಆವಾಗ ಚತುರ್ಮುಖಬ್ರಹ್ಮದೇವರು ಆತ್ಮನ ವಿಷಯದಲ್ಲಿ ಹೀಗೆ ಉಪದೇಶ ಮಾಡುತ್ತಾರೆ - 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಚಕ್ಷುರಿಂದ್ರಿಯದಲ್ಲಿರುವ ಪುರುಷನೇ 'ಆತ್ಮಾ' ಎನಿಸಿದ್ದಾನೆ ಎಂದು. 'ಯ ಏಷ ಸ್ವಪ್ನೇ ಮಹಿಮಾನಶ್ಚರತ್ಯೇಷ ಆತ್ಮಾ' ಯಾವಾತನು ಸ್ವಪ್ನದಲ್ಲಿ ಅತ್ಯಂತ ಮಹಿಮೋಪೇತನಾಗಿ ಸಂಚಾರ ಮಾಡುತ್ತಾನೋ, ಅವನೇ ಆತ್ಮನು ಎಂದು. 'ಯತ್ರೈತತ್‌ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ' ಯಾವ ವಿಷಯದಲ್ಲಿ ಸುಪ್ತನು ಆಲಿಂಗಿತನಾಗಿರುತ್ತಾನೋ, ಅತ್ಯಂತ ಪ್ರಸನ್ನ ಮನಸ್ಕನಾಗಿರುತ್ತಾನೋ, ಸ್ವಪ್ನವನ್ನೂ ಕೂಡ ಕಾಣಲಾರನೋ ಅಂತಹ ಜೀವನಿಗೆ ಅಧಿಷ್ಠಾನಭೂತನಾದವನೇ ಆತ್ಮನು ಎಂದು ಮತ್ತು 'ತದಸ್ಯಾಮೃತಸ್ಯಾ-

ಶರೀರಸ್ಯಾತ್ಮನೋಽಧಿಷ್ಠಾನಮ್' ಅಮೃತಸ್ವರೂಪನಾದ ಅಶರೀರಿಯಾದ ಆತ್ಮನಿಗೆ ಅಧಿಷ್ಠಾನನಾಗಿದ್ದಾನೆ. ಹೀಗೆ ಅನೇಕ ಮಾತುಗಳಿಂದ ಆತ್ಮನ ಬಗ್ಗೆ ಉಪದೇಶ ಮಾಡಿದ್ದಾರೆ.

ಈ ಉಪದೇಶ ವಾಕ್ಯಗಳಲ್ಲಿ ಪ್ರಥಮಶ್ರುತವಾದ ಅಕ್ಷಿವಾಕ್ಯವು ಬ್ರಹ್ಮವಿಷಯಕವೇ ಆಗಿದೆ. 'ಅಂತಸ್ತದ್ಧರ್ಮೋಪದೇಶಾತ್' 'ಅಂತರ ಉಪಪತ್ತೇಃ' ಇತ್ಯಾದಿ ಸೂತ್ರಗಳಿಂದ ನಿರ್ಣೀತನಾದ ಬ್ರಹ್ಮನೇ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಶ್ರುತ್ಯಂತರದಿಂದಲೂ ಪ್ರತಿಪಾದ್ಯನಾದವನು. ಅಂತಹ ಬ್ರಹ್ಮನೇ ಇಲ್ಲಿ ಪ್ರತ್ಯಭಿಜ್ಞಾಕ್ಕೆ ವಿಷಯನಾಗಿದ್ದಾನೆ. ಜೀವನು ಹೃದಯದಲ್ಲಿರುವುದರಿಂದ ಕಣ್ಣಿನಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ ಈ ಅಕ್ಷಿವಾಕ್ಯವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆ.

'ಸ್ವಾಪ್ನ' ವಾಕ್ಯವೂ ಕೂಡ ಬ್ರಹ್ಮವಿಷಯಕವೇ ಆಗಿದೆ. ಏಕೆಂದರೆ 'ಸ್ವಪ್ನೇನ ಶಾರೀರಮಭಿ-ಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಸ್ವಪ್ನಕಾಲದಲ್ಲಿ ಶಾರೀರನಾದ ಜೀವನನ್ನು ಹೊಂದಿ, ಸುಪ್ತರಾದ ಜೀವರನ್ನೆಲ್ಲಾ ನೋಡುತ್ತಾನೆ. ಹೀಗೆ ಶ್ರುತ್ಯಂತರ ಬಲದಿಂದ, ಸ್ವಪ್ನನಿಯಾಮಕನಾದ ಪರಮಾತ್ಮನೇ 'ಯ ಏಷಃ ಸ್ವಪ್ನ' ಎಂಬ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಏಕೆಂದರೆ ಮಹೀಯಮಾನತ್ವಲಿಂಗವು ಎರಡೂ ಕಡೆ ಶ್ರುತವಾಗಿರುವುದರಿಂದ.

ಸುಪ್ತವಾಕ್ಯವೂ ಕೂಡ ಬ್ರಹ್ಮಪ್ರತಿಪಾದಕವೇ ಆಗಿದೆ. ಏಕೆಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಇತ್ಯಾದಿ ಶ್ರುತಿಯು ಸುಷುಪ್ತ್ಯವಸ್ಥಾ ಪ್ರೇರಕನಾದವನು ಬ್ರಹ್ಮನೆಂದೇ ಹೇಳಿದೆ. ಆದರ ಬಲದಿಂದ 'ಯತ್ರೈತತ್ಸುಪ್ತಃ' ಎಂಬ ವಾಕ್ಯವೂ ಕೂಡ ಬ್ರಹ್ಮಪ್ರತಿಪಾದಕವೇ ಆಗುತ್ತದೆ. ಏಕೆಂದರೆ 'ಯತ್ರ ಸುಪ್ತಃ' ಎಂಬಲ್ಲಿರುವ 'ಯತ್' ಶಬ್ದದಿಂದ ಪ್ರತಿಪಾದ್ಯನಾದವನೇ ಸಕಲವಿಧ ಸುಪ್ತಜೀವರಿಗೆ ಆಧಾರನಾಗಿದ್ದಾನೆ. ಅವನನ್ನೇ 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲಾಗಿದೆ.

ಬ್ರಹ್ಮದೇವರಿಂದ ಉಪದೇಶಿಸಲ್ಪಟ್ಟ ಅಶರೀರವಾಕ್ಯವೂ ಕೂಡ ಪರಮಾತ್ಮನನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಅಶರೀರ ಶಬ್ದಕ್ಕೆ ನಿರಪೇಕ್ಷಿತವಾದ ಸಾರ್ವಕಾಲಿಕವಾದ ಶರೀರರಾಹಿತ್ಯ ಎಂಬ ಸಹಜವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಸಾಪೇಕ್ಷಿತವಾದ ತಾತ್ಕಾಲಿಕವಾದ ಶರೀರರಾಹಿತ್ಯದಿಂದ ಜೀವನೆಂಬ ಅರ್ಥವನ್ನು ವಿವಕ್ಷಿಸುವುದು ತಪ್ಪಾಗುತ್ತದೆ. ನಿರಪೇಕ್ಷಿತವಾದ ಸಾರ್ವಕಾಲಿಕವಾದ ಶರೀರರಾಹಿತ್ಯವು ಈಶ್ವರನಲ್ಲಷ್ಟೇ ಉಪಪನ್ನವಾಗುತ್ತದೆ.

ಮತ್ತು ಅಕ್ಷ್ಯಾದಿ ವಾಕ್ಯಗಳ ನಡುವೆ ಪ್ರತಿವಾಕ್ಯಗಳಲ್ಲಿಯೂ 'ಏಷ ಆತ್ಮೇತಿ ಹೋವಾಚ' 'ಏತದಮೃತಮಭಯಮೇತದ್ ಬ್ರಹ್ಮ' ಎಂಬುದಾಗಿ ಅಮೃತತ್ವ-ಅಭಯತ್ವಾದಿಲಿಂಗಗಳನ್ನು ಹೇಳಿರುವುದರಿಂದ ಇವೆಲ್ಲವೂ ಜೀವವಿಷಯಕವಾಗಲು ಹೇಗೆ ಸಾಧ್ಯ ?

ಮತ್ತು ಪ್ರಜಾಪತಿ ವಾಕ್ಯದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಎಂದಿದೆ. ಪ್ರಸಿದ್ಧಾರ್ಥವಾದ ಪ್ರಕೃತವಾದದ್ದನ್ನು ಪರಾಮರ್ಶಿಸುವ ಇಲ್ಲಿರುವ 'ಯಃ' ಎಂಬ ಸರ್ವನಾಮಶಬ್ದದಿಂದ 'ಏಷ ಆತ್ಮಾ ಅಪಹತಪಾಪ್ಮಾ' ಎಂಬಲ್ಲಿ ಪ್ರಸ್ತುತವಾದ ದಹರವಾಕ್ಯದಲ್ಲಿ ಪ್ರಸಿದ್ಧನಾದ ಈಶ್ವರನನ್ನು ಪರಾಮರ್ಶೆ ಮಾಡುವುದೇ ಯುಕ್ತವಾಗುತ್ತದೆ.

ಮತ್ತು 'ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬುದಾಗಿ ಯಾವ ದಹರವಾಕ್ಯದಲ್ಲಿ ದಹರನ ತಿಳುವಳಿಕೆಯಿಂದ ಯಾವ ಮೋಕ್ಷವೆಂಬ ಫಲವನ್ನು ಹೇಳಲಾಗಿದೆಯೋ, ಅದೇ ಮೋಕ್ಷ ಫಲವನ್ನು 'ತೇಷಾಂ ಸರ್ವೇ ಲೋಕಾ ಆಪ್ತಾಃ' ಎಂಬ ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ.

ಅದರಂತೆ ದಹರವಾಕ್ಯದಲ್ಲಿ 'ತಸ್ಮಿನ್ಯದಂತಃ ತದನ್ವೇಷ್ಟವ್ಯಮ್' ಎಂದು ಯಾವ ದಹರನಲ್ಲಿ ಅನ್ವೇಷಣ ವಿಷಯತ್ವವು ಶ್ರುತವಾಗಿದೆಯೋ, ಅವನಿಗೇ ಪ್ರಜಾಪತಿವಾಕ್ಯದಲ್ಲಿ 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಎಂಬುದಾಗಿ ಅನ್ವೇಷಣವಿಷಯತ್ವವು ಶ್ರುತವಾಗಿದೆ.

'ಇಂದ್ರೋ ವಿರೋಚನಶ್ಚೈವ ಶ್ರುತ್ವಾ ತಂ ಬ್ರಹ್ಮಣೋಽಕ್ಷಿಗಮ್ । ವಿಷ್ಣುಮಾನಂದ-ರೂಪೇತಮ್' ಇತ್ಯಾದಿ ಸ್ಮೃತಿಯೂ ಕೂಡ ದಹರ ಬ್ರಹ್ಮನೇ ಪ್ರಜಾಪತಿವಾಕ್ಯದಿಂದಲೂ ಪ್ರತಿಪಾದ್ಯನಾಗಿದ್ದಾನೆನ್ನಲು ಪ್ರಮಾಣವಾಗಿದೆ. ಆದ್ದರಿಂದ ದಹರವಾಕ್ಯವು ಬ್ರಹ್ಮಪರವಾಗಿದೆ. ಪ್ರಜಾಪತಿ ವಾಕ್ಯವು ಜೀವಪರವಾಗಿದೆಯೆಂಬ ರಾಮಾನುಜರ ನಿಲುವು ಅತ್ಯಂತ ಅಸಾಧುವಾಗಿದೆ.

ರಾಮಾನುಜರ ಸೂತ್ರವ್ಯಾಖ್ಯಾನವು ಕೂಡ ಸರಿಯಿಲ್ಲ. ಏಕೆಂದರೆ 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರದಲ್ಲಿ ಮುಕ್ತನಾದ ಜೀವನಿಗೆ ಅಪಹತಪಾಪ್ಮತ್ವಾದಿ ರೂಪದಿಂದ ಈಶ್ವರನ ಜೊತೆಗಿರುವ ಸಾಮ್ಯವನ್ನು ಸಾಧಿಸಲಾಗಿದೆಯೋ, ಅಥವಾ ಅನ್ಯತ್ರಪ್ರಸಿದ್ಧವಾದ ಸಾಮ್ಯದಿಂದ ದಹರವಾಕ್ಯದಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನೆಂದು ಮತ್ತು ಪ್ರಜಾಪತಿವಾಕ್ಯದಲ್ಲಿ ಪ್ರತಿಪಾದ್ಯನಾದವನು ಜೀವನೆಂದು ಸಾಧನೆ ಮಾಡುತ್ತೀರೋ?

ಮೊದಲನೆಯ ಪಕ್ಷ ಸರಿಯಿಲ್ಲ. ಏಕೆಂದರೆ ಮುಕ್ತಜೀವರಿಗೆ ಈಶ್ವರನಿಂದ ಸಾಮ್ಯವಿದೆಯೆಂದು ನಾಲ್ಕನೆಯ ಅಧ್ಯಾಯಲ್ಲಿರುವ 'ಸಂಪದ್ಯಾವಿಹಾಯ' ಇತ್ಯಾದಿ ಸೂತ್ರದಲ್ಲಿ ಸಮರ್ಥಿಸಲಾಗುತ್ತದೆ. ಪುನಃ ಇಲ್ಲಿ ಅದರ ಸಾಧನೆಯು ಅನಾವಶ್ಯಕ. ಮತ್ತು ಸಮನ್ವಯಾಧ್ಯಾಯದಲ್ಲಿ ಈ ವಿಚಾರವು ಅಪ್ರಸ್ತುತ. ಮತ್ತು ಸೂತ್ರದಲ್ಲಿ 'ಅನುಕೃತೇಃ' ಎಂಬುದಾಗಿ ಸಾಮ್ಯವನ್ನು ಹೇತುವನ್ನಾಗಿ ಮಾಡಿರುವಾಗ ಅದನ್ನೇ ಸಾಧ್ಯವೆಂದು ಹೇಳುವುದು ತಪ್ಪಾಗುತ್ತದೆ.

ಎರಡನೆಯ ಪಕ್ಷವೂ ಕೂಡ ಸರಿಯಿಲ್ಲ. ಏಕೆಂದರೆ ಅನುಕೃತಿಯಿಂದಷ್ಟೇ ಹಿಂದಿನ ದಹರವಾಕ್ಯದಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನು. ಮುಂದಿನ ಪ್ರಜಾಪತಿವಾಕ್ಯದಲ್ಲಿ ಪ್ರತಿಪಾದ್ಯನಾದವನು ಜೀವನೆಂಬುದು ಸಿದ್ಧವಾಗುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣಶರೀರ ಹಾಗೂ ಸೂತ್ರಾರ್ಥಗಳು ಅತ್ಯಂತ ಅಸಾಧುವಾಗಿದೆ. ಹಿಂದಿನ ಅಧಿಕರಣದ ಜೊತೆಗೇ ಈ ಎರಡು ಸೂತ್ರಗಳು ಸೇರಿವೆ ಎಂಬ ವಿಚಾರಗಳೂ ಕೂಡ ಅಸಾಧುವಾಗಿದೆ.

**ಇಲ್ಲಿಗೆ ಅನುಕೃತ್ಯಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ವಾಮನಾಧಿಕರಣ

## ಬ್ರಹ್ಮಸೂತ್ರ , ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಭಾವದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ವಾಮನಾಧಿಕರಣ

## ।। अथ वामनाधिकरणम् ।।

## ಬ್ರಹ್ಮಸೂತ್ರ

'ಶಬ್ದಾದೇವ ಪ್ರಮಿತಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। अथ वामनाधिकरणम् ।।**

**।। शब्दादेव प्रमितः।। २४ ।।**

ಸೂತ್ರಾರ್ಥ - 'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕ ಶ್ರುತಿಯಲ್ಲಿ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ ಹೊರತು ವಾಯುದೇವರಲ್ಲ. ಏಕೆಂದರೆ 'ಮಧ್ಯೇ ವಾಮನಮ್' ಇತ್ಯಾದಿಯಾದ ನಿರವಕಾಶ ವಾಮನಶ್ರುತಿ ಇರುವುದರಿಂದ .

ಅರ್ಥ -- ಪ್ರಮಿತಃ = 'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕದಲ್ಲಿರುವ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಪ್ರಮಾಣ ಸಿದ್ಧವಾಗಿದೆ. ಹೊರತು ವಾಯುದೇವರಲ್ಲ. ಏಕೆಂದರೆ ಶಬ್ದಾದೇವ = 'ಮಧ್ಯೇ ವಾಮನಂ' ಎಂಬುದಾಗಿ ಮುಂದಿನ ಶ್ರುತಿಯಲ್ಲಿ ನಿರವಕಾಶವಾದ ವಾಮನಶ್ರುತಿ ಇರುವುದರಿಂದ. ಹೃದ್ಯಪೇಕ್ಷಯಾತುಮನುಷ್ಯಾಧಿಕಾರತ್ವಾತ್' ಹೃದಯದಲ್ಲಿರುವ ಅವಕಾಶಕೇವಲ ಅಂಗುಷ್ಠದಷ್ಟು. ಈ ದೃಷ್ಟಿಯಿಂದಲೇ ವಿಷ್ಣುವಿಗೆ ಅಂಗುಷ್ಠಪರಿಮಾಣವು ಹೇಳಲ್ಪಟ್ಟಿದೆ. ಅಂಗುಷ್ಠಮಾತ್ರ ಉಪಾಸನೆ ಎಂಬ ವಿದ್ಯೆಗೆ ಅಧಿಕಾರಿಗಳಾದವರು ಮನುಷ್ಯರು ಮಾತ್ರ, ಆದ್ದರಿಂದ ಪಶುಗಳಿಗೆ ಅಂಗುಷ್ಠಪರಿಮಾಣವಿಲ್ಲದಿದ್ದರೂ ಬಾಧಕವಿಲ್ಲ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ವಾಮನಶಬ್ದದಿಂದ ಈಶಾನ ಶಬ್ದದ ಸಮನ್ವಯ

**ब्रह्मसूत्रभाष्यम् – विष्णुरेव जिज्ञास्य इत्युक्तम् । तत्र**
**'ऊर्ध्वं प्राणमुन्नयत्यपानं प्रत्यगस्यति ।**
**मध्ये वामनमासीनं विश्वेदेवा उपासते ॥' (कठ.५.३)**
**इति सर्वदेवोपास्यः कश्चित् प्रतीयते ।**

ಅನುವಾದ - ಈ ಅಧಿಕರಣದಲ್ಲಿ 'ಈಶಾನ' ಎಂಬ ಶಬ್ದದ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಿದ್ದಾರೆ. ॥ ಅಥಾತೋ ಬ್ರಹ್ಮಜಿಜ್ಞಾಸಾ ॥ ಎಂಬ ಮೊದಲನೆಯ ಸೂತ್ರದಲ್ಲಿ ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕೆಂದು ಸಾಧಿಸಲಾಯಿತು. ಆದರೆ ಕಾಠಕಶ್ರುತಿಯಲ್ಲಿ 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯಗಳಿಂದ ಮತ್ತೊಬ್ಬನಲ್ಲಿ ಜಿಜ್ಞಾಸ್ಯತ್ವವನ್ನು ಹೇಳಲಾಗಿದೆ. ಯಾವಾತನು ಪ್ರಾಣನನ್ನು ಮೇಲಕ್ಕೆ ತರುತ್ತಾನೋ, ಅಪಾನವಾಯುವನ್ನು ಕೆಳಗೆ ತಳ್ಳುತ್ತಾನೋ, ಹೃದಯಮಧ್ಯದಲ್ಲಿ ನೆಲೆಸಿರುವ ಇಂತಹ ಸುಂದರನನ್ನು ಸಮಸ್ತ ದೇವತೆಗಳೂ ಉಪಾಸನೆ ಮಾಡುತ್ತಾರೆ ಎಂಬುದಾಗಿ 'ಸರ್ವದೇವೋಪಾಸ್ಯತ್ವ' ಎಂಬ ಧರ್ಮವನ್ನು ಹೊಂದಿರುವ ಮತ್ತೊಬ್ಬ ಯಾವುದೋ ವ್ಯಕ್ತಿಯಲ್ಲಿ ಜಿಜ್ಞಾಸ್ಯತ್ವವು ಶ್ರುತವಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ, 'ಈಶಾನ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗಿದೆ. ಶ್ರುತ್ಯಾದಿಸಂಗತಿ, ವಿಷಯ, ಸಂಶಯಗಳನ್ನು ಮೊದಲು ತೋರಿಸುತ್ತಿದ್ದಾರೆ.

ವಿಷ್ಣುರೇವ = ವಿಷ್ಣುವೇ, ಜಿಜ್ಞಾಸ್ಯಃ = ಜಿಜ್ಞಾಸೆಗೆ ವಿಷಯನಾಗಿದ್ದಾನೆ, ಇತಿ = ಹೀಗೆ, ಉಕ್ತಂ = ಜಿಜ್ಞಾಸಾಧಿಕರಣದಲ್ಲಿ ಹೇಳಲಾಯಿತು, ತತ್ರ = ಆ ಜಿಜ್ಞಾಸಾವಿಷಯದಲ್ಲಿ, ಕಾಠಕವು, ಪ್ರಾಣಮ್ = ಪ್ರಾಣನನ್ನು, ಊರ್ಧ್ವಮ್ = ಮೇಲ್ಮುಖವಾಗಿ, ಉನ್ನಯತಿ = ತರುತ್ತಾನೆ, ಅಪಾನಂ = ಅಪಾನವಾಯುವನ್ನು, ಪ್ರತ್ಯಗಸ್ಯತಿ = ಕೆಳಮುಖನನ್ನಾಗಿ ನಿಯಂತ್ರಿಸುತ್ತಾನೆ, ಮಧ್ಯೇ = ಹೃದಯ ಮಧ್ಯದಲ್ಲಿದ್ದು, ಆಸೀನಮ್ = ಕುಳಿತಿರುವ,

ವಾಮನಂ = ಸುಂದರನಾದ ಇವನನ್ನು, ವಿಶ್ವೇದೇವಾಃ = ಸಮಸ್ತ-ದೇವತೆಗಳು, ಉಪಾಸತೇ = ಉಪಾಸಿಸುತ್ತಾರೆ, ಇತಿ = ಹೀಗೆ, ಸರ್ವದೇವೋಪಾಸ್ಯಃ = ಸಕಲದೇವತೆಗಳಿಂದ ಉಪಾಸ್ಯನಾದವನು, ಕಶ್ಚಿತ್ = ಒಬ್ಬ, ಪ್ರತೀಯತೇ = ತೋರುತ್ತಿದ್ದಾನೆ.

ಮುಖ್ಯಪ್ರಾಣನೇ ವಾಮನಶಬ್ದ ಪ್ರತಿಪಾದ್ಯನಾದ್ದರಿಂದ ಜಿಜ್ಞಾಸ್ಯನೆಂದು ಪೂರ್ವಪಕ್ಷ

**ब्रह्मसूत्रभाष्यम् — स च 'एवमेवैष प्राण इतरान् प्राणान् पृथक् पृथगेव सन्निधत्ते' (प्रश्न. ३४.) 'योऽयं मध्यमः प्राणः' (बृ. ३-५-२१.) 'कुविदङ्ग' (ऋ. ७-९-११.) इत्यादिना प्राणव्यवस्थापकत्वा-न्मध्यमत्वात् सर्वदेवोपास्यत्वाच्च वायुरेवेति प्रतीयते ।**

ಅನುವಾದ - ಅವನು ಯಾರು ಎಂದರೆ ಮೂರು ಕಾರಣಗಳಿಂದ 'ವಾಯು' ಎಂದು ತಿಳಿಯುತ್ತಿದೆ. ಹೇಗೆಂದರೆ - 'ಏವಮೇವೈಷಃ' ಎಂಬ ಶ್ರುತಿಯು ಪ್ರಾಣ-ಅಪಾನಾದಿ ವಾಯುಗಳ ವ್ಯವಸ್ಥಾಪಕತ್ವವನ್ನು, ಹಾಗೂ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಬೃಹದಾರಣ್ಯಕವು ಮಧ್ಯಮತ್ವವನ್ನು 'ಕುವಿದಂಗ' ಎಂಬ ಋಗ್ವೇದವು ಸರ್ವದೇವೋಪಾಸ್ಯತ್ವವನ್ನು ಹೇಳುತ್ತಿದೆ. ಹೀಗೆ ಮೂರು ಧರ್ಮಗಳಿಂದ ಕೂಡಿರುವ ವ್ಯಕ್ತಿಯು ವಾಯುದೇವರು ಎಂದು ತಿಳಿಯುತ್ತದೆ. ಆದ್ದರಿಂದ ವಾಯುವೇ ಜಿಜ್ಞಾಸ್ಯನಾಗುತ್ತಾನೆ. ಈ ಆಕ್ಷೇಪದ ಪರಿಹಾರಕ್ಕಾಗಿ ಸೂತ್ರಕಾರರು ಸೂತ್ರವನ್ನು ರಚಿಸಿದ್ದಾರೆ.

ಪ್ರತಿಪದಾರ್ಥ -- ಯುಕ್ತಿಬದ್ಧವಾಗಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ-

ಸ ಚ = ಹೃದಯದಲ್ಲಿರುವವನು, ಏವಮೇವ = ಇದೇ ಪ್ರಕಾರದಲ್ಲಿ, ಏಷಃ = ಪ್ರಸಿದ್ಧನಾದ, ಪ್ರಾಣಃ = ಮುಖ್ಯ ಪ್ರಾಣನು, ಇತರಾನ್ = ಇತರೆ ತನ್ನ ಶಿಷ್ಯರಾದ, ಪ್ರಾಣಾನ್ = ಅಪಾನ, ವ್ಯಾನ ಮೊದಲಾದ ಪ್ರಾಣಗಳನ್ನು, ಪೃಥಕ್‌ಪೃಥಗೇವ = ಪ್ರತ್ಯೇಕ ಪ್ರತ್ಯೇಕವಾಗಿ, ಸನ್ನಿಧತ್ತೇ = ದೇಹದ ಅಂಗಾಂಗಗಳಲ್ಲಿ ಅವರನ್ನು ವ್ಯವಸ್ಥೆಗೊಳಿಸುತ್ತಾನೆ, ಯೋಽಯಂ = ಆ ಯಾವ, ಮಧ್ಯಮಃ ಪ್ರಾಣಃ = ಮಧ್ಯಮ ಪ್ರಾಣನು ಇತರ ಪ್ರಾಣಗಳ ನಿಯಾಮಕನಾಗಿದ್ದಾನೆ,

ಋಗ್ವೇದದಲ್ಲಿಯೂ ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ । ತೇ ವಾಯವೇ ಮನವೇ ಬಾಧಿತಾಯಾ-ವಾಸಯನ್ ಉಷಸಂ ಸೂರ್ಯೇಣ ॥ ಎಂಬುದಾಗಿ ಹೇಳಲಾಗಿದೆ. ಅಂಗ = ಪ್ರಿಯನೇ, ಯೇ = ಯಾವ ದೇವತೆಗಳು, ನಮಸಾ = ನಮಸ್ಕಾರವೇ ಮೊದಲಾದ ಕ್ರಿಯೆಗಳಿಂದ, ವೃಧಾಸಃ = ಜ್ಞಾನಾದಿ-ಗುಣಗಳಿಂದ ಸಂಪನ್ನರಾಗಿದ್ದಾರೆಯೋ, ಅನವದ್ಯಾಸಃ = ಅಜ್ಞಾನಾದಿ ದೋಷಗಳಿಂದ ರಹಿತರಾಗಿದ್ದಾರೋ, ಪುರಾ = ಮೊದಲೇ, ಆಸನ್ = ಇದ್ದರೋ ಅಂತಹ ದೇವತೆಗಳು, ಸೂರ್ಯೇಣ ಸಹ = ಸೂರ್ಯನ ಜೊತೆಗೆ, ಕ್ವಚಿತ್ = ರಹಸ್ಯ ಸ್ಥಳದಲ್ಲಿ, ಮನವೇ = ಜ್ಞಾನಿಯಾದ, ಬಾಧಿತಾಯ = ಸಂಸಾರಬಾಧಿತರಿಂದ ಶರಣಾಗತನಾದ, ವಾಯವೇ = ವಾಯುದೇವನನ್ನು ಉದ್ದೇಶಿಸಿ, ಉಷಸಮ್ = ತಮ್ಮ ಬುದ್ಧಿಯನ್ನು, ಆವಾಸಯನ್ = ನೆಲೆಗೊಳಿಸಿದರು. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಪ್ರಾಣವ್ಯವಸ್ಥಾಪಕತ್ವಾತ್ = ಅಪಾನ ಮೊದಲಾದ ಪ್ರಾಣಗಳ ನಿಯಾಮಕತ್ವವು ಶ್ರುತವಾದ್ದರಿಂದ, ಮಧ್ಯಮತ್ವಾತ್ = ಹೃದಯದ ಮಧ್ಯದಲ್ಲಿರುವುದರಿಂದ, ಸರ್ವದೇವೋಪಾಸ್ಯತ್ವಾತ್= ಸಕಲ ದೇವತೆಗಳ ಉಪಾಸ್ಯತ್ವ ಇರುವುದರಿಂದಲೂ, ವಾಯುರೇವ = ಮುಖ್ಯಪ್ರಾಣನೇ, 'ಈಶಾನ' ಎಂಬ ಶಬ್ದ ಪ್ರತಿಪಾದ್ಯನು, ಇತಿ = ಎಂದು, ಪ್ರತೀಯತೇ = ಕಾಣಿಸುತ್ತದೆ.

### ಮಹಾವಿಷ್ಣುವೇ ವಾಮನನೆಂದು ಸಿದ್ಧಾಂತ

**ब्रह्मसूत्रभाष्यम् – अतोऽब्रवीत् ॥ शब्दादेव प्रमितः ॥**

ಅನುವಾದ - ಹಿಂದಿನ ಆಕ್ಷೇಪವನ್ನು ನಿರಾಕರಿಸುವುದಕ್ಕಾಗಿಯೇ ಸೂತ್ರಕಾರರು 'ಶಬ್ದಾದೇವ ಪ್ರಮಿತಃ' ಎಂದು ಹೇಳಿದ್ದಾರೆ.

ಪ್ರತಿಪದಾರ್ಥ -- ಅತಃ = ಈ ಆಕ್ಷೇಪದ ಪರಿಹಾರಕ್ಕಾಗಿ, ಅಬ್ರವೀತ್ = ಸೂತ್ರಕಾರರು ಹೇಳುತ್ತಿದ್ದಾರೆ. ॥ ಶಬ್ದಾದೇವ ಪ್ರಮಿತಃ ॥ ಎಂದು.

### ಲಿಂಗವು ಶ್ರುತಿಗಿಂತ ಪ್ರಬಲವಲ್ಲ

**ब्रह्मसूत्रभाष्यम् – वामनशब्दादेव विष्णुरिति प्रमितः । नहि श्रुतेर्लिङ्गं बलवत् ।**

ಅನುವಾದ - 'ಮಧ್ಯೇ ವಾಮನಮ್ ಆಸೀನಂ' ಎಂಬ ಕಾಠಕದಲ್ಲಿ ವಾಮನ ಶಬ್ದವಿರುವುದರಿಂದಲೇ, ಲಿಂಗವು ಶ್ರುತಿಗಿಂತ ಪ್ರಬಲವಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿ 'ಏವ' ಎಂದು ಪ್ರಯೋಗಿಸಿದ್ದರಿಂದ ಶ್ರುತಿಯು ಪ್ರಬಲವಾಗಿದೆ ಎಂದು ಸೂಚಿಸಿದಂತಾಯಿತು. ಇದರಿಂದ ಲಿಂಗದ ಪ್ರಾಬಲ್ಯವನ್ನು ನಿಷೇಧಿಸಿದಂತಾಯಿತು ಎಂದು ತೋರಿಸುತ್ತಿದ್ದಾರೆ-

ವಿಷ್ಣುರಿತಿ = ವಿಷ್ಣುವೇ ಈಶಾನ ಶಬ್ದದಿಂದ ಪ್ರತಿಪಾದ್ಯ ಎಂದು, ಪ್ರಮಿತಃ = ನಿಶ್ಚಯವಾಗುತ್ತದೆ. ಶ್ರುತೇಃ = ಶ್ರುತಿಗಿಂತಲೂ, ಲಿಂಗಂ = ಲಿಂಗವು, ನಹಿ ಬಲವತ್ = ಬಲಿಷ್ಠವಲ್ಲವಷ್ಟೇ.

### ಸ್ಕಾಂದ ಪುರಾಣದಲ್ಲಿ ಪ್ರಾಬಲ್ಯ ದೌರ್ಬಲ್ಯ ವಿಚಾರ

**ब्रह्मसूत्रभाष्यम् – 'श्रुतिर्लिङ्गं समाख्या च वाक्यं प्रकरणं तथा । पूर्वं पूर्वं बलीयः स्यादेवमागमनिर्णयः ।' इति स्कान्दे ।**

ಅನುವಾದ - 'ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ ಇವುಗಳಲ್ಲಿ ಮುಂದಿನವುಗಳಿಗಿಂತ ಹಿಂದಿನವು ಪ್ರಬಲವಾಗುತ್ತವೆ. ಇವುಗಳ ಪ್ರಾಬಲ್ಯ ದೌರ್ಬಲ್ಯಗಳಿಂದಲೇ, ಆಗಮದ ನಿಜವಾದ ಅರ್ಥವನ್ನು ನಿಶ್ಚಯಿಸಬೇಕು' - ಹೀಗೆ ಸ್ಕಾಂದ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ಲಿಂಗವು ಶ್ರುತಿಗಿಂತ ಏಕೆ ಪ್ರಬಲವಲ್ಲ? ಒಂದು ವೇಳೆ ಶ್ರುತಿಗಿಂತ ಲಿಂಗವೇ ಪ್ರಬಲವಾದರೆ, ಸ್ಕಾಂದಪುರಾಣದ ವಿರೋಧ ಬರುತ್ತದೆ. ಅದು ಹೀಗೆ -

ಶ್ರುತಿಃ = ವೇದವು, ಲಿಂಗಂ = ಯುಕ್ತಿಯು, ಚ = ಮತ್ತು, ಸಮಾಖ್ಯಾ = ಸಮಾನವಾದ ಅರ್ಥದಲ್ಲಿರುವ ಮತ್ತೊಂದು ಪ್ರಮಾಣವು, ವಾಕ್ಯಂ = ಸ್ಮೃತಿವಾಕ್ಯವು, ತಥಾ = ಅದರಂತೆ, ಪ್ರಕರಣಂ = ಪ್ರಕರಣವು ಇವುಗಳಲ್ಲಿ, ಪೂರ್ವಂ ಪೂರ್ವಂ = ಹಿಂದಿನವುಗಳು, ಬಲೀಯಃ = ಬಲಿಷ್ಠವಾದ ಪ್ರಮಾಣಗಳು, ಏವಂ = ಹೀಗೆ, ಆಗಮನಿರ್ಣಯಃ =

ವೇದದಲ್ಲಿ ನಿರ್ಣೀತವಾಗಿದೆ. ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

## ಪ್ರಾಣಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯ

**ब्रह्मसूत्रभाष्यम् – तच्च लिङ्गं विष्णोरेव । तस्यैव प्राणत्वोक्तेः 'तद्वै त्वं प्राणो अभवः' इति ।।**

ಅನುವಾದ - ವಾಯುದೇವನ ವಿಷಯದಲ್ಲಿ ಹೇಳಲ್ಪಟ್ಟ ಧರ್ಮಗಳು ವಿಷ್ಣುವಿನದ್ದೇ ಆಗಿವೆ. ಏಕೆಂದರೆ 'ತದ್ವೈ ತ್ವಂ ಪ್ರಾಣೋ ಅಭವಃ' ಎಂಬುದಾಗಿ ವಿಷ್ಣುವೇ ಪ್ರಾಣಶಬ್ದದಿಂದ ಪ್ರತಿಪಾದ್ಯನೆಂಬ ವಿಚಾರವನ್ನು, ಹಿಂದೆ ಪ್ರಾಣಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ.

ಪ್ರತಿಪದಾರ್ಥ -- ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಲಿ, ಆದರೂ ಸಹ ಪೂರ್ವಪಕ್ಷಲಿಂಗಗಳೂ ಸಹ ಪ್ರಬಲವಾಗಿರುವುದರಿಂದ ನಿರ್ಣಯವನ್ನು ಮಾಡಲಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ತಚ್ಚ ಲಿಂಗಂ = ಆ ಮುಖ್ಯಪ್ರಾಣನ ಧರ್ಮಗಳು, ವಿಷ್ಣೋರೇವ = ವಿಷ್ಣುವಿನದ್ದೇ ಆಗಿವೆ, ತಸ್ಯೈವ = ಆ ವಿಷ್ಣುವಿಗೆ, ತದ್ವೈ ತ್ವಂ ಅಭವಃ = ಆ ಪ್ರಸಿದ್ಧನಾದ ವಿಷ್ಣುವೇ ಪ್ರಾಣನಾದವನು, ಇತಿ = ಹೀಗೆ, ಪ್ರಮಾಣಗಳಿರುವುದರಿಂದ ಪ್ರಾಣತೋಕ್ತೇಃ = ಪ್ರಾಣಶಬ್ದಪ್ರತಿಪಾದ್ಯತ್ವವನ್ನು ಸಮರ್ಥಿಸಿದ್ದರಿಂದ ವಿಷ್ಣುವೇ ಸರ್ವದೇವೋಪಾಸ್ಯನು.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ
# ಸತ್ತರ್ಕದೀಪಾವಳಿ

'ಊರ್ಧ್ವಂ ಪ್ರಾಣಮುನ್ನಯತಿ' ಎಂಬುದು ಮುಖ್ಯಪ್ರಾಣದೇವರ ಲಿಂಗ

**सत्तर्कदीपावळिः – ।। शब्दादेव प्रमितः ।। १-३-२४ ।।**

**'विष्णुरेव जिज्ञास्यः' इत्यादेरयमर्थः । 'ऊर्ध्वं प्राणमुन्नयति' इत्याद्याम्नायते । तत्र तावल्लिङ्गान्मुख्यप्राणः प्रतीयते ।**

'ವಿಷ್ಣುರೇವ ಜಿಜ್ಞಾಸ್ಯಃ' ಇತ್ಯಾದಿ ಭಾಷ್ಯದ ಅರ್ಥ ಹೀಗಿದೆ -

'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿಯಾಗಿ ಕಾಠಕೋಪನಿಷತ್ತಿನ ಪ್ರಕರಣ ಇದೆ. ಈ ವಾಕ್ಯವು ಮುಖ್ಯಪ್ರಾಣದೇವರ ಲಿಂಗದಿಂದ ಕೂಡಿರುವ ಕಾರಣ ಮುಖ್ಯಪ್ರಾಣದೇವರು ಪ್ರತಿಪಾದ್ಯರಾಗಿದ್ದಾರೆಂದು ಪ್ರತೀತವಾಗುತ್ತದೆ.

ಮುಖ್ಯಪ್ರಾಣದೇವರಲ್ಲಿರುವ ಲಿಂಗಗಳು

**सत्तर्कदीपावळिः – यदत्र प्राणापानादिविनियोजकत्वं यन्मध्यस्थितत्वम्, यच्च सर्वदेवोपास्यत्वम्, तत् 'सर्वमेव प्राणः' इत्यादि श्रुत्यन्तरेषु मुख्यप्राणशब्दाभिधेयस्य प्रधानवायोर्लिङ्गत्वेन उच्यते ।**

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಪ್ರಾಣಾಪಾನಾದಿಲಿಂಗನಿಯಾಮಕತ್ವ, ಮಧ್ಯಸ್ಥಿತತ್ವ, ಮತ್ತು ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಇರುತ್ತವೆಂದು ಬೇರೆ ಸ್ಮೃತಿಗಳಿಂದ ಸಿದ್ಧವಾಗಿವೆ. ಆದ್ದರಿಂದ ಮುಖ್ಯಪ್ರಾಣದೇವರ ಲಿಂಗಗಳು ಇರುವ ಕಾರಣ ಅವರೇ ಪ್ರತಿಪಾದ್ಯರಾಗುತ್ತಾರೆ.

'ಕುವಿದಂಗ' ಇತ್ಯಾದಿ ಶ್ರುತಿಯ ಅರ್ಥ

**सत्तर्कदीपावळिः – कुविदङ्गेत्यस्यायमर्थः । अङ्गेति सम्बोधनम् । नमस्कारादिरूपया भक्त्या प्रवृद्धा अनवद्याः पुरा ये देवाः सूर्येण सहासन् ते ज्ञानिने क्लेशबाधितैः शरणत्वेन प्राप्ताय वायवे कचिदेकान्ते उषसः प्रकाशरूपाः बुद्धिं ध्यानाख्याम् आवसन् स्थापयामासुरकुर्वन्निति ।**

'ಕುವಿದಂಗ' ಇತ್ಯಾದಿ ಋಕ್‌ಸಂಹಿತೆಯ ಶ್ರುತ್ಯರ್ಥಹೀಗಿದೆ -

'ಅಂಗ' ಎಂಬುದು ಸಂಬೋಧಕವಾಚಕಶಬ್ದ, ಸೂರ್ಯನ ಜೊತೆಗೆ ಸೇರಿಕೊಂಡು ದೇವತೆಗಳು ವಾಯುದೇವರಲ್ಲಿ ನಮಸ್ಕಾರವೇ ಮೊದಲಾದ ಸೇವೆಯಿಂದ ಭಕ್ತಿಮಾಡುತ್ತಾ ಜ್ಞಾನಾದಿಗುಣಗಳಿಂದ ಪ್ರವೃದ್ಧರಾಗಿ, ಅಜ್ಞಾನಾದಿ ದೋಷಗಳಿಂದ ವಿದೂರರಾದರು. ಅಂತಹ ದೇವತೆಗಳು ಒಮ್ಮೆ ಏಕಾಂತಸ್ಥಳದಲ್ಲಿ ಜ್ಞಾನಿಜನರು ಮತ್ತು ಸಂಸಾರದಲ್ಲಿ ಬಳಲಿದ ಜನರು ಯಾರನ್ನು ಶರಣು ಹೊಂದುತ್ತಾರೋ ಅಂತಹ ವಾಯುದೇವರಲ್ಲಿ ಧ್ಯಾನ ಮಾಡಲು ಬುದ್ಧಿಯನ್ನು ಇಟ್ಟರು.

ನಿದಿಧ್ಯಾಸನಕ್ಕೆ ಯಾರು ವಿಷಯ ?

**सत्तर्कदीपावळिः – अतो यदुक्तम्, प्राग् विष्णुरेव निदिध्यासितव्य इति, तन्न सिद्ध्यतीति चेत्,**

ಆದ್ದರಿಂದ ವಿಷ್ಣುವೇ ನಿದಿಧ್ಯಾಸನಕ್ಕೆ ವಿಷಯನಾಗಿದ್ದಾನೆಂದು ಹಿಂದೆ ಹೇಳಿದ್ದು ತಪ್ಪಾಯಿತಲ್ಲವೆ?

ಮುಖ್ಯಪ್ರಾಣಲಿಂಗವು ವಿಷ್ಣುಶ್ರುತಿಗಿಂತ ದುರ್ಬಲ

**सत्तर्कदीपावळिः – मैवम् । विष्णुरेवात्र प्रतिपाद्यते । 'वामनमासीनम्' इति वामनश्रुतेः । यदुक्तं मुख्यप्राणलिङ्गम्, तच्छ्रुत्या बाध्यते, दुर्बलत्वात् ।**

ಇದು ತಪ್ಪು. ವಿಷ್ಣುವೇ 'ಕುವಿದಂಗ' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆ. 'ವಾಮನಮಾಸೀನಮ್' ಎಂಬ 'ವಾಮನ' ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಮುಖ್ಯಪ್ರಾಣಲಿಂಗವಿರುವುದರಿಂದ ಶ್ರುತಿಯು ಮುಖ್ಯಪ್ರಾಣಕಲಿಂಗಕವೆಂದು ಹೇಳಿದ್ದು ತಪ್ಪು. ಮುಖ್ಯಪ್ರಾಣಲಿಂಗವು ಶ್ರುತಿಗಿಂತ ದುರ್ಬಲವಾದ್ದರಿಂದ ಬಾಧಿತವಾಗುತ್ತದೆ.

ಜೈಮಿನಿ ಋಷಿಗಳು ಹೇಳಿದ ಸೂತ್ರದಲ್ಲಿ ಪ್ರಾಬಲ್ಯ ವಿಚಾರ

**सत्तर्कदीपावलिः – तदुक्तं जैमिनिना 'श्रुतिलिङ्गवाक्यप्रकरणस्थान समाख्यानां समवाये परदौर्बल्यमर्थविप्रकर्षात्' इति ।**

ಇದನ್ನೇ ಜೈಮಿನಿ ಋಷಿಗಳು 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪರದೌರ್ಬಲ್ಯಮರ್ಥವಿಪ್ರಕರ್ಷಾದ್' ಎಂಬ ಸೂತ್ರದಲ್ಲಿ ದುರ್ಬಲವಾದ ಲಿಂಗವು ಶ್ರುತಿಯಿಂದ ಬಾಧಿತವಾಗುತ್ತದೆಂದು ಹೇಳಿರುತ್ತಾರೆ.

ಸ್ಕಾಂದ ಪುರಾಣದಲ್ಲಿಯೂ ಅದನ್ನೇ ಹೇಳಿದೆ

**सत्तर्कदीपावलिः – यत्र श्रुतिलिङ्गादयः परस्परं विरुद्ध्यन्ते, तत्र पूर्वपूर्वबलीयस्त्वं पुराणवचनेन साधयति श्रुतिरिति ।।**

ಯಾವವಿಷಯದಲ್ಲಿ ಶ್ರುತಿಲಿಂಗಾದಿಗಳು ಪರಸ್ಪರವಿರುದ್ಧವಾಗಿರುತ್ತವೋ, ಅಂತಹ ಸಂದರ್ಭದಲ್ಲಿ ಮುಂದಿನವುಗಳಿಗಿಂತ ಹಿಂದಿನವುಗಳಿಗೆ ಪ್ರಾಬಲ್ಯವಿರುತ್ತದೆ ಎಂದು ಸ್ಕಾಂದಪುರಾಣದ ಮಾತಿನಿಂದ ಸಾಧನೆ ಮಾಡುತ್ತಿದ್ದಾರೆ 'ಶ್ರುತಿಃ' ಇತ್ಯಾದಿಯಾಗಿ.

ಈಶಾನಶಬ್ದದಿಂದ ವಿಷ್ಣುಪ್ರತಿಪಾದಕವೆನ್ನಲು ಬಾಧಕವಿಲ್ಲ

**सत्तर्कदीपावलिः – अत्र समाख्या नाम समानप्रकरणमुच्यते । विष्णावप्युपपन्नत्वेनान्यथासिद्धत्वादप्यत्र मुख्यप्राणलिङ्गं न विरोधीत्याह – तच्चेति ।।**

ಈ ಶ್ಲೋಕದಲ್ಲಿರುವ 'ಸಮಾಖ್ಯಾ' ಎಂಬ ಶಬ್ದಕ್ಕೆ ಸಮಾನವಾದ ಪ್ರಕರಣ ಎಂದರ್ಥ. ಮುಖ್ಯಪ್ರಾಣನ ಲಿಂಗಗಳೆಲ್ಲವೂ ವಿಷ್ಣುವಿನಲ್ಲೂ ಉಪಪನ್ನವಾಗುವುದರಿಂದ ಸಾವಕಾಶವಾಗಿವೆ.

ಆದ್ದರಿಂದ ಮುಖ್ಯಪ್ರಾಣನ ಲಿಂಗಗಳು ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನೆನ್ನಲು ಬಾಧಕಗಳಾಗುವುದಿಲ್ಲ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ವಿಷ್ಣುವಿನ ಜಿಜ್ಞಾಸೆಯನ್ನೇ ಮಾಡಬೇಕು

**तत्वप्रदीपः – मोक्षस्यैव परमपुरुषार्थत्वात्तस्य च समीचो विना विष्णुप्रसादादलभ्यत्वात्, तस्य चातिमात्रस्य ज्ञानप्रसाध्यत्वात्, तस्य चापरोक्षस्य जिज्ञासासमायत्तत्वात् विष्णुरेव जिज्ञस्य इत्युक्तम् । जिज्ञास्यो मीसांस्यो विचार्य इत्यर्थः । ''जिज्ञासितं सुसम्पन्नम्'' इति भागवते । अर्थादुपास्य इत्यापद्यते ।**

ಮೋಕ್ಷವೇ ಪರಮ ಪುರುಷಾರ್ಥ. ಅದನ್ನು ಪಡೆಯಲು ವಿಷ್ಣುಪ್ರಸಾದ ಬೇಕೇ ಬೇಕು. ವಿಷ್ಣುಪ್ರಸಾದವಿಲ್ಲದಿದ್ದರೆ ಆ ಮೋಕ್ಷ ದೊರಕದು. ವಿಷ್ಣುಪ್ರಸಾದ ಆಗಬೇಕೆಂದರೆ ಅಪರೋಕ್ಷಜ್ಞಾನವನ್ನು ಹೊಂದಬೇಕು. ಆ ಅಪರೋಕ್ಷಜ್ಞಾನ ಆಗಬೇಕೆಂದರೆ ವಿಷ್ಣುವಿನ ಜಿಜ್ಞಾಸೆಯನ್ನು ಮಾಡಬೇಕು. ಆದ್ದರಿಂದ ವಿಷ್ಣುವೇ ಜಿಜ್ಞಾಸನಾಗಿದ್ದಾನೆಂದು ಪ್ರಥಮಸೂತ್ರದಲ್ಲಿ ಹೇಳಲಾಗಿದೆ. 'ಜಿಜ್ಞಾಸ್ಯ' ಶಬ್ದಕ್ಕೆ ಮೀಮಾಂಸ್ಯ ಎಂದರ್ಥ. ವಿಚಾರ ಮಾಡಲು ಅರ್ಹನಾಗಿರುವನು ಎಂದಭಿಪ್ರಾಯ. 'ಜಿಜ್ಞಾಸಿತಂ ಸುಸಂಪನ್ನಮ್' ಎಂಬ ಭಾಗವತವು ಇದಕ್ಕೆ ಆಧಾರವಾಗಿದೆ. ಅರ್ಥಾತ್ ವಿಷ್ಣುವಿನ ಉಪಾಸನೆಯನ್ನು ಮಾಡಬೇಕೆಂದು ತಿಳಿಯಬೇಕು.

ಸಕಲ ದೇವತೆಗಳ ಉಪಾಸನೆಗೆ ಯಾರು ವಿಷಯ ?

**तत्वप्रदीपः – तत्र काठकश्रुतो सर्वदेवोपास्यः कश्चित्प्रतीयते । स किं वायुरुत विष्णुरिति संशयः। किं तावत्प्राप्तं ? वायुरेवेति । ऊर्ध्वमित्यादिश्रुतेः।**

ಹೀಗಿರುವಾಗ ಕಾಠಕಶ್ರುತಿಯು ಸಕಲ ದೇವತೆಗಳಿಂದ ಉಪಾಸ್ಯನಾದವನ ಬಗ್ಗೆ ಹೇಳುತ್ತಿದೆ- ಆ ಕಾಠಕದ ಅಭಿಪ್ರಾಯವೇನು ಎಂಬುದನ್ನು ವಿಚಾರ ಮಾಡಬೇಕು. 'ಊರ್ಧ್ವಂ ಪ್ರಾಣಂ' ಇತ್ಯಾದಿ ಕಾಠಕಶ್ರುತಿಯು ವಾಯುದೇವರನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಮಹಾವಿಷ್ಣುವನ್ನೋ ? ಎಂಬ ಸಂಶಯ ಪ್ರಾಪ್ತವಾಗುತ್ತದೆ. ವಾಯುದೇವನನ್ನು ಪ್ರತಿಪಾದನೆ ಮಾಡುತ್ತಿದೆ ಎಂಬುದು ಪೂರ್ವಪಕ್ಷ. ಈ ವಿಷಯದಲ್ಲಿ 'ಊರ್ಧ್ವಂ' ಇತ್ಯಾದಿ ಶ್ರುತಿಯು ಆಧಾರವಾಗಿದೆ.

ವಿವರಣೆ - ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ ॥

ಎಲ್ಲ ಪ್ರಾಣಿಗಳ ಹೃದಯದಲ್ಲಿ ಅಂಗುಷ್ಠ ಪರಿಮಾಣದಲ್ಲಿ ಇರುವ ವಾಮನನು ಮುಖ್ಯಪ್ರಾಣ ಸ್ವರೂಪನಾದ ಪ್ರಾಣವಾಯುವನ್ನು ಮೇಲಕ್ಕೆ ಎಂದರೆ ಶ್ವಾಸೋಚ್ಛ್ವಾಸಕ್ಕೆ ಅನುಕೂಲಕರವಾಗುವಂತೆ ಪ್ರೇರಿಸುತ್ತಾನೆ. ಮುಖ್ಯ ಪ್ರಾಣ ಸ್ವರೂಪನಾದ ಅಪಾನ ವಾಯುವನ್ನು ಕೆಳಗೆ ಅಂದರೆ ಮಲ ಮೂತ್ರ ವಿಸರ್ಜನೆಗೆ ಅನುಕೂಲವಾಗುವಂತೆ ಪ್ರೇರಿಸುತ್ತಾನೆ, ಇಂಥ ವಾಮನನನ್ನು ಎಲ್ಲ ದೇವತೆಗಳು ಉಪಾಸಿಸುತ್ತಾರೆ.

ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।
ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥ ಏತದ್ವೈತತ್ ॥

''ಸ್ಥೂಲ ಶರೀರದಲ್ಲಿರುವ ಜೀವನು ಆ ಶರೀರವನ್ನು ಪರಿತ್ಯಾಗ ಮಾಡಿ ಸೂಕ್ಷ್ಮದೇಹದಿಂದಲೂ ಮುಕ್ತನಾದಾಗ, ಆ ಜೀವನಿಗೆ ಮುಕ್ತಿಯಲ್ಲಿ ನಿಯಾಮಕನಾದ ಭಗವಂತನು ಎಂಥ ಮಹಿಮೆಯುಳ್ಳವನು? ನನಗೆ ಇನ್ನೂ ವಿಶೇಷವಾಗಿ ಉಪದೇಶಿಸು'' ಎಂದು ಪುನಃ ಪ್ರಶ್ನಿಸಿದ ನಚಿಕೇತನಿಗೆ ಯಮನು ಉತ್ತರಿಸುತ್ತಾನೆ. 'ನಚಿಕೇತನೇ ನೀನು ಕೇಳಿದ ಭಗವಂತನ ಸ್ವರೂಪವು ಮುಂದೆ ಹೇಳುವ ರೀತಿಯಲ್ಲಿದೆ.

ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥

ಯಾವ ಮನುಷ್ಯನೂ ಪ್ರಾಣನಿಂದಲೂ ಬದುಕುವುದಿಲ್ಲ. ಅಪಾನನಿಂದಲೂ ಬದುಕುವುದಿಲ್ಲ. ಈ ಪ್ರಾಣಾಪಾನ ವಾಯುಗಳು ಯಾರಲ್ಲಿ ಆಶ್ರಿತಾರಗಿದ್ದಾರೆಯೋ, ಈ ಪ್ರಾಣಾಪಾನಗಳಿಗಿಂತ ಅತ್ಯಂತ ಭಿನ್ನನಾದ ಈ ಭಗವಂತನಿಂದಲೇ ಎಲ್ಲ ಜೀವರು ಬದುಕುತ್ತಾರೆ.

ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ।
ಕಿಂತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಭಿಭರ್ತ್ಯಯಮ್ ।
ಅತೋ ಮುಖ್ಯಾಶ್ರಯೋ ವಿಷ್ಣುಃ ಚೇತನಾನಾಂ ಸ್ವತಂತ್ರತಃ ॥

ಭಗವಂತನ ಅಪೇಕ್ಷೆ ಇಲ್ಲದೇ ಮುಖ್ಯಪ್ರಾಣನು ಜೀವರ ಜೀವನಕ್ಕೆ ಸ್ವತಂತ್ರನಾಗಿ ಕಾರಣನಲ್ಲ. ಅವನು ವಿಷ್ಣುವನ್ನು ಆಶ್ರಯಿಸಿಕೊಂಡೇ ಜೀವರನ್ನು ಬದುಕಿಸುತ್ತಾನೆ. ಆದ್ದರಿಂದ ವಿಷ್ಣುವೇ ಚೇತನರಿಗೆ ಸ್ವತಂತ್ರವಾಗಿ ಹಾಗೂ ಮುಖ್ಯವಾಗಿ ಆಶ್ರಯನಾಗಿದ್ದಾನೆ.

ಮಧ್ಯಮಪ್ರಾಣನು ಉಪಾಸ್ಯನೆಂದು ಪೂರ್ವಪಕ್ಷ

**तत्वप्रदीपः – योऽयं देहे देहिनामूर्ध्वं प्राणमुन्नयत्यपानमभिमुखमस्याति तं मध्य आसीनं देवा उपासत इति प्राणव्यवस्थापकत्वान्मध्यमत्वाच्च ।**

ಯಾವಾತನು ಈ ದೇಹದಲ್ಲಿ ನಿಯಾಮಕನಾಗಿ ನೆಲಸಿ ಮೇಲೆ ಪ್ರಾಣನನ್ನು, ಕೆಳಗಡೆ ಅಪಾನನ್ನು ನಿಯಮನ ಮಾಡುತ್ತಾ ಮಧ್ಯದಲ್ಲಿ ಕುಳಿತಿರುವನೋ, ಅವನನ್ನೇ ದೇವತೆಗಳು ಉಪಾಸನೆ ಮಾಡುತ್ತಾರೆ ಎಂಬುದಾಗಿ ಪ್ರಾಣವ್ಯವಸ್ಥಾಪಕತ್ವಧರ್ಮವನ್ನು ಶ್ರುತಿಯು ಹೇಳುತ್ತಿರುವುದರಿಂದ ಮಧ್ಯಮಪ್ರಾಣನೇ ಜಿಜ್ಞಾಸೆಗೆ ಅರ್ಹನಾಗಿದ್ದಾನೆ.

ಮುಖ್ಯಪ್ರಾಣನೇ ಜಿಜ್ಞಾಸ್ಯನೆನ್ನಲು ಸಂವಾದಿ ಪ್ರಮಾಣ

**तत्वप्रदीपः – ''यथा सम्राडेवाधिकृतान्विनियुक्तं एतान् ग्रामानधितिष्ठस्वेति, एवमेवैष प्राण'' इत्यादि श्रुत्यन्तरान्मुख्यप्राणस्यैव प्राणानां व्यवस्थापकत्वम्।**

ಹೇಗೆ ಒಬ್ಬ ರಾಜನು ತನ್ನ ಸಾಮ್ರಾಜ್ಯದಲ್ಲಿ ಒಂದೊಂದು ಭಾಗವನ್ನು ಒಬ್ಬೊಬ್ಬರಿಗೆ ಆಡಳಿತ ವ್ಯವಸ್ಥೆಯನ್ನು ಹಂಚುವನೋ, ಅದರಂತೆ ಈ ಪ್ರಾಣನೂ ಕೂಡ ಪ್ರತ್ಯೇಕ ಕೆಲಸಗಳನ್ನು ಅಪಾನಾದಿಗಳಿಗೆ ನೀಡಿ, ತಾನು ಹೃದಯಮಧ್ಯದಲ್ಲಿ ನೆಲೆಸಿರುವನು ಇತ್ಯಾದಿಯಾಗಿ ಬೇರೆ ಶ್ರುತಿಗಳ ಆಧಾರದಿಂದ ಮುಖ್ಯಪ್ರಾಣನೇ ಪ್ರಾಣವ್ಯವಸ್ಥಾಪಕನಾಗಿದ್ದಾನೆಂದು ತಿಳಿಯುತ್ತದೆ.

ವಿವರಣೆ- ಕಾಠಕೋಪನಿಷತ್ತಿನಲ್ಲಿ ಉದಾಹರಣೆಪೂರ್ವಕವಾಗಿ ಪ್ರಾಣವ್ಯವಸ್ಥಾಪಕತ್ವವು ಮುಖ್ಯಪ್ರಾಣನ ಲಿಂಗವೆಂದು ಹೇಳಲಾಗಿದೆ. ಆದ್ದರಿಂದ ಮುಖ್ಯಪ್ರಾಣನೇ ಜಿಜ್ಞಾಸೆಗೆ

ಅರ್ಹನಾಗಿದ್ದಾನೆ ಎಂದು ಪೂರ್ವಪಕ್ಷಕಾರರ ಸಮರ್ಥನೆ. ಕಾಠಕೋಪನಿಷತ್ತಿನಲ್ಲಿ ಬರುವ ಪ್ರಾಣವ್ಯವಸ್ಥಾಪಕತ್ವದ ಪ್ರಕರಣ ಹೀಗಿದೆ -

(ಸಂಗ್ರಹ) ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ। ಭಗವನ್ ಕುತ ಏಷ ಪ್ರಾಣೋ ಜಾಯತೇ। ಕಥಮಾಯುತ್ಯಸ್ಮಿಂಚ್ಛರೀರೇ। ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರತಿಷ್ಠತೇ। ಕೇನೋತ್ಕ್ರಮತೇ। ಕಥಂ ಬಾಹ್ಯಮಭಿಧತ್ತೇ ಕಥಮಧ್ಯಾತ್ಮಮಿತಿ ॥

ಅನಂತರ ಅಶ್ವಲಾಯನ ಪುತ್ರನಾದ ಕೌಸಲ್ಯನು ಪಿಪ್ಪಲಾದರನ್ನು ಕುರಿತು 'ಪೂಜ್ಯರೇ, ಈ ಮುಖ್ಯಪ್ರಾಣನು ಯಾರಿಂದ ಹುಟ್ಟುತ್ತಾನೆ ? ಏಕೆಂದರೆ ಮಹಾ ಮಹಿಮನಾದ ಪ್ರಾಣನಿಗೆ ಭಗವಂತನಿಂದಲಾದರೂ ಉತ್ಪತ್ತಿ ಹೇಗೆ ತಾನೆ ಸಾಧ್ಯ ? ಈ ಶರೀರದಲ್ಲಿ ಈ ಪ್ರಾಣನು ಯಾವ ಕಾರಣದಿಂದ ಕಾರ್ಯಗಳನ್ನು ನಿರ್ವಹಿಸುತ್ತಾನೆ ? ತನ್ನನ್ನು ಐದು ರೂಪಗಳನ್ನಾಗಿ ವಿಭಾಗಿಸಿಕೊಂಡು ಯಾವ ರೀತಿಯಲ್ಲಿ, ಇರುತ್ತಾನೆ ? ಅಂದರೆ ಆ ರೂಪಗಳಾವುವು ? ಯಾವ ಯಾವ ರೂಪದಿಂದ ಯಾವ ಯಾವ ಕೆಲಸಗಳನ್ನು ಮಾಡುತ್ತ ಎಲ್ಲೆಲ್ಲಿರುತ್ತಾನೆ ? ಯಾವ ರೂಪದಿಂದ ಜೀವ-ಪರಮಾತ್ಮರನ್ನು ಹೊತ್ತುಕೊಂಡು, ಶರೀರದಿಂದ ಹೊರಟು ಹೋಗುತ್ತಾನೆ ? ಯಾವ ರೂಪದಿಂದ ಶರೀರದ ಹೊರಗೆ, ಅಧಿಭೂತ ಅಧಿದೈವಗಳನ್ನು ಧರಿಸುತ್ತಾನೆ ?' ಎಂದು ಪ್ರಶ್ನಿಸಿದನು.

ತಸ್ಮೈ ಸ ಹೋವಾಚ ಅತಿಪ್ರಶ್ನಾನ್‌ಪೃಚ್ಛಸಿ ಬ್ರಹ್ಮಿಷ್ಠೋಽಸೀತಿ । ತಸ್ಮಾತ್ತೇಽಹಂ ಬ್ರವೀಮಿ । ಆತ್ಮತ ಏಷ ಪ್ರಾಣೋ ಜಾಯತೇ । ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಂ ॥

ಪಿಪ್ಪಲಾದರು ಆಶ್ವಲಾಯನನಿಗೆ ಉತ್ತರಿಸಿದರು 'ನೀನು ಒಳ್ಳೆಯ ಪ್ರಶ್ನೆಗಳನ್ನು ಕೇಳುತ್ತಿದ್ದಿ. ಬಹಳ ವೇದ ವಿಚಾರಗಳನ್ನು ಮಾತನಾಡುವವನಾಗಿದ್ದಿ. ಆದ್ದರಿಂದ ನಾನು ನಿನ್ನ ಪ್ರಶ್ನೆಗಳಿಗೆ ಉತ್ತರಿಸುತ್ತೇನೆ. ಮುಖ್ಯಪ್ರಾಣನು ಮಹಾಮಹಿಮನಾದರೂ ಅವನು ಪರಮಾತ್ಮನಿಂದ ಹುಟ್ಟುತ್ತಾನೆ. ಏಕೆಂದರೆ, ಹೇಗೆ ಈ ಶರೀರದ ನೆರಳು ಶರೀರದ ಅಧೀನವಾಗಿದೆಯೋ ಅದರಂತೆ ಎಲ್ಲವೂ ಪರಮಾತ್ಮನ ಅಧೀನ. ಅವನು ಮುಖ್ಯಪ್ರಾಣನಿಗಿಂತಲೂ ಹೆಚ್ಚು ಮಹಿಮೆ ಉಳ್ಳವಾದುದರಿಂದ, ಅವನಿಂದ ಮುಖ್ಯಪ್ರಾಣನು ಹುಟ್ಟುವುದು ಶಕ್ಯವೇ ಆಗಿದೆ.

'ಆತ್ಮತ ಏಷ ಪ್ರಾಣೋ ಜಾಯತೇ' ಎಂಬ ಉಪನಿಷತ್ತಿನಲ್ಲಿ, ಆತ್ಮ ಎಂದರೆ ಪರಮಾತ್ಮ. ಏಕೆಂದರೆ ಬೇರೆ ಯಾರಿಗೂ ಮುಖ್ಯಪ್ರಾಣನನ್ನು ಹುಟ್ಟಿಸುವ ಸಾಮರ್ಥ್ಯವಿಲ್ಲ.

ಮನೋಕೃತೇನಾಯಾತ್ಯಸ್ಮಿಂಚ್ಛರೀರೇ । ಯಥಾ ಸಮ್ರಾಡೇ ವ್ಯಾಧಿಕೃತಾನ್ ವಿನಿಯುಂಕ್ತ ಏತಾನ್ ಗ್ರಾಮಾನಧಿತಿಷ್ಠಸ್ವೈತಾನ್ ಗ್ರಾಮಾನಧಿತಿಷ್ಠ ಸ್ವೇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇನ ಸನ್ನಿಧತ್ತೇ ॥

ಪರಮಾತ್ಮನ ಪ್ರೇರಣೆಯಿಂದ ಈ ಶರೀರದಲ್ಲಿ ಮುಖ್ಯಪ್ರಾಣನು ಶರೀರಕಾರ್ಯಗಳನ್ನು ನಡೆಸಿಕೊಡುತ್ತಾನೆ. ಹೇಗೆ ಒಬ್ಬ ಚಕ್ರವರ್ತಿಯು ತನ್ನ ಸಾಮಂತರಾಜರಿಗೆ ನೀನು ಪಾಟಲೀ-ಪುತ್ರಾಧಿಪತಿಯಾಗು, ನೀನು ಕೌಶಂಬಿಗೆ ಅಧಿಪತಿಯಾಗು ಎಂದು ಮುಂತಾಗಿ ನೇಮಿಸುತ್ತಾನೋ ಹಾಗೇ ಮುಖ್ಯಪ್ರಾಣನು ಇತರ ಪ್ರಾಣಾಪಾನಾದಿಗಳಿಗೆ ಆಜ್ಞೆ ಮಾಡಿ ಬೇರೆ ಬೇರೆ ಸ್ಥಾನಗಳಲ್ಲಿ ಇರಿಸುತ್ತಾನೆ.

> ವಿಷ್ಣೋರ್ವಾಯುಃ ಸಮುತ್ಪನ್ನೋ ವಾಯೋಃ ಸರ್ವಾಶ್ಚ ದೇವತಾಃ । ಪ್ರಾಣಾದ್ಯಾಸ್ತಾನ್ನಯನ್ ಪ್ರಾಣ ಆಜ್ಞಾಪಯತಿ ರಾಜವತ್ । ಸ್ವಯಂ ಚ ಪಂಚರೂಪಃ ಸನ್ ದದ್ಯಾನ್ಮೋಕ್ಷಾದಿಕಂ ಪ್ರಭುಃ । ಇತಿ ಪ್ರಭಂಜನೇ ॥

ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟಿದನು. ಮುಖ್ಯಪ್ರಾಣನಿಂದ ಪ್ರಾಣಾದಿ ಇತರ ದೇವತೆಗಳು ಹುಟ್ಟಿದರು. ಮುಖ್ಯಪ್ರಾಣನು ತನಗಿಂತ ಭಿನ್ನರಾದ, ತನ್ನಿಂದಲೇ ಹುಟ್ಟಿದ ಪ್ರಾಣಾದಿಗಳನ್ನು ರಾಜನಂತೆ, ಅವರವರ ಕೆಲಸಗಳಲ್ಲಿ ಆಜ್ಞಾಪಿಸುತ್ತಾನೆ. ಸಮರ್ಥನಾದ ಆ ಮುಖ್ಯಪ್ರಾಣನೇ ತನಗಿಂತ ಭಿನ್ನರಾದ ಪ್ರಾಣಾಪಾನಾದಿಗಳಲ್ಲಿ, ತಾನು ಪ್ರಾಣಾದಿ ಪಂಚರೂಪದಿಂದ ಇದ್ದು, ಮೋಕ್ಷಾದಿ ಪುಣ್ಯಲೋಕಗಳನ್ನು ಭಗವಂತನ ಅನುಜ್ಞೆಯಿಂದ ಕೊಡುತ್ತಾನೆ ಎಂದು 'ಪ್ರಭಂಜನ' ಎಂಬ ಗ್ರಂಥದಲ್ಲಿ ಹೇಳಿದೆ.

> ಪಾಯೂಪಸ್ಥೇಽಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ । ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ । ಹೃದಿ ಹ್ಯೇಷ ಆತ್ಮಾ ॥

ಮಲಾದಿಗಳನ್ನು ಹೊರಗೆ ಹಾಕುವುದರಿಂದ ಅಪಾನನೆನಿಸುವ ಅಪಾನ ವಾಯುವನ್ನು ಅನ್ನ ಅಪಾನವೆಂಬ ರೂಪದಿಂದ ಯುಕ್ತನನ್ನಾಗಿ ಮಾಡಿ, ವಾಯು ಉಪಸ್ಥಗಳಲ್ಲಿ ಇರಿಸುತ್ತಾನೆ. ಕಣ್ಣು ಕಿವಿಗಳಿಂದಲೂ, ಮುಖ ಮೂಗುಗಳಲ್ಲಿಯೂ ಮುಖ್ಯ ಪ್ರಾಣನು ತಾನೇ ಪ್ರಾಣರೂಪದಿಂದ ಪ್ರಾಣವಾಯುವಿನಲ್ಲಿದ್ದು ಕಾರ್ಯನಿರ್ವಹಿಸುತ್ತಾನೆ. ಸಮಾನನು ಸಮಾನವಾಯುವಿನಲ್ಲಿದ್ದು ಪ್ರಾಣಾಪಾನಗಳ ನಡುವೆ, ಅಂದರೆ ನಾಭಿಯ ಪ್ರದೇಶದಲ್ಲಿದ್ದಾನೆ. ಈ ಸಮಾನವಾಯುವು ಉಂಡ ಅನ್ನವನ್ನು ಶರೀರದ ಆಯಾಯ ಅಂಗಗಳಿಗೆ ಸರಿಯಾಗಿ ಕೊಂಡೊಯ್ಯುತ್ತಾನೆ. ಆದ್ದರಿಂದ ಈ ವಾಯುವಿಗೆ ಸಮಾನ ಎಂದು ಹೆಸರು. ಅನ್ನವನ್ನು ಎಲ್ಲ ಇಂದ್ರಿಯಗಳಿಗೂ ಸಮಾನವಾಗಿ ಕೊಂಡೊಯ್ಯುವುದರಿಂದಲೇ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಮನಸ್ಸು ಮತ್ತು ಬುದ್ಧಿಗಳೆಂಬ ಏಳು ಜ್ಞಾನೇಂದ್ರಿಯಗಳು ತಮ್ಮ ಕಾರ್ಯಗಳನ್ನು ನಿರ್ವಹಿಸಲು ಸಮರ್ಥಗಳಾಗುತ್ತವೆ. ಏಕೆಂದರೆ ಆತ್ಮನು ತಾನೇ ವಿಷಯಪದಾರ್ಥಗಳನ್ನು

ಸಂಪರ್ಕಿಸಿ ಅನುಭವಿಸಲಾರ. ಆತ್ಮನು ಅಣುರೂಪನಾಗಿ ಹೃದಯಪ್ರದೇಶದಲ್ಲಿ ಇದ್ದಾನೆ. ಅವನಿಗೆ ವಿಷಯಪದಾರ್ಥಗಳ ಸಂಪರ್ಕ ಇಂದ್ರಿಯಗಳ ಮೂಲಕವಾದ್ದರಿಂದ, ಇಂದ್ರಿಯಗಳ ಸಹಾಯವು ಅತ್ಯಾವಶ್ಯಕ.

> ಅತ್ರೈತದೇಕಶತಂ ನಾಡೀನಾಮ್ । ತಾಸಾಂ ಶತಮೇಕೈಕಸ್ಯಾಂ ದ್ವಾಸಪ್ತತಿಂ ಪ್ರತಿಶಾಖಾನಾಡೀಸಹಸ್ರಾಣಿ ಭವಂತ್ಯಾಸು ವ್ಯಾನಶ್ಚರತಿ ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯ ಲೋಕಮ್ ॥

ಈ ಶರೀರದಲ್ಲಿ ನೂರ ಒಂದು ಮುಖ್ಯನಾಡಿಗಳಿವೆ. ಪ್ರತಿಯೊಂದರಲ್ಲೂ ನೂರು ನೂರರಂತೆ ಉಪನಾಡಿಗಳಿವೆ. ಇವುಗಳಿಗೂ ತಿರುಗಿ ಉಪನಾಡಿಗಳು ಬೇರೆ ಇವೆ. ಒಟ್ಟು ಎಪ್ಪತ್ತೆರಡು ಸಾವಿರನಾಡಿಗಳು ಶರೀರದಲ್ಲಿ ಇರುತ್ತವೆ ಎಂದು ತಿಳಿಯಬೇಕು. ಅನ್ನರಸವನ್ನು ನಾನಾವಿಧದಿಂದ ನಾಡಿಗಳಲ್ಲಿ ಒಯ್ಯುವುದರಿಂದ ವ್ಯಾನ ಎಂಬ ಹೆಸರುಳ್ಳ ಮುಖ್ಯಪ್ರಾಣನು ವ್ಯಾನವಾಯುವಿನಲ್ಲಿದ್ದು, ಈ ನಾಡಿಗಳಲ್ಲಿ ಸಂಚರಿಸುತ್ತಾನೆ. ಉದಾನ ಎಂಬ ಮುಖ್ಯಪ್ರಾಣನು ಉದಾನವಾಯುವಿನಲ್ಲಿ ಇದ್ದು, ಈ ನಾಡಿಗಳಲ್ಲ ಮುಖ್ಯವಾದ ಸುಷುಮ್ನಾನಾಡಿಯಲ್ಲಿ ಮೇಲ್ಮುಖನಾಗಿ ಸಂಚರಿಸುತ್ತಾನೆ. ಜೀವನ ಪುಣ್ಯವನ್ನು ನಿಮಿತ್ತ ಮಾಡಿಕೊಂಡು ಅವನನ್ನು ಸ್ವರ್ಗಾದಿ ಪುಣ್ಯಲೋಕಗಳಿಗೂ, ತತ್ವಜ್ಞಾನವನ್ನು ನಿಮಿತ್ತಮಾಡಿಕೊಂಡು ಅವನನ್ನು ಮೋಕ್ಷಕ್ಕೂ ಒಯ್ಯುತ್ತಾನೆ. ಹೀಗೆ ಊರ್ಧ್ವಲೋಕಗಳಿಗೆ ಒಯ್ಯುವುದರಿಂದ ಉದಾನನೆನಿಸಿದ್ದಾನೆ. ಪಾಪವನ್ನು ನಿಮಿತ್ತ ಮಾಡಿಕೊಂಡು ನರಕಕ್ಕೂ, ಪುಣ್ಯಪಾಪಗಳು ಸಮನವಾಗಿದ್ದರೆ ಅದಕ್ಕನುಸಾರವಾಗಿ ಮನುಷ್ಯಲೋಕಕ್ಕೂ ಈ ಉದಾನನೇ ಜೀವನನ್ನು ಒಯ್ಯುತ್ತಾನೆ.

೧೦೧ X ೧೦೦ = ೧೦೧೦೦, ಹತ್ತುಸಾವಿರದ ನೂರು ಉಪನಾಡಿಗಳಾದವು. ಇವುಗಳಲ್ಲಿ ೧೦,೦೦೦ ನಾಡಿಗಳಲ್ಲಿ ಪ್ರತಿಯೊಂದಕ್ಕೂ ಎಳರಂತೆ ಮತ್ತೆ ಉಪನಾಡಿಗಳಿವೆ. ಉಳಿದ ನೂರರಲ್ಲಿ ಪ್ರತಿಯೊಂದರಲ್ಲೂ ೨೦ ರಂತೆ ಉಪನಾಡಿಗಳಿವೆ, ಹೀಗೆ ೧೦,೦೦೦ X ೭ = ೭೦೦೦೦ + ೧೦೦ X ೨೦ = ೨,೦೦೦ ಒಟ್ಟು ೭೨,೦೦೦ ನಾಡಿಗಳು ಶರೀರದಲ್ಲಿವೆ.

ಹೀಗೆ ಒಟ್ಟು ಎಪ್ಪತ್ತೆರಡು ಸಾವಿರ ನಾಡಿಗಳು ಶರೀರದಲ್ಲಿವೆ ಎಂದು ತಿಳಿಯಬೇಕು. ಅನ್ನರಸವನ್ನು ನಾನಾವಿಧದಿಂದ ನಾಡಿಗಳಲ್ಲಿ ಒಯ್ಯುವುದರಿಂದ ವ್ಯಾನ ಎಂಬ ಹೆಸರುಳ್ಳ ಮುಖ್ಯಪ್ರಾಣನು ವ್ಯಾನವಾಯುವಿನಲ್ಲಿದ್ದು ಈ ನಾಡಿಗಳಲ್ಲಿ ಸಂಚರಿಸುತ್ತಾನೆ. ಉದಾನ ಎಂಬ

ಹೆಸರುಳ್ಳ ಮುಖ್ಯಪ್ರಾಣನು ಉದಾನವಾಯುವಿನಲ್ಲಿದ್ದು ಈ ನಾಡಿಗಳಲ್ಲಿ ಮುಖ್ಯವಾದ ಸುಷುಮ್ನಾನಾಡಿಯಲ್ಲಿ ಮೇಲ್ಮುಖವಾಗಿ ಸಂಚರಿಸುತ್ತಾನೆ. ಇವನು ಜೀವನ ಪುಣ್ಯವನ್ನು ನಿಮಿತ್ತಮಾಡಿಕೊಂಡು ಅವನನ್ನು ಸ್ವರ್ಗಾದಿ ಪುಣ್ಯಲೋಕಗಳಿಗೂ ತತ್ತ್ವಜ್ಞಾನವನ್ನು ನಿಮಿತ್ತಮಾಡಿಕೊಂಡು ಅವನನ್ನು ಮೋಕ್ಷಕ್ಕೂ ಒಯ್ಯುತ್ತಾನೆ. ಹೀಗೆ ಊರ್ಧ್ವಲೋಕಗಳಿಗೆ ಒಯ್ಯುವುದರಿಂದ ಉದಾನನೆನಿಸಿದ್ದಾನೆ. ಪಾಪವನ್ನು ನಿಮಿತ್ತಮಾಡಿಕೊಂಡು ನರಕಕ್ಕೂ ಪುಣ್ಯಪಾಪಗಳು ಸಮನಾಗಿದ್ದರೆ ಅದಕ್ಕನುಸಾರವಾಗಿ ಮನುಷ್ಯಲೋಕಕ್ಕೂ ಈ ಉದಾನನೇ ಜೀವನನ್ನು ಒಯ್ಯುತ್ತಾನೆ.

> ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನ-ಮವಷ್ಟಭ್ಯಾಂತರಾ ಯದಾಕಾಶಃ ಸ ಸಮಾನೋ ವಾಯುರ್ವ್ಯಾನಃ ತೇಜೋ ಹ ವಾ ಉದಾನಃ । ತಸ್ಮಾದುಪಶಾಂತತೇಜಾಃ ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯ ಮಾನೈಃ ॥

ಪ್ರಾಣನಾಮಕನಾದ ಮುಖ್ಯಪ್ರಾಣನೇ ಶರೀರದ ಹೊರಗೆ ಸೂರ್ಯನಲ್ಲಿದ್ದು, ಸೂರ್ಯನೆಂಬ ಹೆಸರುಳ್ಳವನಾಗಿ ಉದಯಿಸುತ್ತಾನೆ. ಸೂರ್ಯನಲ್ಲಿರುವ ಪ್ರಾಣನೇ ಆ ಸೂರ್ಯನೊಂದಿಗೆ ಕಣ್ಣಿನಲ್ಲಿದ್ದು, ಕಣ್ಣಿನಲ್ಲಿರುವ ಪ್ರಾಣವಾಯುವನ್ನು ಅನುಗ್ರಹಿಸುತ್ತಾನೆ. ಶರೀರದ ಹೊರಗೆ ಪೃಥಿವಿಯನ್ನು ಧರಿಸುವ ಅಪಾನನಾಮಕನಾದ ಮುಖ್ಯಪ್ರಾಣನೇ, ಆ ಪೃಥಿವಿಯೊಂದಿಗೇ ದೇಹದಲ್ಲಿರುವ ಅಪಾನವಾಯುವಿನಲ್ಲಿದ್ದು, ಅಪಾನವಾಯುವನ್ನು ಧರಿಸಿ ದೇಹದೊಳಗಿದ್ದಾನೆ. ದ್ಯಾವಾ ಪೃಥಿವಿಗಳ ಮಧ್ಯದಲ್ಲಿರುವ ಆಕಾಶವನ್ನು ಧರಿಸುವ ಸಮಾನನೆಂಬ ಮುಖ್ಯಪ್ರಾಣನೇ ಆ ಆಕಾಶದೊಂದಿಗೆ ಶರೀರದಲ್ಲಿದ್ದು, ಶರೀರದಲ್ಲಿರುವ ಸಮಾನನ್ನು ಧರಿಸುತ್ತಾನೆ. ಹೊರಗಿನ ವಾಯುವಿಗೆ ಧಾರಕನಾದ ವ್ಯಾನನಾಮಕ ಮುಖ್ಯಪ್ರಾಣನೇ ವಾಯುವಿನೊಂದಿಗೆ ದೇಹದೊಳಗಿದ್ದು, ದೇಹದೊಳಗಿನ ವ್ಯಾನವಾಯುವನ್ನು ಧರಿಸುತ್ತಾನೆ. ಶರೀರದ ಹೊರಗೆ ತೇಜಸ್ಸನ್ನು ಧರಿಸುವ ಉದಾನನಾಮಕ ಮುಖ್ಯಪ್ರಾಣನೆ ಆ ತೇಜಸ್ಸಿನೊಂದಿಗೆ ಶರೀರದಲ್ಲಿದ್ದು, ಶರೀರದಲ್ಲಿರುವ ಉದಾನವಾಯುವನ್ನು ಧರಿಸುತ್ತಾನೆ ಎಂಬುದು ಪ್ರಸಿದ್ಧವೆ. ತೇಜಸ್ಸಿನಲ್ಲಿರುವ ಉದಾನನೆ ಆ ತೇಜಸ್ಸಿನೊಂದಿಗೆ ಶರೀರದಲ್ಲಿದ್ದು, ಜೀವಿಗಳ ಜೀವನಕಾರಣವಾಗಿ ಇರುವುದರಿಂದಲೇ, ಒಬ್ಬ ಮನುಷ್ಯನ ಶರೀರದಲ್ಲಿರುವ ತೇಜಸ್ಸು ಆರಿಹೋದರೆ ಆಗ ಉದಾನವಾಯುವು ಹೊರಟುಹೋದನೆಂದು ಊಹಿಸಿ, ಮನಸ್ಸಿನೊಡನೆ ಬೆರೆತು ಲೀನವಾದ ಇಂದ್ರಿಗಳೊಂದಿಗೆ ಆ ಮನುಷ್ಯನು ಜನ್ಮಾಂತರ ಪಡೆಯುವನು, ಅಂದರೆ ಮರಣಹೊಂದುವನೆಂದು ಲೋಕದಲ್ಲಿ ಜನರು ಊಹಿಸುತ್ತಾರೆ.

ಯಚ್ಚಿತ್ತಸ್ತೇನೈಷ ಪ್ರಾಣಮಾಯತಿ । ಪ್ರಾಣಸ್ತೇಜಸಾ ಯುಕ್ತಃ ಸಹಾತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ । ಯ ಏವಂ ವಿದ್ವಾನ್ ಪ್ರಾಣಂ ವೇದ ನ ಹಾಸ್ಯ ಪ್ರಜಾ ಹೀಯತೇಽಮೃತೋ ಭವತಿ । ತದೇಷ ಶ್ಲೋಕಃ ।

ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ ।
ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತಶ್ನುತೇ ॥
ವಿಜ್ಞಾಯಾಮೃತ ಮಶ್ನುತ ಇತಿ ॥

॥ ಇತಿ ತೃತೀಯ ಪ್ರಶ್ನ ಪ್ರತಿವಚನಮ್ ॥

ಜೀವನು ಮರಣಕಾಲದಲ್ಲಿ ಯಾವ ಶರೀರದಲ್ಲಿ ಮನಸ್ಸಿನಿಂದ ಆಲೋಚಿಸುವನೋ, ತದ್ವಿಷಯಕವಾದ ಮನಸ್ಸಿನಿಂದ ಕೂಡಿಕೊಂಡು ಅವನು ಮುಖ್ಯಪ್ರಾಣನ ಸಮೀಪಕ್ಕೆ ಬರುತ್ತಾನೆ. ಮುಖ್ಯಪ್ರಾಣನು ತನ್ನ ಉದಾನರೂಪದಿಂದ ಕೂಡಿಕೊಂಡು, ಪರಮಾತ್ಮನೊಂದಿಗೆ ಆ ಜೀವನನ್ನು ಹೊತ್ತು, ಆ ಜೀವನಿಂದ ಸಂಕಲ್ಪಿತವಾದ ಶರೀರಕ್ಕೆ ಕೊಂಡೊಯ್ಯುವನು. ಯಾರು ಇಂಥ ಮಹಿಮೆಯುಳ್ಳ ಪ್ರಾಣವನ್ನು ತಿಳಿದುಕೊಳ್ಳುತ್ತಾನೋ ಅವನಿಗೆ ಈ ಲೋಕದಲ್ಲಿ ಅವಿಚ್ಛಿನ್ನವಾದ ಸಂತತಿಯೂ, ಮರಣಾನಂತರದಲ್ಲಿ ಮೋಕ್ಷವೂ ಲಭಿಸುವುದು. ಈ ವಿಷಯದಲ್ಲಿ ಬೇರೆ ಶ್ರುತಿವಾಕ್ಯದ ಸಮ್ಮತಿಯೂ ಇದೆ - 'ಪರಮಾತ್ಮನಿಂದ ಮುಖ್ಯಪ್ರಾಣನ ಉತ್ಪತ್ತಿಯನ್ನೂ, ಶರೀರದಲ್ಲಿ ಅವನ ಪ್ರವೃತ್ತಿಯನ್ನೂ, ಶರೀರದಲ್ಲಿ ಅವನ ಇರುವಿಕೆಯನ್ನೂ, ಪ್ರಾಣಾಪಾನಾದಿ ಐದುವಿಧ ರೂಪ ಸ್ವೀಕಾರವನ್ನೂ, ಅಧ್ಯಾತ್ಮ ಮತ್ತು ಬಾಹ್ಯಧಾರಕತ್ವವನ್ನೂ, ಶರೀರದಿಂದ ಉತ್ಕ್ರಮಣವನ್ನೂ ಯಾರು ಚೆನ್ನಾಗಿ ತಿಳಿಯುತ್ತಾನೋ ಅವನು ಮೋಕ್ಷವನ್ನು ಹೊಂದುತ್ತಾನೆ. (ಸಂಗ್ರಹ)

॥ ಇಲ್ಲಿಗೆ ಮೂರನೆಯ ಪ್ರಶ್ನೆಗೆ ಉತ್ತರದ ಕನ್ನಡ ಅನುವಾದ ಮುಗಿಯಿತು ॥

ಮುಖ್ಯಪ್ರಾಣನಲ್ಲಿ ಸರ್ವದೇವೋಪಾಸ್ಯತ್ವ

**तत्वप्रदीपः – ''अथेममेव नाऽप्नोद्योऽयं मध्यमः प्राणः'' इति बृहदारण्यकवाक्यात् तस्यैव मध्यमत्वं च । सर्वदेवोपास्यत्वं चाविरुद्धं तस्य ।**

ಅಥೇಮಮೇವ ನಾऽಪ್ನೋದ್ಯೋऽಯಂ ಮಧ್ಯಮಃ ಪ್ರಾಣ' ಎಂಬುದಾಗಿ ಬೃಹದಾರಣ್ಯಕವಾಕ್ಯದಿಂದಲೂ ಕೂಡ ಆ ಮುಖ್ಯಪ್ರಾಣನೇ ಹೃದಯಮಧ್ಯಪ್ರದೇಶದಲ್ಲಿ ನೆಲೆಸಿದ್ದಾನೆಂದು ತಿಳಯುತ್ತದೆ. ಆದ್ದರಿಂದ ಸರ್ವದೇವೋಪಾಸ್ಯತ್ವವನ್ನು ಮುಖ್ಯಪ್ರಾಣನಿಗೆ ಹೇಳುವುದು ವಿರುದ್ಧವಾಗುವುದಿಲ್ಲ.

**ವಿವರಣೆ -** ಕಥಂ ಚಾನ್ಯಥಾ ಕಾಮಾದೀನಾಂ ಪ್ರಸಿದ್ಧಮಹಿಮಾನಾಂ ಸ್ತ್ರೀಮಾತ್ರಾದಿಕಂ ದೇವತೋಚ್ಯತೇ ಪ್ರಸಿದ್ಧಂ ಚೈತತ್ ।

ಅಮೃತ ಸ್ತ್ರೀ ಸತ್ಯ ಇತ್ಯಾದಿ ಶಬ್ದಗಳು ವಾಯು ಲಕ್ಷ್ಮೀ ಸರಸ್ವತಿ ಪಾರ್ವತಿ ಬ್ರಹ್ಮ ಇತ್ಯಾದಿ ದೇವತೆಗಳನ್ನು ಹೇಳದಿದ್ದರೆ ಪ್ರಸಿದ್ಧ ಮಹಿಮೆಯುಳ್ಳ ಪ್ರದ್ಯುಮ್ನ ಮೊದಲಾದವರಿಗೆ ಕೇವಲ ಸ್ತ್ರೀಯರು ಮೊದಲಾದವರು ನಿಯಾಮಕರು ಎಂದು ಹೇಳಲು ಹೇಗೆ ಸಾಧ್ಯ ? ವಾಯು ಲಕ್ಷ್ಮೀ ಮುಂತಾದವರಿಗೆ ಇತರರಿಗಿಂತ ಹೆಚ್ಚು ಸಾಮರ್ಥ್ಯವಿದೆ ಎಂಬ ವಿಷಯವು ಪ್ರಮಾಣಸಿದ್ಧವಾಗಿದೆ

'ಆತ್ಮಾದೇವಾನಾಂ ಭುವನಸ್ಯಗರ್ಭಃ' 'ಆತ್ಮಾತೇ ವಾತಃ' 'ಇಂದ್ರೋ ವೈ ದೇವಾನಾಮೋಜಿಷ್ಠಃ' 'ಬ್ರಹ್ಮಾದೇವಾನಾಂ ಪ್ರಥಮಃ ಸಂಬಭೂವ' 'ಅಯಂ ವಾ ವ ಶಿಶುರ್ಯೋऽಯಂ ಮಧ್ಯಮಃ ಪ್ರಾಣಃ' 'ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ' 'ತದ್ ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋऽನ್ವಾಯತ್ತೋ ಯಚ್ಚುಕ್ಲಂ ತೇನೇಂದ್ರಃ'

ಲೋಕವನ್ನು ವ್ಯಾಪಿಸಿರುವ ವಾಯುವು ದೇವತೆಗಳ ನಿಯಾಮಕ ಇಂದ್ರನೇ ! ವಾಯುವು ನಿನಗೆ ನಿಯಾಮಕ. ಇಂದ್ರನು ದೇವತೆಗಳ ಮಧ್ಯೆ ಅತಿ ಹೆಚ್ಚು ಶಕ್ತಿಯನ್ನು ಹೊಂದಿರುವವನು. ಚತುರ್ಮುಖ ಬ್ರಹ್ಮನು ದೇವತೆಗಳಲ್ಲಿ ಮೊದಲು ಹುಟ್ಟಿದವನು. ಈ ಮುಖ್ಯಪ್ರಾಣನು ವಿಷ್ಣುವಿನ ಮಗನು. ಮುಖ್ಯಪ್ರಾಣನನ್ನು ಈ ಏಳು ದೇವತೆಗಳೂ ಉಪಾಸನೆ ಮಾಡುತ್ತಾರೆ. ಕಣ್ಣಿನಲ್ಲಿರುವ ಕೆಂಪುರೇಖೆಗಳನ್ನು ಆಶ್ರಯಿಸಿ ರುದ್ರನು ಮುಖ್ಯಪ್ರಾಣನನ್ನು ಉಪಾಸನೆ ಮಾಡುತ್ತಾನೆ. ಕಣ್ಣಿನಲ್ಲಿರುವ ಬಿಳಿಯಾದ ಸ್ಥಳವನ್ನು ಆಶ್ರಯಿಸಿ ಇಂದ್ರನು ಮುಖ್ಯಪ್ರಾಣನನ್ನು ಉಪಾಸನೆ ಮಾಡುತ್ತಾನೆ.

ಅಶ್ವಮೇದಃ ಕ್ರತುಶ್ರೇಷ್ಠೋ ಜ್ಯೋತಿಃ ಶ್ರೇಷ್ಠೋ ದಿವಾಕರಃ ।
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ।

ವಾಯುರ್ಭೀಮೋ ಭಿಮನಾದೋ ಮಹೌಜಾಃ।
ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ।
ಅನಾವೃತ್ತಿರ್ದೇಹಿನಾಂ ದೇಹಪಾತೇ
ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ।
ಕ್ರತುಂ ಸಚಂತ ಮಾರುತಸ್ಯವೇಧಸಃ।

ಅಶ್ವಮೇಧವು ಯಾಗಗಳಲ್ಲಿ ಶ್ರೇಷ್ಠ, ಜ್ಯೋತಿಗಳಲ್ಲಿ ಸೂರ್ಯನು ಶ್ರೇಷ್ಠ. ಎರಡು ಕಾಲಿನ ಪ್ರಾಣಿಗಳಲ್ಲಿ ಬ್ರಾಹ್ಮಣ ಶ್ರೇಷ್ಠ. ಹಾಗೆಯೇ ದೇವತೆಗಳಲ್ಲಿ ವಾಯುವು ಶ್ರೇಷ್ಠ. ವಾಯುವು ಭಯಂಕರ, ಭಯಂಕರ ಗರ್ಜನೆ ಮಾಡುವವನು. ಮಹಾಬಲಶಾಲಿ, ಎಲ್ಲಾ ಪ್ರಾಣಿಗಳಿಗೂ ಪ್ರಾಣಪ್ರದ. ದೇಹಿಗಳ ದೇಹವು ಬೀಳಲು ವಾಯುವೇ ಕಾರಣ. ಆದ್ದರಿಂದ ವಾಯುವು ದೇವತೆಗಳ ಪ್ರಭು. ಅವರಿಗಿಂತ ಉತ್ತಮ. ವರುಣಾದಿ ದೇವತೆಗಳು ವಾಯುದೇವರ ಪ್ರೀತಿಗಾಗಿ ಯಾಗವನ್ನು ಮಾಡಿದರು.

'ವಾಯೋರಾತ್ಮಾನಂ ಕವಯೋ ನಿಚಿಕ್ಯುಃ' 'ಆತ್ಮತ ಏಷ ಪ್ರಾಣೋ ಜಾಯತೇ' 'ಯೋ ವಾಯೌ ತಿಷ್ಠನ್' 'ದೇವಾನಾಂ ದೇವತಾ' 'ವಾಯುರ್ವಾಯೋರ್ದೇವೋ ಜನಾರ್ದನಃ' 'ಸ ಪ್ರಾಣ ಮಸೃಜತ ಪ್ರಾಣಾಚ್ಛ್ರದ್ಧಾಮ್' 'ಏತಸ್ಮಾಜ್ಜಾಯತೇ ಪ್ರಾಣಃ'

ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ।
ಬ್ರಹ್ಮಾಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ।
ಇತ್ಯಾದಿಷು ಸರ್ವತ್ರ।

ಜ್ಞಾನಿಗಳು ವಿಷ್ಣುವನ್ನು ವಾಯುವಿನ ಪ್ರಭುವೆಂದು ತಿಳಿದು ಮುಖ್ಯಪ್ರಾಣನು ವಿಷ್ಣುವಿನಿಂದ ಹುಟ್ಟುತ್ತಾನೆ. ವಿಷ್ಣುವು ವಾಯುವಿನಲ್ಲಿದ್ದು ನಿಯಾಮಕನಾಗಿದ್ದಾನೆ. ದೇವತೆಗಳಿಗೆ ನಿಯಾಮಕ ವಾಯು. ವಾಯುವಿಗೆ ನಿಮಾಯಕ ವಿಷ್ಣು. ವಿಷ್ಣುವು ಪ್ರಾಣನನ್ನು ಸೃಷ್ಟಿಸಿದನು. ಅನಂತರ ಭಾರತಿಯನ್ನು ಸೃಷ್ಟಿಸಿದನು. ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟುತ್ತಾನೆ. ದೇವತೆಗಳೆಲ್ಲರೂ ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರನು ಚತುರ್ಮುಖ ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಚತುರ್ಮುಖನು ಯಾವಾಗಲೂ ನನ್ನನ್ನು ಆಶ್ರಯಿಸಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ. ಇವೇ ಮೊದಲಾದ ಪ್ರಮಾಣಗಳಲ್ಲಿ ಎಲ್ಲ ಕಡೆ ವಾಯು ಮೊದಲಾದ ದೇವತೆಗಳು ಅಧಿಕಸಾಮರ್ಥ್ಯವುಳ್ಳವರೆಂದು ವರ್ಣಿತರಾಗಿರುವರು.

ಶ್ರಿಯಃ ಪ್ರಸಾದಂ ಸ ಕುಶೇಶಯೇಶಯಃ
ಶ್ರಿತಃ ಸ ಚಿಂತ್ಯ ಪ್ರಶಶಂಸ ಶೌರಿಮ್ । ಇತ್ಯಾದಿ ಚ ।

ಲಕ್ಷ್ಮಿಯ ಅನುಗ್ರಹವನ್ನು ಆಶ್ರಯಿಸಿರುವವ ಚತುರ್ಮುಖ. ಅವನು ಯಾವ ಶ್ರೀಕೃಷ್ಣನನ್ನು ಸ್ತುತಿಸಿದನೋ ಆ ಕೃಷ್ಣನನ್ನು ಧ್ಯಾನ ಮಾಡಬೇಕು. ಇತ್ಯಾದಿ ಪ್ರಮಾಣಗಳು ಕೂಡ ಲಕ್ಷ್ಮೀದೇವಿ ಬ್ರಹ್ಮಾದಿಗಳಿಗಿಂತ ಶ್ರೇಷ್ಠಳೂ, ಶ್ರೀಹರಿಗೆ ಅತ್ಯಂತ ಪ್ರಿಯಳೂ ಆಗಿರುವಳೆಂದು ಹೇಳುತ್ತವೆ.

ಶಾಕಲ್ಯೇತಿ ಹೋವಾಚ ಯಾಜ್ಞವಲ್ಕ್ಯಃ । ತ್ವಾಂ ಸ್ವಿದ್ ಇಮೇ ಬ್ರಾಹ್ಮಣಾ
ಅಂಗಾರಾವಕ್ರಯಣಮಕ್ರತಾ ಇತಿ ।

ಯಾಜ್ಞವಲ್ಕ್ಯರು ಹೇಳಿದರು ಶಾಕಲ್ಯ . ಈ ಬ್ರಾಹ್ಮಣರು ನಿಮ್ಮನ್ನು ಕಿಡಿಗಳನ್ನು ಅತ್ತಿತ್ತ ಚೆಲ್ಲುವ ಕೊಳ್ಳಿಯನ್ನಾಗಿ ಮಾಡಿದ್ದಾರೆ ಎಂದು ನನಗೆ ಅನಿಸುತ್ತದೆ. ಪಾಪ, ಅದು ನಿಮಗೆ ಗೊತ್ತಿಲ್ಲ.

ಈ ವಿದ್ವಾಂಸರ ಪ್ರೇರಣೆಯಿಂದ ವಾದಕ್ಕೆ ನಿಂತು ನೀವು ಬಹಳ ಅಬದ್ಧ ಪ್ರಶ್ನೆಗಳನ್ನು ಕೇಳುತ್ತಿದ್ದೀರಿ. ಕಿಡಿ ಉಗುಳತ್ತ ಉರಿವ ಕೊಳ್ಳಿಯಂತೆ ಆಗಿರುವಿರಿ. ಆದರೆ ಉರಿವ ಕೊಳ್ಳಿ ಕಿಡಿಗಳನ್ನುಗುಳುತ್ತ ಜ್ವಲಿಸಿದರೂ ಕೊನೆಯಲ್ಲಿ ತಾನೇ ನಷ್ಟವಾಗುತ್ತದೆ. ಬೇಡ, ಸಾಕು ಎಂದು ದಯೆಯಿಂದ ಯಾಜ್ಞವಲ್ಕ್ಯರು ಹೇಳಿದರು.

ಅಕ್ರತಾ೩ ಎಂಬಲ್ಲಿ ಪ್ಲುತವು ದಯೆಯನ್ನು ಸೂಚಿಸುತ್ತದೆ.

## ಕುವಿದಂಗ ಎಂಬ ಶ್ರುತ್ಯರ್ಥ

**तत्वप्रदीपः – कुविदङ्गेत्यादौ प्रसिद्धत्वात् । तथाहि - पुरा कचिये नमस्कारादिना वृद्धास्सन्तो देवा रागाद्यवद्यशून्या आसन्ते । वायवे ज्ञानिन बाधिभिः शरणार्थमितायाऽवासयन् स्वबुद्धिं सूर्येण सह । 'उष प्रकाशने' इति धातोर्बुद्धिरुषश्शषब्दोक्ता । वायुमुद्दिश्य बुद्धिमावासयन्नित्यर्थः तस्माद्वायुरपि जिज्ञास्य इति प्राप्ते प्रतिविधीयते ।**

ಋಗ್ವೇದದಲ್ಲಿರುವ 'ಕುವಿದಂಗ' ಇತ್ಯಾದಿ ಮಂತ್ರದಲ್ಲಿಯೂ ಮುಖ್ಯಪ್ರಾಣನಲ್ಲಿಯೇ ಇದು ಪ್ರಸಿದ್ಧವಾಗಿದೆ. 'ಕುವಿದಂಗ' ಇತ್ಯಾದಿ ಶ್ರುತಿಯ ಅರ್ಥವನ್ನು ಹೀಗೆ ತಿಳಿಯಬೇಕು - ಪುರಾ =

ಹಿಂದೆ, ಕುವಿತು = ರಹಸ್ಯಸ್ಥಳದಲ್ಲಿ, ಏ = ಯಾವ ದೇವತೆಗಳು, ನಮಸಾ = ನಮಸ್ಕಾರ ಮೊದಲಾದ ಉಪಾಸನೆಯಿಂದ, ವೃದ್ಧಾಸಃ = ಜ್ಞಾನಾದಿಗುಣದಿಂದ ಅಭಿವೃದ್ಧರಾದರೋ, ಅನವಧ್ಯಾಸಃ = ರಾಗಾದಿದೋಷಗಳಿಂದ ರಹಿತರಾದರೋ, ಅಂಥ ದೇವತೆಗಳು, ವಾಯವೇ = ವಾಯುದೇವನನ್ನು ಕುರಿತು, ಬಾಧಿತಾಯ = ಸಂಸಾರಬಾಧೆಯಿಂದ ಶರಣಾಗತರಾದ, ಉಷಸಂ = ತಮ್ಮ ಬುದ್ಧಿಯನ್ನು, ಸೂರ್ಯೇಣ ಸಃ = ಸೂರ್ಯನೊಂದಿಗೆ, ಆವಾಸಯನ್ = ನೆಲೆಗೊಳಿಸಿದರು.

'ಉಷಸಂ' ಎಂಬ ಪದಕ್ಕೆ ಬುದ್ಧಿಯನ್ನು ಎಂದರ್ಥ. 'ಉಷ ಪ್ರಕಾಶನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಈ ಅರ್ಥವು ದೊರೆಯುತ್ತದೆ. ವಾಯುದೇವರನ್ನು ಉದ್ದೇಶಿಸಿ ತಮ್ಮ ಬುದ್ಧಿಯನ್ನು ನೆಲೆಗೊಳಿಸಿದರು ಎಂಬುದು ಇದರ ಅಭಿಪ್ರಾಯ. ಆದ್ದರಿಂದ ವಾಯುದೇವರೂ ಕೂಡ ಜಿಜ್ಞಾಸ್ಯರಾಗುತ್ತಾರೆಂಬ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ.

### ಶ್ರುತಿಲಿಂಗಾದಿಗಳ ಲಕ್ಷಣ

**तत्वप्रदीपः – शब्दादेव प्रमितः ।। एवमागमनिर्णयः । एवं पूर्वपूर्वबलीयोभिः श्रुत्यादिभिरागमार्थनिर्णयः ।**

**श्रुतिर्नाम समुद्दिष्टं लिङ्गं तल्लक्षणं स्मृतम् ।**
**पदानि निरपेक्षाणि वाक्यं प्रकरणं तथा ।।**
**एकस्य प्रतिपत्त्यङ्गवचनं स्थानमुच्यते ।**
**अन्यत्र तत्समोक्तिस्तु समाख्यास्थानमेव च ।।**

**अध्यायादिप्रबन्धास्तु प्रभेदा आगमस्य च'' इति सम्प्रदायविद्वचनादेतेषां भेदो वेदितव्यः ।।**

ವಾಮನಶ್ರುತಿಯ ಆಧಾರದಿಂದ ವಿಷ್ಣುವೇ ಹೃದಯಮಧ್ಯಪ್ರದೇಶದಲ್ಲಿ ಉಪಾಸ್ಯನಾಗಿದ್ದಾನೆಂದು ತಿಳಿಯುತ್ತಿದೆ. ಏಕೆಂದರೆ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳಿಗಿಂತಲೂ ಶ್ರುತಿಯು ಬಲಿಷ್ಠವಾಗಿದೆ ಎಂಬುದಾಗಿ ಸ್ಕಂದವಚನವಿದೆ -

ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ ಇವುಗಳಲ್ಲಿ ಮೊದಲನೆಯವುಗಳು ಮುಂದಿನವುಗಳಿಗಿಂತ ಬಲಿಷ್ಠವಾಗಿವೆ. ಹೀಗೆಯೇ ಆಗಮದ ಅರ್ಥವನ್ನು ನಿರ್ಣಯ ಮಾಡಬೇಕು.

ಶ್ರುತ್ಯಾದಿಗಳ ಲಕ್ಷಣವನ್ನು ಹೀಗೆ ತಿಳಿಯಬೇಕು -

ಶ್ರುತಿರ್ನಾಮ ಸಮುದ್ದಿಷ್ಟಂ ಲಿಂಗಂ ತಲ್ಲಕ್ಷಣಂ ಸ್ಮೃತಮ್ ।
ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ ॥

ಹೆಸರನ್ನು ಉಲ್ಲೇಖಿಸುವುದು ಶ್ರುತಿ. ಆ ವ್ಯಕ್ತಿಯ ಅಸಾಧಾರಣಲಕ್ಷಣವನ್ನು ಹೇಳುವುದು ಲಿಂಗ. ನಿರಪೇಕ್ಷಿತವಾದ ಅನೇಕ ಪದಗಳ ಸಮುದಾಯವೇ ವಾಕ್ಯ, ಅನೇಕ ವಾಕ್ಯಗಳ ಸಮುದಾಯವೇ ಪ್ರಕರಣ. ಒಂದು ತತ್ವದ ನಿರ್ಣಯಕ್ಕೆ ಅನುಕೂಲವಾದ ವಚನವು ಸ್ಥಾನ. ಬೇರೆಕಡೆ ಅದಕ್ಕೆ ಸಂವಾದಿಯಾದ ವಚನವು ಸಮಾಖ್ಯಾ. ಹೀಗೆ ಆಗಮದ ಪ್ರಭೇದವನ್ನು ತಿಳಿಯಬೇಕು. ಸಂಪ್ರದಾಯತಿಳಿದವರ ಮಾತಿನ ಆಧಾರದಿಂದ ಇವುಗಳಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕು.

ವಿಶೇಷ ವಿಚಾರ - ಬಿಳಿಯ ಬಟ್ಟೆ ತೊಟ್ಟವನು ಯಾವಾಗ ಬರುತ್ತಾನೆ? ಎಂದುಪ್ರಶ್ನಿಸದರೆ ಕೂಡಲೇ ಶಾಬ್ದಬೋಧ ಬರುವುದಿಲ್ಲ. ದೇವದತ್ತನು ಯಾವಾಗ ಬರುತ್ತಾನೆ ? ಎಂದು ಪ್ರಶ್ನಿಸಿದಾಗ ಕೂಡಲೇ ಶಾಬ್ದಬೋಧ ಬರುತ್ತದೆ. ಆದ್ದರಿಂದ ಲಿಂಗಕ್ಕಿಂತಲೂ ಶ್ರುತಿಯು ಪ್ರಬಲವಾಗಿರುತ್ತದೆ. ಪ್ರಕೃತ ಪ್ರಾಣವ್ಯವಸ್ಥಾಪಕತ್ವ ಎಂಬ ಅಸಾಧಾರಣ ಲಿಂಗಕ್ಕಿಂತ ವಾಮನಶಬ್ದವನ್ನು ಹೇಳಿದಾಗ ಕೂಡಲೇ ಶಾಬ್ದಬೋಧ ಬರುತ್ತದೆ. ಆದ್ದರಿಂದ ಪ್ರಾಣವ್ಯವಸ್ಥಾಪಕತ್ವಲಿಂಗಕ್ಕಿಂತಲೂ ವಾಮನ- ಶ್ರುತಿಯು ಪ್ರಬಲವಾಗಿದೆ. ಇದರ ಆಧಾರದಿಂದ ಮಹಾವಿಷ್ಣುವೇ ಉಪಾಸ್ಯನಾಗಿದ್ದಾನೆಂದು ತಿಳಿಯುತ್ತದೆ. ಇದೇ ಕ್ರಮದಲ್ಲಿ ಲಿಂಗಕ್ಕಿಂತಲೂ ವಾಕ್ಯವು ದುರ್ಬಲ. ಏಕೆಂದರೆ ಅನೇಕ ಪದಗಳನ್ನು ಕೇಳಿ ಶಾಬ್ದಬೋಧವನ್ನು ತಂದುಕೊಳ್ಳುವುದು ಮತ್ತಷ್ಟು ವಿಳಂಬವಾಗುತ್ತದೆ. ಅನೇಕ ಪ್ರಕರಣಗಳ ಸಮುದಾಯವನ್ನು ಅರ್ಥಮಾಡಿಕೊಂಡು, ಸ್ಥಾನಪ್ರಮಾಣದಿಂದ ಶಾಬ್ದಬೋಧ ತಂದುಕೊಳ್ಳುವುದು ಇನ್ನಷ್ಟು ವಿಳಂಬವಾಗುತ್ತದೆ. ಬೇರೆ ಶ್ರುತಿಯ ಸಂವಾದವನ್ನು ತಿಳಿಯುವುದು ಮತ್ತೂ ಕಷ್ಟ. ಈ ಕಾರಣದಿಂದ ಮುಂದಿನವುಗಳು ಹಿಂದಿನವುಗಳಿಗಿಂತ ದುರ್ಬಲವಾಗಿರುತ್ತದೆ.

## ಸಮಾಖ್ಯೆಯ ಬಗ್ಗೆ ಒಂದು ವಿಮರ್ಶೆ

ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣೇ ತಥಾ ।
ಪೂರ್ವಪೂರ್ವಂ ಬಲೀಯಃ ಸ್ಯಾದೇವಮಾಗಮನಿರ್ಣಯಃ ॥

ಆಶಂಕೆ - ಈ ಸ್ಕಾಂದ ಪುರಾಣದ ವಚನವನ್ನು ನೋಡಿದಾಗ ಶ್ರುತಿಗಿಂತಲೂ ಲಿಂಗವು, ಲಿಂಗಕ್ಕಿಂತಲೂ ಸಮಾಖ್ಯೆಯು, ಸಮಾಖ್ಯೆಗಿಂತಲೂ ವಾಕ್ಯವು, ವಾಕ್ಯಕ್ಕಿಂತಲೂ ಪ್ರಕರಣವು ದುರ್ಬಲವೆಂದು ತಿಳಿಯುತ್ತದೆ. ಆದರೆ ಸಮಾಖ್ಯೆಯು ಪ್ರಕರಣಕ್ಕಿಂತಲೂ ದುರ್ಬಲವಾಗಿದೆ ಎಂಬುದೇ ಸಿದ್ಧಾಂತ. ಹೀಗಿರುವಾಗ ಸಮಾಖ್ಯೆಯನ್ನು ಸ್ಕಾಂದ ಪುರಾಣದ ಮಾತಿನಲ್ಲಿ ಕೊನೆಯದ್ದಾಗಿ ಹೇಳಬೇಕಿತ್ತು. ಶ್ರುತಿ ಹಾಗೂ ಲಿಂಗಗಳ ಅನಂತರ ಏಕೆ ಹೇಳಿದರು ? ಶ್ರುತ್ಯಂತರ ಸಂವಾದವನ್ನು ತಿಳಿಯುವುದು ಪ್ರಕರಣಕ್ಕಿಂತಲೂ ಕಠಿಣವಾದ್ದರಿಂದ ಸಮಾಖ್ಯೆಯು ಪ್ರಕರಣಕ್ಕಿಂತಲೂ ದುರ್ಬಲವಾಗಿದೆ ಎಂಬುದು ಅನುಭವಸಿದ್ಧವಾಗಿದೆ. ಹಾಗಿದ್ದಾಗ ಸಮಾಖ್ಯೆಯನ್ನು ವಾಕ್ಯ ಹಾಗೂ ಪ್ರಕರಣಕ್ಕಿಂತಲೂ ಬಲಿಷ್ಠವೆಂದು ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಮೂರನೆಯ ಸ್ಥಾನದಲ್ಲಿ ಸಮಾಖ್ಯೆಯನ್ನು ಸೇರಿಸಿದ್ದು ತಪ್ಪಲ್ಲವೇ?

ಸಮಾಧಾನ - ತತ್ತ್ವಪ್ರಕಾಶಿಕೆಯಲ್ಲಿ ಇದಕ್ಕೆ ಉತ್ತರವನ್ನು ನೀಡಿದ್ದಾರೆ. ಸಮಾಖ್ಯೆಯಲ್ಲಿ ಮಾತ್ರ ಕ್ರಮವು ಅವಿವಕ್ಷಿತವೆಂದು. ಆದ್ದರಿಂದ 'ಸಮಾಖ್ಯಾ' ಎಂಬ ಪದವನ್ನು 'ಪ್ರಕರಣಂ' ಎಂಬ ಪದದ ಅನಂತರ ಅನ್ವಯ ಮಾಡಿಕೊಳ್ಳಬೇಕು. ಆಗ ಸಮಸ್ಯೆ ಬರುವುದಿಲ್ಲ. ಪ್ರಕರಣಕ್ಕಿಂತಲೂ ಸಮಾಖ್ಯೆಯೇ ದುರ್ಬಲವೆಂದು ಹೇಳಿದಂತಾಗುತ್ತದೆ.

ಆಶಂಕೆ - ಹೀಗೆ ಸಮಾಧಾನ ಹೇಳಿದರೆ, 'ಪೂರ್ವಪೂರ್ವಂ ಬಲೀಯಃ ಸ್ಯಾತ್ ಏವಮಾಗಮನಿರ್ಣಯಃ' ಎಂಬ ವಾಕ್ಯಕ್ಕೆ ಅಸ್ವಾರಸ್ಯವನ್ನು ಒಪ್ಪಿದಂತಾಗುತ್ತದೆ. ಏಕೆಂದರೆ ಹಿಂದಿನದ್ದೇ ಪ್ರಬಲವೆಂದು ಸ್ಪಷ್ಟವಾಗಿ ಪ್ರತಿಯೊಂದಕ್ಕೂ ಅನ್ವಯವಾಗುವಂತೆ ಈ ವಚನ ಹೇಳುತ್ತಿದೆ. ಒಂದು ವೇಳೆ ಕ್ರಮವು ಅವಿವಕ್ಷಿತವೆಂದರೆ 'ಪೂರ್ವಪೂರ್ವಂ ಬಲೀಯಃ' ಎಂಬ ಮಾತಿಗೆ ಸ್ವಾರಸ್ಯವೇ ಇರುವುದಿಲ್ಲ ಅಲ್ಲವೇ ?

ಸಮಾಧಾನ - ಮೇಲೆ ಹೇಳಿದ ಸಮಾಧಾನ ಒಂದು ರೀತಿಯಲ್ಲಿ. ಮತ್ತೊಂದು ರೀತಿಯ ಸಮಾಧಾನವನ್ನು ಹೀಗೆ ಹೇಳಬಹುದು - ಸಮಾಖ್ಯೆಯು ಅನೇಕವಿಧವಾಗಿದೆ. ನಾಮಸಮಾಖ್ಯೆ, ಲಿಂಗಸಮಾಖ್ಯೆ, ವಾಕ್ಯಸಮಾಖ್ಯೆ, ಪ್ರಕರಣಸಮಾಖ್ಯೆ ಎಂದು. ಈ ವೈವಿಧ್ಯವು ಸಮಾಖ್ಯೆ ಬಿಟ್ಟು ಇತರ ಪ್ರಮಾಣಗಳಲ್ಲಿರುವುದಿಲ್ಲ. ನಾಮಸಮಾಖ್ಯಾ ಹಾಗೂ ಲಿಂಗಸಮಾಖ್ಯಾಗಳು ವಾಕ್ಯ ಹಾಗೂ ಪ್ರಕರಣಗಳಿಗಿಂತಲೂ ಪ್ರಬಲವಾಗಿರುತ್ತವೆ. ಆದರೆ

ಪ್ರಕರಣಸಮಾಖ್ಯಾ ಎಂಬುದು ಪ್ರಕರಣಕ್ಕಿಂತಲೂ ದುರ್ಬಲವಾಗಿರುತ್ತದೆ. ಈ ಒಂದು ಅಪೂರ್ವ ಪ್ರಮೇಯವನ್ನು ತಿಳಿಸುವುದಕ್ಕಾಗಿ ಶ್ರೀಮದಾಚಾರ್ಯರು ಸ್ಕಾಂದಪುರಾಣದ ಈ ವಚನವನ್ನು ಇದೇ ಕ್ರಮದಲ್ಲಿ ಉಲ್ಲೇಖಿಸಿದ್ದಾರೆಂದು ವಿವಕ್ಷಿಸಬಹುದು. ಹೀಗೆ ವಿವಕ್ಷಿಸಿದಾಗ 'ಪೂರ್ವಪೂರ್ವಂ ಬಲೀಯಃ ಸ್ಯಾತ್' ಎಂಬ ಮಾತಿಗೂ ಸ್ವರಸವಾದ ಅರ್ಥವನ್ನೇ ವಿವಕ್ಷಿಸಿದಂತಾಗುತ್ತದೆ.

'ನಮೋ ಯುವಭ್ಯೋ, ನಮ ಆಶಿನೇಭ್ಯಃ' ಎಂಬ ಉಪನಿಷತ್ತಿನ ಮಾತಿಗೆ 'ನಮ ಆವಟುಭ್ಯಃ' ಎಂಬ ಭಾಗವತದ ವಚನವು ಸಮಾಖ್ಯಾ ಎನಿಸುತ್ತದೆ. ಇದು ನಾಮಸಮಾಖ್ಯಾ ಆಗಿದೆ. ನಮಾಸಮಾಖ್ಯೆಯು ವಾಕ್ಯ ಹಾಗೂ ಪ್ರಕರಣಗಳಿಗಿಂತಲೂ ಪ್ರಬಲವೆಂದೇ ಹೇಳಬೇಕು.

ಅಥವಾ ತತ್ವಪ್ರಕಾಶಿಕೆಯಲ್ಲಿ ಕ್ರಮವು ಅವಿವಕ್ಷಿತ ಎಂಬ ಹೇಳಿಕೆಗೆ ಸ್ವರಸವಾಗಿ ಹೀಗೂ ಅರ್ಥ ಹೇಳಬಹುದು - ಪುರಾಣದಲ್ಲಿ ಕೆಲವೊಂದು ಮಾತುಗಳು ಮೋಹಕವಾಗಿರುತ್ತವೆ. ಅಯೋಗ್ಯರಿಗೆ ಅರ್ಥವಾಗಬಾರದೆಂಬ ದೃಷ್ಟಿಯಿಂದ ಆಪಾತತಃ ವಿರೋಧರೂಪವಾದ ವಾಕ್ಯಗಳನ್ನು ವ್ಯಾಸರು ಪುರಾಣಗಳಲ್ಲಿ ಪ್ರಯೋಗಿಸುತ್ತಾರೆ. ಪ್ರಕೃತ ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ ಎಂಬ ಕ್ರಮದಲ್ಲಿ ತಾತ್ಪರ್ಯಲಿಂಗಗಳನ್ನು ಹೇಳಿ, ಮುಂದೆ 'ಪೂರ್ವಪೂರ್ವಂ ಬಲೀಯಃ ಸ್ಯಾತ್' ಎಂಬುದಾಗಿ ಹಿಂದಿನದ್ದೇ ಪ್ರಬಲವೆಂದು ಹೇಳಿದ್ದಾರೆ. ಇವುಗಳ ಮಧ್ಯದಲ್ಲಿ ಸಮಾಖ್ಯೆಯ ಕ್ರಮವನ್ನು ಪುರಾಣಕಾರರು ವಿವಕ್ಷಿಸಿಲ್ಲ. ಅದನ್ನು ತತ್ವಪ್ರಕಾಶಿಕಾಕಾರರು ಸಮಾಖ್ಯಾವಿಷಯದಲ್ಲಿ ಕ್ರಮವು ಅವಿವಕ್ಷಿತವೆಂದು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ 'ಪೂರ್ವಂ ಪೂರ್ವಂ ಬಲೀಯಃ ಸ್ಯಾತ್' ಎಂಬ ಮಾತಿಗೆ ಸಮಾಖ್ಯೆಯನ್ನು ಬಿಟ್ಟು ಉಳಿದ ವಿಷಯದಲ್ಲಿ ಹಿಂದಿನದಕ್ಕೆ ಪ್ರಾಬಲ್ಯವೆಂಬುದಾಗಿ ತಿಳಿಯಬೇಕು.

## ಶ್ರುತಿ

ನಾಮಾತ್ಮಕವಾದ ಶಬ್ದವೇ ಶ್ರುತಿ. ದೇವದತ್ತ, ಯಜ್ಞದತ್ತ ಮೊದಲಾದ ಶಬ್ದಗಳೇ ಶ್ರುತಿಯೆಂದು ಕರೆಸಿಕೊಳ್ಳುತ್ತವೆ. ವೇದದಲ್ಲಿ ಪುರುಷ, ಆತ್ಮ ಮೊದಲಾದ ಶಬ್ದಗಳು ಭಗವಂತನ ಶ್ರುತಿರೂಪವಾಗಿದೆ.

## ಲಿಂಗ

ಅಸಾಧಾರಣಧರ್ಮವೇ ಲಿಂಗ. ಬಿಳಿಬಟ್ಟೆ ತೊಟ್ಟವನು, ಕುಳಿತಿರುವವನು, ಅಡುಗೆಮಾಡುವವನು ಇವುಗಳೆಲ್ಲಾ ಲಿಂಗರೂಪವಾದ ಪ್ರಮಾಣವಾಗಿದೆ.

ಪರೋವರೀಯತ್ವ, ಸಮಸ್ತಲೋಕಧಾರಕತ್ವ ಮೊದಲಾದವುಗಳು ವೇದದಲ್ಲಿರುವ ಭಗವಂತನ ಅಸಾಧಾರಣಲಿಂಗಗಳು.

## ವಾಕ್ಯ

ನಿರಾಕಾಂಕ್ಷವಾದ ಪದಗಳ ಸಮೂಹವೇ ವಾಕ್ಯ. ಬೃಹದಾರಣ್ಯಕದಲ್ಲಿ ಪ್ರಸಕ್ತವಾಗುವ 'ಪ್ರಾಣೇಷು ಹೃದ್ಯಂತಃ ಜ್ಯೋತಿಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿ ಎಂದರೆ ಪರಮಾತ್ಮ, ಏಕೆಂದರೆ 'ಕತಮಃ ಆತ್ಮಾ' ಎಂಬುದಾಗಿ ಆತ್ಮನು ಹೇಗಿದ್ದಾನೆ? ಎಂದು ಪ್ರಶ್ನಿಸಿದರೆ, 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತಃ' ಎಂಬ ಮುಂದಿನ ವಾಕ್ಯಗಳಿಂದ ನಿರ್ಣಯಿಸಲಾಗಿದೆ. 'ಯೋಽಯಂ ವಿಜ್ಞಾನಮಯಃ' ಇತ್ಯಾದಿ ಪದಗಳ ಸಮೂಹವಾದ್ದರಿಂದ ಇದು ವಾಕ್ಯ ಪ್ರಮಾಣವಾಗಿದೆ.

## ಪ್ರಕರಣ

ಒಂದೇ ಅರ್ಥವನ್ನು ತಿಳಿಸುವ ಅನೇಕ ವಾಕ್ಯಗಳ ಗುಂಪು 'ಪ್ರಕರಣ' ಎನಿಸುತ್ತದೆ. 'ಸಃ ಯದ್ಯದೇವ ಅಸೃಜತ ತತ್ತದತ್ತುಮಧ್ರಿಯತ' ಇತ್ಯಾದಿ ಬೃಹದಾರಣ್ಯಕದಲ್ಲಿ ಬರುವ ಲೋಕಸಂಹಾರಕತ್ವ ಮೊದಲಾದ ಧರ್ಮಗಳನ್ನು ಹೇಳುವ ಅನೇಕ ವಾಕ್ಯಗಳ ಸಮೂಹರೂಪವಾದ್ದರಿಂದ ಇದು ಪ್ರಕರಣವಾಗಿದೆ.

## ಸಮಾಖ್ಯಾ

ಮತ್ತೊಂದು ಕಡೆ ಸಮಾನವಾದ ವಚನವು 'ಸಮಾಖ್ಯಾ' ಎನಿಸುತ್ತದೆ. 'ಯ ಆತ್ಮನಿ ತಿಷ್ಠನ್ ಆತ್ಮನೋಽಂತರಃ' ಎಂದು ಹೇಳಿ, 'ಯಃ ವಿಜ್ಞಾನಿ ತಿಷ್ಠನ್' ಎಂದು ಮತ್ತೊಂದು ಕಡೆ ಹೇಳಿದರೆ ಇದು ಸಮಾನವಾದ ವಚನವಾದ್ದರಿಂದ 'ಸಮಾಖ್ಯಾ' ಎನಿಸುತ್ತದೆ.

ಈ ವಿಷಯದಲ್ಲಿ ವಿದ್ವಾಂಸರು ಇನ್ನೂ ಹೆಚ್ಚಿನ ವಿಚಾರವನ್ನು ಮಾಡುವ ಅವಶ್ಯಕತೆಯಿದೆ. ಇದು ಒಂದು ಮುಖದ ಚಿಂತನೆ ಮಾತ್ರ.

## ಶ್ರುತ್ಯಾದಿಗಳ ಲಕ್ಷಣ

ಶ್ರುತ್ಯಾದಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದರೆ ಹಿಂದಿನದ್ದೇ ಅನುಸರಣೀಯವಾಗುತ್ತದೆ. ಮುಂದಿನದ್ದು ದುರ್ಬಲವಾಗುತ್ತದೆ. ಆಗ ಹಿಂದಿನ ಪ್ರಮಾಣವನ್ನು ಅನುಸರಿಸಿ ಮುಂದಿನ ಪ್ರಮಾಣಕ್ಕೆ ವ್ಯಾಖ್ಯಾನ ಮಾಡಬೇಕು. ಪ್ರಕೃತ ವಾಮನಶ್ರುತಿಯು

ಪ್ರಾಣವ್ಯವಸ್ಥಾಪಕತ್ವ ಎಂಬ ಲಿಂಗಕ್ಕಿಂತಲೂ ಪ್ರಬಲವಾಗಿದೆ. ಆದ್ದರಿಂದ ಈ ವಾಮನಶ್ರುತಿಗೆ ಅನುಸಾರಿಯಾಗಿ ಪ್ರಾಣವ್ಯವಸ್ಥಾಪಕತ್ವಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬೇಕು.

### ನಿರವಕಾಶವೇ ಪ್ರಬಲ

ವಾಸ್ತವಿಕವಾಗಿ ಶ್ರುತಿ, ಲಿಂಗ, ಪ್ರಕರಣ, ವಾಕ್ಯ, ಸಮಾಖ್ಯಾ ಇವುಗಳಲ್ಲಿ ಹಿಂದಿನದ್ದೇ ಪ್ರಬಲವಾಗಿರುತ್ತವೆ ಎಂಬುದು ಸಾಮಾನ್ಯ ನಿಯಮ. ಒಂದುವೇಳೆ ಲಿಂಗವು ನಿರವಕಾಶವಾಗಿ, ಶ್ರುತಿಯು ಸಾವಕಾಶವಾದರೆ ಲಿಂಗವೇ ಬಲಿಷ್ಠವೆಂದು ತಿಳಿಯಬೇಕು. ಇದರಂತೆ ಶ್ರುತಿ, ಲಿಂಗ, ವಾಕ್ಯ, ಪ್ರಕರಣ ಇವೆಲ್ಲವೂ ಸಾವಕಾಶವಾಗಿ, ಸಮಾಖ್ಯೆಯು ನಿರವಕಾಶವಾಗಿದ್ದರೆ. ಇವೆಲ್ಲಕ್ಕಿಂತ ಸಮಾಖ್ಯೆಯೇ ಪ್ರಬಲವೆಂದು ತಿಳಿಯಬೇಕು. ಆದ್ದರಿಂದ ಈ ಐದರಲ್ಲಿ ಯಾವುದು ನಿರವಕಾಶವೋ, ಅದಕ್ಕೆ ಪ್ರಾಬಲ್ಯವನ್ನು ಹೇಳಬೇಕು.

ಪ್ರಕೃತ ಪ್ರಾಣವ್ಯವಸ್ಥಾಪಕತ್ವ ಎಂಬ ಲಿಂಗವು ಮುಖ್ಯಪ್ರಾಣನಲ್ಲಿ ನಿರವಕಾಶವಾಗದ ಕಾರಣ ವಿಷ್ಣುವಿನಲ್ಲೇ ಸಾವಕಾಶವಾದ ಕಾರಣ ಲಿಂಗವನ್ನು ನಿರವಕಾಶತ್ವೇನ ಪ್ರಬಲವಾಗಿದೆ ಎಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಸಾಮಾನ್ಯನಿಯಮದಂತೆ ಲಿಂಗಕ್ಕಿಂತಲೂ ವಾಮನಶ್ರುತಿಯೇ ಪ್ರಬಲವೆಂದು ವಿವಕ್ಷಿಸಬೇಕು. (ಸಂಗ್ರಹ)

### ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

### ಅಧಿಕರಣ ಸಂಗತ್ಯಾದಿ ವಿಚಾರ

**तत्वप्रकाशिका – ।। शब्दादेव प्रमितः ।। १-३-२४ ।।**

**अत्र प्रेरकत्वसाम्येन भगवति वायौ च साधारणस्येशाननाम्नो विष्णौ समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयसंशयौ च सूचयति – विष्णुरेवेति ।।**

ಈ ಅಧಿಕರಣದಲ್ಲಿ 'ಈಶಾನ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಪ್ರೇರಕತ್ವಧರ್ಮವು ಸಮಾನವಾಗಿ

ಶ್ರುತವಾದ್ದರಿಂದ 'ಈಶಾನ' ಶಬ್ದವು ಉಭಯಸಾಧಾರಣವಾಯಿತು. ಆದ್ದರಿಂದಲೇ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳಿರುತ್ತವೆ ಎಂದು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣ-ಸಂಗತಿ ಹಾಗೂ ವಿಷಯ ಸಂಶಯಗಳನ್ನು ಸೂಚನೆ ಮಾಡುತ್ತಿದ್ದಾರೆ 'ವಿಷ್ಣುರೇವ' ಇತ್ಯಾದಿ ಭಾಷ್ಯದಿಂದ.

### ಈಶಾನಶಬ್ದ ಪ್ರತಿಪಾದ್ಯನಾದ ವ್ಯಕ್ತಿಯೇ ಜಿಜ್ಞಾಸ್ಯ

**ತत्वप्रकाशिका – 'अथातो ब्रह्मजिज्ञासा' इति जिज्ञास्यत्वं विष्णोरुक्तम्। तज्जिज्ञास्यत्वमीशानस्य काठके प्रतीयते ।**

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕೆಂದು ಸಮರ್ಥಿಸಲಾಯಿತು. ಆದರೆ ಕಾಠಕದಲ್ಲಿ 'ಈಶಾನ' ಶಬ್ದ ಪ್ರತಿಪಾದ್ಯ-ವ್ಯಕ್ತಿಯನ್ನು ಜಿಜ್ಞಾಸ್ಯನೆಂದು ಹೇಳಲಾಗಿದೆ.

### 'ಅಂಗುಷ್ಠಮಾತ್ರಃ' ಇತ್ಯಾದಿ ವಿಷಯವಾಕ್ಯ

**तत्वप्रकाशिका – 'अङ्गुष्ठमात्रः पुरुषो मध्य आत्मनि तिष्ठति । ईशानो भूतभव्यस्य' इत्युक्त्वा 'ऊर्ध्वं प्राणम्' इत्यादौ 'विश्वेदेवा उपासते' इति जिज्ञासोपासनयोरैक्यात् ।**

'ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ' 'ಅಂಗುಷ್ಠಪ್ರಮಾಣವುಳ್ಳ ಭೂತಭವಿಷ್ಯತ್‌ಕಾಲೀನವಾದ ವಿಷಯಗಳನ್ನು ಪ್ರೇರಣೆ ಮಾಡುವ ದೇಹದ ಮಧ್ಯದಲ್ಲಿ ಕುಳಿತಿರುವವನೇ ಈಶಾನಶಬ್ದಪ್ರತಿಪಾದ್ಯನು' ಎಂದು ಹೇಳಿ ಮುಂದೆ 'ಊರ್ಧ್ವಂ ಪ್ರಾಣಮ್' ಇತ್ಯಾದಿ ಮಂತ್ರದಿಂದ ಆ ಈಶಾನನನ್ನು 'ವಿಶ್ವೇದೇವಾಃ ಉಪಾಸತೇ' ಎಂಬುದಾಗಿ ಸರ್ವದೇವತೆಗಳೂ, ಉಪಾಸನೆ ಮಾಡುತ್ತಾರೆಂದು ಹೇಳಲಾಗಿದೆ. ಜಿಜ್ಞಾಸೆಗೂ, ಉಪಾಸನೆಗೂ ಐಕ್ಯವಿರುವುದರಿಂದ ಇಂತಹ ಈಶಾನನನ್ನೇ ಜಿಜ್ಞಾಸೆ ಮಾಡಬೇಕೆಂದು ಹೇಳಿದಂತಾಯಿತು.

### ಜಿಜ್ಞಾಸೆ ಹಾಗೂ ಉಪಾಸನೆ ಎರಡೂ ಒಂದೇ

**तत्वप्रकाशिका – श्रवणादिरूपविचारो हि जिज्ञासोच्यते । उपासना च सैव ।**

ಶ್ರವಣಾದಿರೂಪ ವಿಚಾರಣೆ ಜಿಜ್ಞಾಸೆ ಎನಿಸಿಕೊಳ್ಳುತ್ತದೆ. ಉಪಾಸನೆಯೂ ಶ್ರವಣಾದಿರೂಪದ ಜಿಜ್ಞಾಸೆಯಾದ್ದರಿಂದ, ಉಪಾಸನೆಗೆ ಹಾಗೂ ಜಿಜ್ಞಾಸೆನೆಗೆ ಐಕ್ಯವಿದೆ ಎಂದು ತಿಳಿಯಬೇಕು.

### ಉಪಾಸನೆಯು ಎರಡು ವಿಧ

**तत्वप्रकाशिका – यदाहुः ।**

**'सोपासना च द्विविधा शास्त्राभ्यासस्वरूपिणी ।**
**ध्यानरूपा परा चैव तदङ्गं धारणादिकम् ।।' इति।**

ಉಪಾಸನೆಯು ಜಿಜ್ಞಾಸಾರೂಪವಾಗಿಯೇ ಇದೆ ಎನ್ನಲು ಶ್ರೀಮದಾಚಾರ್ಯರ ಮಾತೇ ಆಧಾರವಾಗಿದೆ. 'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ । ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಮ್' ಉಪಾಸನೆ ಎರಡು ಪ್ರಕಾರದಲ್ಲಿರುತ್ತದೆ, ಒಂದು ಶಾಸ್ತ್ರಾಭ್ಯಾಸ ರೂಪವಾದದ್ದು, ಮತ್ತೊಂದು ಯಮ, ನಿಯಮ ಪ್ರಾಣಾಯಾಮಾದಿ ಅಂಗಗಳಿಂದ ಕೂಡಿರುವ ಧ್ಯಾನರೂಪವಾದದ್ದು.

### ಸರ್ವದೇವೋಪಾಸ್ಯತ್ವಕ್ಕೆ ವಿಷಯನಾದ ಈಶಾನನೇ ಅಧಿಕರಣಕ್ಕೆ ವಿಷಯ

**तत्वप्रकाशिका – स च यदि विष्णोरन्यः स्यात्तदा जिज्ञास्यत्वं चान्यस्यैव प्रसज्जते ? इत्यवश्यं निर्णयः । स ईशानोऽत्र विषयः ।**

ಹೀಗೆ ಉಪಾಸನೆಗೆ ಅಂದರೆ ಜಿಜ್ಞಾಸೆಗೆ ವಿಷಯನಾದವನು ವಿಷ್ಣುವಿಗಿಂತ ಬೇರೆಯವನಾದರೆ ಜಿಜ್ಞಾಸ್ಯತ್ವವೂ ಕೂಡ ಅವನಲ್ಲೇ ಬರುತ್ತದೆ. ಆದುದರಿಂದ ಸರ್ವದೇವೋಪಾಸ್ಯತ್ವವು ಯಾರ ಧರ್ಮವೆಂದು ಅವಶ್ಯವಾಗಿ ವಿವರಣೆ ಮಾಡಬೇಕು. ಆದ್ದರಿಂದ ಸರ್ವದೇವೋಪಾಸ್ಯತ್ವಕ್ಕೆ ವಿಷಯನಾದ ಈಶಾನನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ.

ಅಧಿಕರಣದ ಸಂದೇಹ

**तत्वप्रकाशिका – किं विष्णुर्वायुर्वेति सन्देहः । प्रागुक्तसाधारण्यमेव सन्देहबीजमिति भावः ।**

'ಈಶಾನ' ಶಬ್ದಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ವಾಯುವೋ ? ಎಂದು ಸಂದೇಹ. ಹಿಂದೆ ಹೇಳಲ್ಪಟ್ಟ ಪ್ರೇರಕತ್ವಧರ್ಮವು ಸಾಧಾರಣವಾಗಿ ಇಬ್ಬರಲ್ಲಿಯೂ ಇರುವುದೇ ಸಂದೇಹಕ್ಕೆ ಕಾರಣ.

ಗರ್ಭಸ್ರಾವದಿಂದಲೇ ರುದ್ರನು ವಿವಕ್ಷಿತನಲ್ಲ

**तत्वप्रकाशिका – ईशानशब्दस्य रुद्रे प्रसिद्धावपि तद्विषयसंशयः सर्वदेवोपास्यत्वलिङ्गभिया गर्भस्रावेणैव निवृत्तः ।**

ವಸ್ತುತಃ 'ಈಶಾನ' ಶಬ್ದವು ರುದ್ರದೇವರಲ್ಲೂ ಪ್ರಸಿದ್ಧವಾಗಿದೆ. ಆದ್ದರಿಂದ ರುದ್ರವಿಷಯಕವಾದ ಸಂಶಯವನ್ನೂ ಕೂಡ ತೋರಿಸಬೇಕಿತ್ತಲ್ಲವೆ? ಎಂಬ ಪ್ರಶ್ನೆಯು 'ಸರ್ವದೇವೋಪಾಸ್ಯತ್ವ' ಧರ್ಮ ಹೇಳಿರುವುದರಿಂದ ರುದ್ರನಲ್ಲಿ ಈ ಧರ್ಮವು ಇಲ್ಲದ ಕಾರಣ ರುದ್ರದೇವರು ಸಂದೇಹಕೋಟಿಯಲ್ಲಿ ವಿವಕ್ಷಿತರಾಗುವುದಿಲ್ಲವೆಂದು ಗರ್ಭಸ್ರಾವ-ದಿಂದಲೇ ಪರಿಹಾರವಾಯಿತು.

ಯುಕ್ತಿಬದ್ಧವಾದ ಪೂರ್ವಪಕ್ಷ

**तत्वप्रकाशिका – य उन्नयति तमित्यन्वयः । सयुक्तिकं पूर्वपक्षयति – स चेति ।।**

ಶ್ರುತಿಯಲ್ಲಿ 'ಯ ಉನ್ನಯತಿ ತಮ್' 'ಯಾರು ಮೇಲಕ್ಕೆ ಒಯ್ಯುತ್ತಾರೋ ಅವರು' ಎಂದು ಅನ್ವಯವನ್ನು ತಿಳಿಯಬೇಕು. ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಸ ಚ' ಇತ್ಯಾದಿ ಭಾಷ್ಯದ ಮಾತುಗಳಿಂದ ತೋರಿಸುತ್ತಿದ್ದಾರೆ.

ವಾಯುದೇವನೇ ಈಶಾನನೆಂದು ಪೂರ್ವಪಕ್ಷ

**तत्वप्रकाशिका – स चेशानो वायुरेव भवेत् । ईशानस्योर्ध्वं प्राणमुन्नयतीति वाक्ये प्राणव्यवस्थापकत्वमध्यमत्वसर्वदेवोपास्यत्वश्रवणात्।**

ಶ್ರುತ್ಯುಕ್ತನಾದ ಈಶಾನನು ವಾಯುದೇವರೇ ಆಗಿದ್ದಾರೆ. ಏಕೆಂದರೆ 'ಊರ್ಧ್ವಂ ಪ್ರಾಣಮ್ ಉನ್ನಯತಿ' ಎಂಬ ವಾಕ್ಯದಲ್ಲಿ 'ಪ್ರಾಣವ್ಯವಸ್ಥಾಪಕತ್ವ', 'ಮಧ್ಯಮತ್ವ' ಮತ್ತು 'ಸರ್ವದೇವೋಪಾಸತ್ವ' ಧರ್ಮಗಳನ್ನು ಈಶಾನನಲ್ಲಿ ಹೇಳಿರುವುದರಿಂದ.

ಈಶಾನಶಬ್ದಕ್ಕೆ

**तत्वप्रकाशिका – न चैतल्लिङ्गश्रवणेऽपि कुतोऽयं वायुर्विष्णुः किं न स्यादिति ।**

ಈ ಲಿಂಗಗಳು ಇದ್ದರೂ ಕೂಡ 'ಈಶಾನ' ಶಬ್ದಕ್ಕೆ ವಾಯುದೇವರೇ ಎಂಬ ಅರ್ಥವನ್ನು ಸ್ವೀಕರಿಸಲು ಏನು ಕಾರಣ? 'ಈಶಾನ' ಪದಕ್ಕೆ 'ವಿಷ್ಣು' ಎಂಬ ಅರ್ಥವನ್ನು ಏಕೆ ಸ್ವೀಕರಿಸಬಾರದು?

ಪ್ರಾಣವ್ಯವಸ್ಥಾಪಕತ್ವವು ಮುಖ್ಯಪ್ರಾಣನದ್ದೇ ಲಿಂಗ

**तत्वप्रकाशिका – 'यथा सम्राडेवाधिकृतान्विनियुङ्क्ते एतान् ग्रामान् अधितिष्ठस्वैतान् ग्रामाधितिष्ठस्व इत्येवमेवैष प्राण इतरान् प्राणान् पृथक्पृथगेव सन्निधत्ते' इति प्राणव्यवस्थापकत्वस्य वायुलिङ्गत्वश्रवणात् ।**

ಹೀಗೆ ಪ್ರಶ್ನಿಸಬಾರದು ಏಕೆಂದರೆ, 'ಯಥಾ ಸಮ್ರಾಡೇವಾಧಿಕೃತಾನ್ವಿನಿಯುಂಕ್ತ ಏತಾನ್ ಗ್ರಾಮಾನ್ ಅಧಿತಿಷ್ಠಸ್ವೈತಾನ್ ಗ್ರಾಮಾಧಿತಿಷ್ಠಸ್ವ ಇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್‌ಪೃಥಗೇವ ಸನ್ನಿಧತ್ತೇ' 'ಯಾವರೀತಿಯಾಗಿ ಸಾರ್ವಭೌಮನಾದ ರಾಜನು ತನ್ನ ಅಧಿಕಾರದಲ್ಲಿರುವ ಪುರುಷರನ್ನು ಕುರಿತು, ಈ ಊರುಗಳ ಮೇಲೆ ನೀನು ಅಧಿಕಾರನಿಯಂತ್ರಣ ಮಾಡು ಎಂದು ನಿಯೋಗ ಮಾಡುತ್ತಾನೆ. ಅದೇ ರೀತಿ ಮುಖ್ಯಪ್ರಾಣದೇವರು ಪ್ರಾಣ, ಅಪಾನ

ಮೊದಲಾದ ಅಧೀನ ವಾಯುದೇವತೆಗಳನ್ನು ಶರೀರದಲ್ಲಿ ಬೇರೆ ಬೇರೆ ಸ್ಥಳಗಳನ್ನು ನಿಯಂತ್ರಣ ಮಾಡಲು ಆಜ್ಞೆ ಮಾಡುತ್ತಾರೆ. ಈ ರೀತಿಯಾಗಿ ಪ್ರಾಣ, ಅಪಾನಾದಿಗಳನ್ನು ವ್ಯವಸ್ಥೆ ಮಾಡುವ ವಾಯುದೇವರ ಧರ್ಮವನ್ನು ಇಲ್ಲಿ ಹೇಳಲಾಗಿದೆ.

ಪ್ರಾಣನಲ್ಲಿ ಇರುವ ಮಧ್ಯಮತ್ವ ಧರ್ಮ

**तत्वप्रकाशिका – 'अथेममेव नाप्नोद्योऽयं मध्यमः प्राणः' इति मध्यमत्वस्य तद्धर्मत्वोक्तेः ।**

ಅದರಂತೆ 'ಅಥೇಮಮೇವ ನಾಪ್ನೋದ್ಯೋಯಂ ಮಧ್ಯಮಃ ಪ್ರಾಣಃ' 'ಮೃತ್ಯು' ಎಂಬ ಪ್ರಾಣನು ಮಧ್ಯಮ ಪ್ರಾಣನೆನಿಸಿದ್ದಾನೆ, ಅಂದರೆ ಚಕ್ಷುರಾದಿ ದೇವತೆಗಳಿಗಿಂತ ಶ್ರೇಷ್ಠನೂ ಪರಮಾತ್ಮನಿಗಿಂತ ಕನಿಷ್ಠನೂ ಆಗಿದ್ದಾನೆಂದರ್ಥ. ಇಂಥಹ ಪ್ರಾಣನು ಪ್ರಾಪ್ತನಾಗಲಿಲ್ಲ'. ಈ ಶ್ರುತಿಯಲ್ಲಿ ಪ್ರಾಣನಿಗೆ ಮಧ್ಯಮತ್ವ ಧರ್ಮವನ್ನು ಹೇಳಲಾಗಿದೆ.

ಸರ್ವದೇವೋಪಾಸ್ಯತ್ವವು ವಾಯುದೇವನಲ್ಲಿಯೂ ಇದೆ

**तत्वप्रकाशिका – कुविदङ्गेति तस्य सर्वदेवोपास्यत्वप्रतीतेश्च ।।**

ಮತ್ತು 'ಕುವಿದಂಗ' ಎಂಬ ಮಂತ್ರದಿಂದ ಆ ವಾಯದೇವರಿಗೆ ಸರ್ವದೇವೋಪಾಸತ್ವವೂ ಕೂಡ ಶ್ರುತವಾಗಿದೆ.

'ಈಶಾನ' ಎಂದರೆ ವಾಯುದೇವರೇ ?

**तत्वप्रकाशिका – अतो वाय्वेकनिष्ठलिङ्गश्रवणादीशानो वायुरेवेति हेतोस्तस्यैव जिज्ञास्यत्वम् ।**

ಆದ್ದರಿಂದ ಕೇವಲ ವಾಯುದೇವರಲ್ಲಿ ಮಾತ್ರ ಇರುವ ಧರ್ಮವನ್ನು 'ಊರ್ಧ್ವಂ ಪ್ರಾಣಂ' ಎಂಬ ಶ್ರುತಿಯಲ್ಲಿ ಹೇಳಿರುವ ಕಾರಣ 'ಈಶಾನ' ಶಬ್ದದಿಂದ ಪ್ರತಿಪಾದ್ಯರಾದವರು ವಾಯುದೇವರೇ ಆಗುತ್ತಾರೆ. ಅವರೇ ಜಿಜ್ಞಾಸ್ಯರೂ ಕೂಡ ಆಗುತ್ತಾರೆ ಎಂದು ತಿಳಿಯಬೇಕು.

